ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ ಭಾಗ–೫

# ಖಾಂಡವ ದಹನ ಪ್ರಕರಣ

## ಅಧ್ಯಾಯ ೧೭ ರಿಂದ ೨೦




ಅನುವಾದಕರು :

ಆರ್. ಎಚ್. ಕುಲಕರ್ಣಿ, *M.A.,M.Ed.*



ಪ್ರಕಾಶಕರು :

ಸಾಹಿತ್ಯ ಸದನ, ಗುಲಬರ್ಗಾ – ೫೮೫ ೧೦೨

೧೯೯೫

# ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ ಭಾಗ–೫

## ಭಾರತ ಖಾಂಡವ ದಹನ ಪ್ರಕರಣ

### ಪರಾಮರ್ಶೆ


ಅನುವಾದಕರು :

**ಆರ್. ಎಚ್. ಕುಲಕರ್ಣಿ,** *M.A., M.Ed.*



ಪ್ರಕಾಶಕರು :

**ಸಾಹಿತ್ಯ ಸದನ**

**ಎಂ. ಎಸ್. ಕೆ. ಮಿಲ್ ರೋಡ, ಗುಲಬರ್ಗಾ – ೫೮೫ ೧೦೨**

ಪ್ರಥಮ ಮುದ್ರಣ : ೧,೦೦೦ ಪ್ರತಿಗಳು.
ಪುಟಗಳು : ೧೬ + ೨೬೪.



ತಿರುಮಲ ತಿರುಪತಿ ದೇವಸ್ಥಾನದ ಧನ ಸಹಾಯ ಪಡೆದು ಈ ಗ್ರಂಥವನ್ನು ಮುದ್ರಿಸಲಾಗಿದೆ.
ಇದರ ಮಾರಾಟದಿಂದ ಬಂದ ಹಣವನ್ನು ಮುಂದಿನ ಪ್ರಕಟಣೆಗಳಿಗೆ ಬಳಸಲಾಗುವುದು.

ಪುಸ್ತಕ ಪ್ರಾಪ್ತಿಸ್ಥಾನ :

ಆರ್. ಎಚ್. ಕುಲಕರ್ಣಿ,
'ಸಾಹಿತ್ಯ ಸದನ', C/o ವೆಂಕಟಾದ್ರಿ
ಎಂ.ಎಸ್.ಕೆ. ಮಿಲ್ ರೋಡ, ಗುಲಬರ್ಗಾ – ೫೮೫ ೧೦೨

ಬೆಲೆ : 75/- ರೂ.ಗಳು

ಮುದ್ರಕರು : ವಿಕ್ರಮ ಕಂಪ್ಯೂಟರ್ಸ್, ಕೆ. ಸಿ. ರಾಣಿ ರೋಡ, ಗದಗ – ೫೮೨ ೧೦೧

# ಕೃತಿ ಸಮರ್ಪಣೆ



ಕಾವ ಗದುಗಿನ ಶ್ರೀವೀರನಾರಾಯಣ

*ನಿತ್ಯ ನಿಗಮಾತೀತ ನಿರ್ಗುಣ । ಭೃತ್ಯವತ್ಸಲ ಭಯವಿನಾಶನ ।*
*ಸತ್ಯಕಾಮ ಶರಣ್ಯ ಶಾಮಲ ಕೋಮಲಾಂಗ ಸುಖಿ ।*
*ಮತ್ತನಂದದಿ ಮರ್ತ್ಯರೊಳ ಹೊರ । ಗೆತ್ತ ನೋಡಲು ಸುತ್ತುತಿಪ್ಪನು ।*
*ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ಪರಮಾಪ್ತ ॥*

ಇಂತಹ ಪರಮ ಆಪ್ತನಾದ ಶ್ರೀ ಗದುಗಿನ ವೀರನಾರಾಯಣನ ಪಾದಾರವಿಂದಕ್ಕೆ
ಈ ಕೃತಿ ಸಮರ್ಪಣೆ.

# ಆಶೀರ್ವಾದ

भारतं सर्वशास्त्रेषु भारते गीतिका वरा ।।
विष्णो सहस्रनामं च ज्ञेयं पाटयं मुमुक्षुभिः ।।

ಎಲ್ಲ ಶಾಸ್ತ್ರಗಳಲ್ಲೂ ಭಾರತ ಶ್ರೇಷ್ಠ. ಅದರಲ್ಲೂ ಭಗವದ್ಗೀತಾ ಹಾಗೂ ವಿಷ್ಣು ಸಹಸ್ರನಾಮ ಅವಶ್ಯವಾಗಿ ಮೋಕ್ಷಾಪೇಕ್ಷಿಗಳು ಇದನ್ನು ಶ್ರವಣ ಮನನಗಳನ್ನು ಇವುಗಳನ್ನು ಮಾಡಲೇಬೇಕೆಂದು ವಿಧಿಸಿದ್ದಾರೆ ಆದರೆ ಈ ಮಹಾಭಾರತ, ಶ್ರೀಮದಾಚಾರ್ಯರು ಅಪ್ಪಣೆ ಕೊಡಿಸಿದಂತೆ,

क्वचित् ग्रंथान्: प्रक्षेपंति क्वचिदंतरितानपि ।
कुर्युः क्वचिच व्यत्यासं कोटयेशेपि नविप्यते ।।

ಎಂದು ಹೇಳಿ, ಎಷ್ಟೋ ಗ್ರಂಥಗಳನ್ನು ತೆಗೆದು ಹಾಕಿಬಿಟ್ಟಿದ್ದಾರೆ. ಎಷ್ಟೋ ಶ್ಲೋಕಗಳನ್ನು ಮಾಡಿ ಹಾಕಿದ್ದಾರೆ. ಅಂತೂ ಕೋಟಿಭಾಗವೂ ಇಲ್ಲ. ಆದಕಾರಣ ನಾವು ವೇದವ್ಯಾಸರ ಆಜ್ಞಾನುಸಾರವಾಗಿ ಶ್ರೀಮನ್ಮಹಾಭಾರತ ನಿರ್ಣಯವನ್ನು ಮಾಡುತ್ತಿದ್ದೇವೆ ಎಂದು ಅಪ್ಪಣೆ ಕೊಡಿಸಿದ್ದಾರೆ. ಇಂಥ ನಿರ್ಣಯ ತೆಗೆದುಕೊಳ್ಳುವದೇ ಕಷ್ಟ. ಸಂಸ್ಕೃತ ವಾಖ್ಯಾನವಿದೆ ಅದೂ ಕಷ್ಟ. ಇಂಥ ಸಂದರ್ಭದಲ್ಲಿ ಶ್ರೀರಾಘವೇಂದ್ರರಾವ ಕುಲಕರ್ಣಿ ಇವರು ಈ ಮಹಾಗ್ರಂಥವನ್ನು ಕನ್ನಡೀಕರಿಸಿದ್ದಾರೆ. ಅಲ್ಲದೇ ಲೌಕಿಕವಾದ ಅನೇಕ ದೃಷ್ಟಾಂತಗಳನ್ನು ಕೊಟ್ಟು ಸಾಮಾನ್ಯ ಜನರಿಗೂ ಆಚಾರ್ಯರ ಅಭಿಪ್ರಾಯವಾಗುವಂತೆ ಬರೆದಿದ್ದಾರೆ. ಹಾಗೆಯೇ ಅಧ್ಯಾಯದ ಕೊನೆಯ ಭಾಗದಲ್ಲಿ ಕಥಾರೂಪವಾಗಿ ಅಧ್ಯಾಯದ ಸಾರವನ್ನು ಬಹಳ ಹೃದಯಂಗಮವಾಗಿ ಬರೆದಿದ್ದಾರೆ. ಅನೇಕ ಸಂದರ್ಭಗಳಲ್ಲಿ ನಮಗೆ ಈಗಿನ ಕಾಲಕ್ಕೆ ಏನು ಸಂದೇಶ ಅನ್ನುವದನ್ನು ಮರೆಯದೇ ಇರುವಂತೆ, ಹೃದಯಕ್ಕೆ ಹತ್ತುವಂತೆ ಬರೆದಿದ್ದಾರೆ. ಇಷ್ಟು ವಯಸ್ಸಾದರೂ ಇನ್ನೂ ಯುವಕರಂತೆ ಬರೆದು ಓದಿ, ಮುದ್ರಿಸಿ, ಎಲ್ಲರಿಗೂ ಕಳಿಸಿ ಅವರ ಅನಿಸಿಕೆಗಳನ್ನು ತಿಳಿಯುವ ಆಸಕ್ತಿ. ಇದೆಲ್ಲವನ್ನು ನೋಡಿ ನಮಗೆ ಪರಮಾನಂದವಾಗಿದೆ.

ಈ ಲೇಖಕರಿಗೆ ಮಧ್ವಾಂತರ್ಗತ ಶ್ರೀಕೃಷ್ಣ; ಮಾರ್ಕಂಡೇಯರಂತೆ ಆಯುಸ್ಸು ಹಾಗೂ ಎಲ್ಲ ಭಾಗ್ಯವನ್ನು ಕೊಟ್ಟು ಇನ್ನೂ ಆಚಾರ್ಯರ ಅನೇಕ ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿ ಬರೆದು ಮಹೋಪಕಾರ ಮಾಡಿಸಲಿ. तमसोमाज्योतिर्गमय ಎಂಬಂತೆ ಜ್ಞಾನಜ್ಯೋತಿ ಬೆಳಗಿಸಲಿ ಎಂದು ಹಾರೈಸುತ್ತಾ ಬರೆದ ಶುಭಶಂಸನಾ ಪತ್ರಿಕಾ ಇದೆ.

ಹೈದ್ರಾಬಾದ್ ಕ್ಯಾಂಪ್
೭–೧೧–೯೨

– **ಕೃಷ್ಣಾಚಾರ್ಯ ಖೇಡ**
ತರ್ಕವೇದಾಂತ ವಿದ್ವಾನ್, ಕಡಪಾ

# ಮುನ್ನುಡಿ

"ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತ ಇತ್ಯುಚ್ಯತೇ"

ಇದು ಮಹಾಭಾರತ ಪದದ ಶಬ್ದಶಃ ಅರ್ಥ. ಇದು ನಿಜವೂ ಹೌದು. ಮಹಾಭಾರತದಲ್ಲಿ ರೂಪುಗೊಂಡಿರುವ ಪಾತ್ರಗಳು, ಸಂಗತಿಗಳು, ಜೀವನ ಮೌಲ್ಯಗಳು ಎಲ್ಲವೂ ಮೌಲಿಕ; ಮಹತ್ವಯುತ.

ಮಹಾಭಾರತದ ಬಗೆಗಿನ ವಿಮರ್ಶೆಯ ಪಥಕ್ಕೆ ಕೊನೆಯೇ ಇಲ್ಲ. ಈಗ ಆಚಾರ್ಯ ಮಧ್ವರು ರಚಿಸಿದ 'ಮಹಾಭಾರತ ತಾತ್ಪರ್ಯ ನಿರ್ಣಯ'ದ ಅನುವಾದ ಮಾಲಿಕೆಯ ನವಕುಸುಮ ತನ್ನ ಕಂಪನ್ನು ಹೊರಹೊಮ್ಮುತ್ತಲಿದೆ. ಪ್ರಸ್ತುತ ಗ್ರಂಥದಲ್ಲಿ ಹದಿನೇಳನೆಯ ಅಧ್ಯಾಯದಿಂದ ಇಪ್ಪತ್ತನೆಯ ಅಧ್ಯಾಯದವರೆಗಿನ ವಿಷಯಗಳು ಚರ್ಚಿತವಾಗಿವೆ.

ಮಹಾಭಾರತ ಮುಖ್ಯವಾಗಿ ಎರಡು ರಾಜಕೀಯ ಪಕ್ಷಗಳ ನಡುವಿನ ಸಂಘರ್ಷ. ಅಂತಿಮವಾಗಿ ನ್ಯಾಯಯುತ ಪಕ್ಷದ ವಿಜಯದ ಪತಾಕೆ. ಇಲ್ಲಿ ಎರಡು ವಿಧದ ರಾಜನೀತಿಯನ್ನು ಕಾಣಬಹುದು. ಒಂದು ದುರ್ಯೋಧನಾದಿಗಳು ಅನುಸರಿಸಿದ ಕಣಿಕನೀತಿ. ಇನ್ನೊಂದು ಧರ್ಮರಾಜಾದಿಗಳು ಅನುಸರಿಸಿದ ವಿದುರನೀತಿ. ಕಣಿಕನೀತಿಯು ಮೋಸ, ಕಪಟ, ವಂಚನೆಗಳ ಜಾಲವಾದರೆ, ವಿದುರ ನೀತಿಯು ಸತ್ಯ, ನ್ಯಾಯ, ಧರ್ಮಗಳ ಸಾರ. ಲಾಕ್ಷಾಗೇಹದ ಸಂಚು ಕಣಿಕನೀತಿಯ ಫಲ. ಪಾಂಡವರು ಈ ಸಂಚಿನಿಂದ ಪಾರಾದದ್ದು ವಿದುರ ನೀತಿಯ ಪ್ರತಿಫಲ. ಪಾಂಡವರ ನಾಶಕ್ಕಾಗಿ ಯೋಜಿಸಿದ ವಿರೋಚನನು ಬಂಧುಸಹಿತ ತಾನೇ ಸುಟ್ಟುಹೋದ.

ಮಹಾಭಾರತದ ರಂಗಸ್ಥಲದ ಮೇಲೆ ಕೇವಲ ಪಾತ್ರಗಳ ಕುಣಿತವಿಲ್ಲ. ಬದುಕಿನ ಅಮೂಲ್ಯ ತತ್ವಗಳ ಹಾಗೂ ಅಂತಃಸತ್ವಗಳ ಪ್ರತಿಪಾದನೆಯಿದೆ. ಪಾಂಡವರು ಕೇವಲ ವ್ಯಕ್ತಿಗಳಲ್ಲ. ಧರ್ಮ, ಬಲ, ಶೌರ್ಯಗಳ ಪ್ರತಿರೂಪ. ಅವರ ಬಾಳಿನ ಒಂದೊಂದು ಘಟ್ಟ ನಮಗೆ ದಾರಿದೀಪ. ನೆರೆಹೊರೆಯರ ಕಷ್ಟದಲ್ಲಿ ಸಹಭಾಗಿಯಾಗಿ, ಸಹಕಾರವನ್ನು ನೀಡಿದ ಏಕಚಕ್ರಪುರದ ಘಟನೆ ಪಾಂಡವರ ಉದಾತ್ತ ವ್ಯಕ್ತಿತ್ವದ ಪ್ರತೀಕ.

ಇನ್ನು ಭೀಮಾರ್ಜುನರ ಶೌರ್ಯಕ್ಕಂತೂ ಸೀಮೆಯೇ ಇಲ್ಲ. ಹಿಡಿಂಬ–ಬಕರ ವಧೆ, ದ್ರೌಪದಿ ಸ್ವಯಂವರದ ಪ್ರಸಂಗ, ಖಾಂಡವ ದಹನದ ಸನ್ನಿವೇಶ ಮುಂತಾದ ಇನ್ನೂ ಅನೇಕಾನೇಕ ಘಟನೆಗಳು ಇವರ ಪರಾಕ್ರಮಕ್ಕೆ ಕೈಗನ್ನಡಿ.

ಇನ್ನೊಂದು ಮಹತ್ವವಾದ ವಿಷಯ – ದ್ರೌಪದಿಯ ಪಂಚಪತಿತ್ವ. ದುರ್ಯೋಧನನಿಂದ ಮೊದಲುಗೊಂಡು ಇಂದಿನವರವರೆಗೂ ಸಂಶಯಕ್ಕೆ ಗ್ರಾಸ. ಆದರೆ ಆದಕ್ಕೆ ಶ್ರೀಮದಾಚಾರ್ಯರ ಸಮಾಧಾನ ಪೂರ್ವಕ ಸಂಶಯ ನಿವಾರಣೆ ಇಲ್ಲಿದೆ.

ಪಿತಾಸಮಾನರಾದ ಚಿಕ್ಕಪ್ಪನ ಆಜ್ಞೆಯನ್ನು ಶಿರಸಾವಹಿಸಿದ ಧರ್ಮರಾಜ ಇಂದ್ರಪ್ರಸ್ಥದ ಅಧಿಪತಿಯಾದ. 'ಧರ್ಮವೇ ಜಯವೆಂಬ ದಿವ್ಯಮಂತ್ರ', ಅಲ್ಲವೇ? ಈ ದಿವ್ಯಮಂತ್ರದ ದಂಡವನ್ನು ಹಿಡಿದು, ರಾಜಶಾಸನ ಮಾಡಿದ ಧರ್ಮಜನಿಗೆ ಜಯವೆಲ್ಲ ಅವನದೇ.

ರಾಜನಾಗಿ ಯುಧಿಷ್ಠಿರ, ಯುವರಾಜನಾಗಿ ಭೀಮಸೇನ, ಶತ್ರು ದಿಗ್ವಿಜಯಿಯಾಗಿ ಅರ್ಜುನ, ವೇತನಾಧಿಕಾರಿಯಾಗಿ ನಕುಲ, ರಾಜನ ಅಂಗರಕ್ಷಕನಾಗಿ ಸಹದೇವ, ಸೇನಾಧಿಪತಿಯಾಗಿ ಧೃಷ್ಟದ್ಯುಮ್ನ, ಆಯವ್ಯಯ ಮನೆವಾರ್ತೆಯ ಪರಿಪಾಲಿಕೆಯಾಗಿ ದ್ರೌಪದಿ – ಹೀಗೆ ಸುವ್ಯವಸ್ಥಿತವಾಗಿತ್ತು, ಧರ್ಮಜನ ಧರ್ಮರಾಜ್ಯ.

ವ್ಯಾಸರಿಂದ ಮೊದಲ್ಗೊಂಡು ಆಚಾರ್ಯರಾದಿಯಾಗಿ ಯಾರೂ ಸ್ತ್ರೀಯನ್ನು ಕನಿಷ್ಠವಾಗಿ ಕಂಡಿಲ್ಲ. ಮಹಾಭಾರತದ ಕುಂತಿ, ಗಾಂಧಾರಿ, ದ್ರೌಪದಿ, ಸುಭದ್ರೆ ಮುಂತಾದ ಸ್ತ್ರೀ ಪಾತ್ರಗಳಿಗಿದ್ದ ಗೌರವ ಯಾರಿಗುಂಟು? ಸ್ತ್ರೀ ಕೇವಲ ಗೃಹಿಣಿ ಮಾತ್ರವಲ್ಲ. ಪುರುಷನ ಅರ್ಧಾಂಗಿ. ಅವನ ಕಾರ್ಯಕ್ಕೆ ಸಹಾಯಕಿ. ನರಕಾಸುರನ ವಧೆಯ ಪ್ರಸಂಗದಲ್ಲಿ ಸತ್ಯಭಾಮೆ ಅವನನ್ನು ವಿರಥನನ್ನಾಗಿ ಮಾಡಿ ಶ್ರೀಕೃಷ್ಣನಿಗೇ ಸಹಾಯ ಮಾಡಿದ್ದಾಳೆ. ಸುಭದ್ರಾಪಹರಣ ಪ್ರಸಂಗದಲ್ಲಿ ಸುಭದ್ರೆಯು ಮೂರುಲೋಕದ ಗಂಡ ಪಾರ್ಥನಿಗೇ ಸಾರಥಿಯಾಗಿದ್ದಾಳೆ. ಸಂಸಾರರಥವು ಮುನ್ನಡೆಯಲು ಪುರುಷನಿಗೆ ಸ್ತ್ರೀ ಸಾರಥಿ, ಸ್ತ್ರೀಗೆ ಪುರುಷಸಾರಥಿ. ಈ ವಿಷಯವನ್ನು ಬಿತ್ತರಿಸುವ ಮಹಾಭಾರತ ಸ್ತ್ರೀಯನ್ನು ದ್ವಿತೀಯ ದರ್ಜೆಯ ನಾಗರಿಕಳನ್ನಾಗಿ ಕಾಣುವುದನ್ನು ಸ್ಪಷ್ಟವಾಗಿ ಅಲ್ಲಗಳೆಯುತ್ತದೆ. ಸ್ತ್ರೀಪುರುಷರ ಅನ್ಯೋನ್ಯ ದಾಂಪತ್ಯ ಜಗದ ಅಭ್ಯುದಯಕ್ಕೆ ನಾಂದಿ. ಈ ಸಂಗತಿಯನ್ನು ಮಹಾಭಾರತ ಎತ್ತಿಹಿಡಿದಿದೆ. ಅಭಿಮನ್ಯುವಿನಂತಹ ವೀರಪುತ್ರರ ಜನನಕ್ಕೆ ಪ್ರೇರಕವಾಗಿದೆ.

ಮಹಾಭಾರತಕ್ಕೆ ಶ್ರೀಕೃಷ್ಣನೇ ನಾಯಕ. ಇದು ಕೃಷ್ಣನ ಕಥೆಯಲ್ಲವೇ? ಅಂತೆಯೇ ನಾರಣಪ್ಪನ ಮಾತು,

> "ತಿಳಿಯ ಹೇಳುವೆ ಕೃಷ್ಣ ಕಥೆಯನು
> ಇಳೆಯ ಜಾಣರು ಮೆಚ್ಚುವಂತಿರೆ
> ನೆಲೆಯ ಪಂಚಮಶ್ರುತಿಯ ನೊರೆವೆನು ಕೃಷ್ಣಮೆಚ್ಚಲಿಕೆ"

ಇದು ಕೃಷ್ಣನಾಡಿದ, ಆಡಿಸಿದ ಆಟ. ಕೃಷ್ಣ ಮಾಡಿದ ಪಾಠ. ಮಹಾಭಾರತದಲ್ಲಿ ಹರಿವಂಶದ ಕಥೆ. ಕೃಷ್ಣನು ಜಾರನಲ್ಲ, ಚೋರನಲ್ಲ. ಅವನ ಬಹುಪತ್ನೀತ್ವ ಹಲವರ ಅಪಹಾಸ್ಯಕ್ಕೆ ಕಾರಣ. ನರಕಾಸುರನ ವಧೆಯ ನಂತರ ಅವನು ಬಂಧನದಲ್ಲಿಟ್ಟಿದ್ದ ಹದಿನಾರು ಸಾವಿರದ ಒಂದುನೂರು ಕನ್ನಿಕೆಯರನ್ನು ವಿವಾಹವಾದದ್ದು ಶ್ರೀಕೃಷ್ಣನ ಪತಿತೋದ್ಧಾರದ ಗುರುತು. ಹೆರವರ ಬಂಧನದಲ್ಲಿದ್ದ ಆ ಸ್ತ್ರೀಯರನ್ನು ಯಾರು ತಾನೇ ವಿವಾಹವಾಗುತ್ತಿದ್ದರು? ಈ ತೆರನಾಗಿ ಶ್ರೀಕೃಷ್ಣನ ಪಾತ್ರದ ಬಗೆಗೂ ಇದ್ದ ಭಿನ್ನಾಭಿಪ್ರಾಯಗಳ ಸಮರ್ಪಕ ನಿವಾರಣೆ ಶ್ರೀಮದಾಚಾರ್ಯರಿಂದ. ಕೃಷ್ಣನ ಪ್ರತಿಯೊಂದು ಕಾರ್ಯದಲ್ಲಿ ವಿವೇಚನೆಯಿದೆ. ಸುಭದ್ರೆಯನ್ನು ಪಾರ್ಥನಿಗೊಪ್ಪಿಸುವ ಪ್ರಸಂಗದಲ್ಲಿ ಅವನ ಕಪಟ

ನಾಟಕ ಸೂತ್ರಧಾರಿತ್ವ, ಅಲ್ಲಿ ಬಲರಾಮನು ಸುಲಭವಾಗಿ ಮೋಸಹೋಗುವ ರೀತಿ ಮೋಜು ತರುತ್ತದೆ. ಮಹಾಭಾರತ ಕೇವಲ ವೀರರಸದ ಪ್ರವಾಹವಲ್ಲ. ಶೃಂಗಾರ ಹಾಸ್ಯಾದಿಗಳ ಸುಪಿಪಾಕ.

ಈ ರೀತಿಯಾಗಿ ಸಮಗ್ರ ವಿಷಯಗಳಲ್ಲಿ ಶ್ರೀ ಆಚಾರ್ಯರ ಅಭಿಪ್ರಾಯವನ್ನು ಪುಷ್ಟೀಕರಿಸುತ್ತ, ಅರ್ಥೈಸುತ್ತ ಸಾಧಿಸಿದ ಶ್ರೀಯುತ ಲೇಖಕರು ಪ್ರತಿಯೊಂದು ಸಂಗತಿಯನ್ನು ವಿಮರ್ಶೆಯ ಒರೆಗಲ್ಲಿಗೆ ತಾಕಿಸುತ್ತ, ತರ್ಕಿಸುತ್ತ ಹಾಗೂ ವ್ಯಾವಹಾರಿಕ ಉಪಮೆಗಳನ್ನು ನೀಡುತ್ತ ಅನುವಾದಿಸಿದ್ದಾರೆ. ವಿವೇಚನಾತ್ಮಕವಾಗಿ, ವೈಜ್ಞಾನಿಕವಾಗಿ ಅನುವಾದಿಸಿ ಶ್ರೀ ಮಧ್ವರ ಇಂಗಿತವನ್ನು ತಿಳಿಗೊಳಿಸಿ, ತಿಳಿಯಪಡಿಸುವ ಕೃತಿಕಾರರ ಸರಳ ಭಾಷೆ, ಸರಳ ಶೈಲಿ ಆಧ್ಯಾತ್ಮಾಭ್ಯಾಸಿಗಳ ಮನಮುಟ್ಟುತ್ತವೆ. ಇಲ್ಲಿ ಅನುವಾದ ಕೇವಲ ಪಡಿಯಚ್ಚಾಗಿ ಹೊರಬಂದಿಲ್ಲ. ಸ್ವಂತಿಕೆಯ ರೂಹು ಒಡೆದಿದೆ.

ಕೇವಲ ಮಹಾಭಾರತದ ಕಥೆ ಬರೆಯುವಲ್ಲಿ ಲೇಖಕರ ಉದ್ದೇಶವಿಲ್ಲ. ತಮ್ಮ ಕೃತಿ, ತನ್ಮೂಲಕ ಉನ್ನತ ಮೌಲ್ಯಗಳ ಪ್ರತಿಪಾದನೆಯಾಗಬೇಕು. ಶ್ರೀ ಆಚಾರ್ಯರ ಸಿದ್ಧಾಂತಗಳ ಮಂಡನೆಯ ರತ್ನಪೀಠವಾಗಬೇಕು. 'ವಿಷ್ಣು ಸರ್ವೋತ್ತಮ ವಾಯು ಜೀವೋತ್ತಮ' – ಈ ಬೀಜಮಂತ್ರದ ಪಾಠವಾಗಬೇಕು. ಈ ಎಲ್ಲ ಉದ್ದೇಶಗಳನ್ನು ಲೇಖಕರು ತಮ್ಮ ಕೃತಿಯಲ್ಲಿ ಸಾಧಿಸಿದ್ದಾರೆ ಎನ್ನುವಲ್ಲಿ ಎರಡು ಮಾತಿಲ್ಲ.

ತಮ್ಮ ತುಂಬು ವಯದಲ್ಲಿಯೂ ಈ ತೆರನ ರಚನಾತ್ಮಕ ಕಾರ್ಯವನ್ನು ಉತ್ಸಾಹಪೂರ್ವಕವಾಗಿ ಮಾಡುತ್ತಿರುವ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ಈ ವಿಧದ ವೈಜ್ಞಾನಿಕ ಹಾಗೂ ವೈಚಾರಿಕ ಗ್ರಂಥಗಳ ಕೊಡುಗೆಗಾಗಿ ದುಡಿಯುತ್ತಿರುವ ಹಿರಿಯರಾದ ಶ್ರೀಯುತ ಆರ್. ಎಚ್. ಕುಲಕರ್ಣಿಯವರು ಯುವಪೀಳಿಗೆಗೆ ಉತ್ತಮ ಆದರ್ಶ.

ಕಿರಿಯಳಾದರೂ ಅಭಿಮಾನಪೂರ್ವಕವಾಗಿ ಅವಕಾಶವಿತ್ತಿದ್ದಕ್ಕಾಗಿ ನಾನು ಹಿರಿಯರಿಗೆ ತುಂಬ ಕೃತಜ್ಞೆ. ನನ್ನ ಕುಲದೈವ ಶ್ರೀಶ್ರೀನಿವಾಸನು ಶ್ರೀಯುತರಿಗೆ ದೀರ್ಘಾಯುವನ್ನೀಯಲಿ, ಇಂತಹ ಹತ್ತು ಹಲವು ಕೃತಿಗಳು ಹೊರಬರಲಿ , ಶ್ರೀಮತದ ಪತಾಕೆ ರಾರಾಜಿಸಲಿ, ರಚನಾತ್ಮಕ ಚಿಂತನೆಗೆ ನಾಂದಿಯಾಗಲಿ.

"ಕ್ಷತ್ರಿಯಾಂತಕರಾಮಾಯ ಮತ್ಸ್ಯ ರೂಪಾಯ ತೇ ನಮಃ
ಪಾಂಡವಾಘಪ್ರಹರ್ತ್ರೇಚ ಶ್ರೀಧರಾಯ ನಮೋನಮಃ"

**– ಸೌ. ಜ್ಯೋತ್ಸ್ನಾ ರಾಜೇಂದ್ರ ಹೆರೂರಕರ್,**
ಎಂ.ಎ. ಸಂಸ್ಕೃತ
*ಭಾರತೀಯ ಜೀವವಿಮಾ ನಿಗಮ, ಗುಲ್ಬರ್ಗಾ*

# ಅರಿಕೆ

ಭಗವದ್ಭಕ್ತರೇ!

ಹೆಸರಿನಲ್ಲೇನಿದೆ? ಎಂದು ಅನೇಕರ ವಾದ. ನನಗೂ ಹಾಗೆಯೇ ಮೊದಲು ಅನಿಸಿತ್ತು. ಆದರೆ ಪುರಾಣದಲ್ಲಿ **'ಶಿಶುಪಾಲ ವಧೆ'** ಮತ್ತು **'ರುಕ್ಮಿಣೀಶ ವಿಜಯ'** ಈ ಹೆಸರುಗಳನ್ನು ಕೇಳಿದಾಗ ಆಗುವ ಮಾನಸಿಕ ಪರಿಣಾಮ ಅನುಭವಿಸಿದವರಿಗೆಯೇ ಗೊತ್ತು; ಇರಲಿ.

ಈ ಗ್ರಂಥಕ್ಕೆ **"ಖಾಂಡವ ದಹನ"** ಎಂದು ಹೆಸರಿಸಿದೆ. ಇದು ನಾನು ಇಟ್ಟಿದ್ದಲ್ಲ. ಪುರಾಣದ ಕೃತಿಯಿಂದಲೇ ಬಂದದ್ದು. ನನಗೆ ಇಲ್ಲಿ ಆಯ್ಕೆಗಾಗಿ ಪ್ರೇರೇಪಿಸಿದ್ದು ಆ ಭಗವಂತನೇ. ಈ ಹೆಸರಿನಿಂದ ಪ್ರಾರಂಭವಾದ ಗ್ರಂಥ, ಅನೇಕ ಅಡೆತಡೆಗಳನ್ನು ಎದುರಿಸಿದೆ. ಊಹೆಗೆ ಮೀರಿದ ತೊಂದರೆಗಳುಂಟಾಗಿವೆ. ಕಲ್ಪನೆಗೂ ಅಸಾಧ್ಯವಾದ ಪರಿಸ್ಥಿತಿ ನಿರ್ಮಾಣವಾಗಿದೆ. ಆದರೂ ಭಯಕೃದ್ಭಯನಾಶಕನಾದ ಶ್ರೀನಿವಾಸನು ಎಲ್ಲವುಗಳಿಂದಲೂ ಪಾರು ಮಾಡಿದ್ದಾನೆ. ಆತನನ್ನು ಎಷ್ಟು ಸ್ಮರಿಸಿದರೂ ಸಾಲದು. ದೇವನನ್ನು ನಂಬಿದವರಿಗೆ ಕೇಡಿಲ್ಲ ಎಂಬುದಕ್ಕೆ ನಾನೇ ಸಾಕ್ಷಿ. ಮೂರು ತಿಂಗಳಲ್ಲಿ ಆಗಬೇಕಾದ ಕಾರ್ಯಕ್ಕೆ ೧೫ ತಿಂಗಳುಗಳೇ ಬೇಕಾದವು. "ಯಾವುದಕ್ಕೂ ಕಾಲ ಪಕ್ವವಾಗಬೇಕು."

ಈ ಹೆಸರನ್ನೇ ಏಕೆ ಆಯ್ಕೆ ಮಾಡಿದೆ?

ಅಂದಿನ ಖಾಂಡವವನ ಒಂದು ಎಲ್ಲೆಗೆ ಸೀಮಿತವಾಗಿತ್ತು. ಅದನ್ನು ಸುಡಲು ಒಬ್ಬ ಅರ್ಜುನ ಸಾಕಾಗಿತ್ತು. ಆತನು ಅದನ್ನು ಮಾಡಿ ಅಗ್ನಿನಾಯಕ ಪರಮಾತ್ಮನಿಗೆ ತೃಪ್ತಿಬಡಿಸಿದನು. ಇಂದು, ಈ ವನ ಕೇವಲ ಭಾರತದಲ್ಲಲ್ಲ. ಇಡೀ ಪ್ರಪಂಚವನ್ನು ಆವರಿಸಿದೆ. ಅಜ್ಞಾನ ಅನ್ಯಾಯದ ಅಂಧಕಾರ ದಟ್ಟವಾಗಿ ಹಬ್ಬಿದೆ. ಸೂರ್ಯನ ಕಿರಣಕ್ಕೂ ಆಸ್ಪದವಿಲ್ಲ. ಜಾತಿ–ಮತಗಳ ಬೇರು ಆಳವಾಗಿ ಬಿಟ್ಟು ಬಾಳನ್ನು ಹಾಳು ಮಾಡಿದೆ. ಇವುಗಳನ್ನು ಸುಟ್ಟು ಭಸ್ಮ ಮಾಡಲು ಒಬ್ಬ ಅರ್ಜುನನಿಂದ ಸಾಧ್ಯವಿಲ್ಲ. ಪ್ರತಿ ರಾಷ್ಟ್ರ ಪ್ರತಿ ದೇಶ ಅಷ್ಟೇ ಏಕೆ, ಪ್ರತಿ ಊರುಗಳಲ್ಲೂ ಅರ್ಜುನರು ಸಿದ್ಧರಾಗಬೇಕಾಗಿದೆ. ಅವರಿಗೆ ಭಗವಂತನಲ್ಲಿ ಭಕ್ತಿ, ಶ್ರದ್ಧೆಗಳಿದ್ದಾಗ ಮಾತ್ರ, ಅವನ ಅನುಗ್ರಹವು ಸಾಧ್ಯ.

ಇಂದು ಆವರಿಸಿದ ಈ ಖಾಂಡವವನವನ್ನು ಭಸ್ಮ ಮಾಡಬೇಕಾದರೆ ದೇಶಭಕ್ತರು ಅರ್ಜುನನಂತೆ ಮುಂದಾಗಬೇಕು. ಕೆಡಕು ಸಂಪ್ರದಾಯಗಳನ್ನು ಕಳೆದು, ಒಳ್ಳೆಯ ಬೆಳೆಯನ್ನು ಬೆಳೆಸಬೇಕು. ಜ್ಞಾನ ವಿಜ್ಞಾನಗಳ ಬೆಳಕು ದೇಶದ ಹಿತಕ್ಕೆ ಉಪಯೋಗ ವಾಗಬೇಕು. ಆಗ **'ಖಾಂಡವವನದಿಂದ ತುಂಬಿದ ದೇಶ ನಂದನವನ'** ಆಗಿ ಪರಿವರ್ತಿಸ ಬಲ್ಲುದು. ಇದೇ ನನ್ನ ಆಶೆ. ಆ ಪರಿಸರ ಬೇಗನೆ ಉಂಟಾಗಲಿ, ಬಹುಸಂಖ್ಯೆಯ ಅರ್ಜುನರು ಉದ್ಭವಿಸಲಿ ಎಂದು ಭಗವಂತನಲ್ಲಿ ಪ್ರಾರ್ಥನೆ.

ಹೆಸರಿನಲ್ಲಿಯೂ ಮಹತ್ವವಿದೆ ಎಂಬುದನ್ನು ಮರೆಯಬಾರದು. ಇಂದು ನಾವು ನಮ್ಮ ಮಕ್ಕಳಿಗೆ ಇಡುವ ಹೆಸರುಗಳನ್ನು ನೋಡಿದಾಗ ಅವು ನಮ್ಮ ಸಂಸ್ಕೃತಿಗೆ ಪೂರಕವಾಗಿಲ್ಲ; ಬದಲಿಗೆ ಮಾರಕಗಳಾಗಿ ಪರಿಣಮಿಸಿವೆ. ಸಂಸ್ಕಾರಗಳನ್ನು ಅಳಿಸಿ ಹಾಕಿವೆ. ಹಿಂದೆ ಹಿರಿಯರು ಹೆಸರುಗಳನ್ನಿಡುವಾಗ ದೂರದರ್ಶಿಗಳಾಗಿದ್ದರು. ಮುಂದಾಲೋಚಿಸಿ ನಾಮಕರಣ ಮಾಡುತ್ತಿದ್ದರು. ಅವು ಕೇವಲ ವಿಶೇಷಣಗಳಾಗಿರದೆ ಅನ್ವರ್ಥಕಗಳಾಗಿ ರೂಪುಗೊಳ್ಳುತ್ತಿದ್ದವು.

ಇಂದಿನ ಈ ದೂರದರ್ಶನದ ಹೆಸರುಗಳು ಸಂಸ್ಕೃತಿಯನ್ನು ನಾಶಮಾಡಿವೆ. ಸಂಸ್ಕಾರಗಳನ್ನು ಅಳಿಸಿಹಾಕಿವೆ. ತಲೆ ತಗ್ಗಿಸುವಂತೆ ಮಾಡಿವೆ. ಇಹ–ಪರ ಎರಡಕ್ಕೂ ಸಲ್ಲದಂತಾಗಿದೆ. ಕಾರಣ ನಮ್ಮ ಯುವಕರು 'ತಮ್ಮ ಮಕ್ಕಳಿಗೆ ಹೆಸರಿಡುವಾಗ ಧರ್ಮ, ರಾಷ್ಟ್ರ, ಸ್ವಾಭಿಮಾನ ಬೆಳೆಸುವ ಹೆಸರುಗಳನ್ನಿಡಲಿ' ಎಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

**ಅಧ್ಯಾತ್ಮ ಬಂಧುಗಳೇ,** ತಮ್ಮಲ್ಲಿರುವ ಪ್ರತ್ಯಗಾತ್ಮ ಪರಮಾತ್ಮನಿಗೆ ಈ ಮಹಾಭಾರತ ತಾತ್ಪರ್ಯ ನಿರ್ಣಯ ಭಾರತ ಪ್ರಕರಣ ಐದನೆಯ ಭಾಗವನ್ನು ಅರ್ಪಿಸುತ್ತಿರುವುದು ಮನಕ್ಕೆ ಸಂತಸ ತರುತ್ತಿದೆ. ಆತನು ಇದನ್ನು ಸ್ವೀಕರಿಸಿ ಆಶೀರ್ವದಿಸಲಿ ಎಂದು ಪ್ರಾರ್ಥಿಸುತ್ತೇನೆ. ಆತ್ಮೀಯರೇ ಈ ಸಲ ತಡವಾದುದಕ್ಕೆ ಮೇಲಿನ ಕಾರಣಗಳನ್ನು ತಿಳಿದು ಕ್ಷಮಿಸುವಿರೆಂದು ನಂಬಿದ್ದೇನೆ.

**ಮಿತ್ರರೇ,** ಅಧ್ಯಾಯ ೧೭ ರಿಂದ ೨೯ ರ ವರೆಗೆ ಹಸ್ತಪ್ರತಿಯನ್ನು ಶ್ರೀಮದಾಚಾರ್ಯರು ನನಗೆ ಪ್ರೇರಣೆಯಿತ್ತು ಸಿದ್ಧಪಡಿಸಿದ್ದಾರೆ. ಇಷ್ಟು ಬರೆದಾಗಿದೆ. ಏನು ಮಾಡಲಿ ಎಂದು ಯೋಚಿಸುತ್ತಿದ್ದೆ. ಶ್ರೀಮದಾಚಾರ್ಯರ ಯೋಜನೆಯೇ ಕಾಣುತ್ತದೆ. ಅದೇ ಸಮಯಕ್ಕೆ ಸರಿಯಾಗಿ **ಪಂಡಿತಮಾನ್ಯ ಪ್ರವಚನ ಪ್ರವೀಣ, ಪುರಾಣ ಶಿಖಾಮಣಿಗಳೆಂದು ಪ್ರಸಿದ್ಧರಾದ ಶ್ರೀ ಕೃಷ್ಣಾಚಾರ್ಯ ಕಡಪ** ಅವರ ಕಾರ್ಯಕ್ರಮ ಈ ಊರಲ್ಲಿದ್ದಿತು. ಹಳೆಯ ಪರಿಚಯವಿದ್ದ ಕಾರಣ, ನಾನು ಅವರನ್ನು ಕಂಡೆ. ಮನೆಯ ಕಡೆಗೆ ಬರಲು ವಿನಂತಿಸಿಕೊಂಡೆ. ಮಾರನೆಯ ದಿನ ಬಂದೇಬಿಟ್ಟರು. ನನ್ನ ಕೃತಿಗಳನ್ನಿತ್ತು ಸತ್ಕರಿಸಿ, ನನ್ನ ತೊಂದರೆಯನ್ನು ವಿವರಿಸಿಕೊಂಡೆ. ಅವರು ಮರುಕಗೊಂಡು ಇಡೀ ಹಸ್ತಪ್ರತಿಯನ್ನು ದಕ್ಷತೆಯಿಂದ ನೋಡಿ ತಿದ್ದಿ ಸಲಹೆಯಿತ್ತು, ಮನೆಯವರೆಗೆ ಬಂದು, "ಇದು ನೀವು ಬರೆದದ್ದಲ್ಲ, ಶ್ರೀಮದಾಚಾರ್ಯರೇ ನಿಮ್ಮಲ್ಲಿ ನಿಂತು ಬರೆಯಿಸಿದ್ದಾರೆ" ಎಂದು ಸಂತಸಪಟ್ಟು, ಹರಸಿ, ಆಶೀರ್ವಾದ ರೂಪದಿಂದ ತಮ್ಮ ಅಭಿಪ್ರಾಯಗಳನ್ನು ಚಿಕ್ಕ ಚೌಕಟ್ಟಿನಲ್ಲಿ ವ್ಯಕ್ತಪಡಿಸಿದ್ದಾರೆ. ಇವರ ಉಪಕಾರವನ್ನು ಸ್ಮರಿಸಿದರೆ ಕೇವಲ ಔಪಚಾರಿಕವಾದೀತು, ಚಿರಋಣಿ ಎಂದೇ ಹೇಳಬೇಕು.

ಮುದ್ರಣಕ್ಕಾಗಿ ಪ್ರಸಿದ್ಧವಾದುದು ಗದಗು. ಅಲ್ಲಿಗೆ ಹೋದರೆ ಒಂದೂ ಪ್ರೆಸ್ ಖಾಲಿಯಿಲ್ಲ. ನನ್ನ ಕೃತಿಗಳನ್ನು ಓದಿ ಮೆಚ್ಚಿದ ಅಲ್ಲಿಯ ಸ್ಥಾಯಿ ಗೆಳೆಯರಾದ **ಶ್ರೀ ಬಿ. ಎಸ್. ಗುಡಿ ಮತ್ತು ಶ್ರೀ ಸುಬ್ಬಾರಾವ್ ದೇಶಪಾಂಡೆಯವರ** ಅಪಾರ ಪ್ರಯತ್ನದ ಫಲವಾಗಿ **'ವಿಕ್ರಮ ಕಂಪ್ಯೂಟರ್ಸ್'** ಅವರ ಪರಿಚಯವಾಯಿತು. ಅವರು ಈ ದೆಶೆಯಲ್ಲಿ

ವಿಕ್ರಮವನ್ನೇ ಸಾಧಿಸಿ, ಅಚ್ಚುಕಟ್ಟಾದ ಪುಸ್ತಕ ಎಲ್ಲರಿಗೂ ಆಕರ್ಷಕವಾಗುವಂತೆ ಮಾಡಿ, ಭಕ್ತರ ಕೈಯಲ್ಲಿಟ್ಟಿದ್ದಾರೆ. ಈ ತ್ರಿಮೂರ್ತಿಗಳಿಗೂ ನಾನು ಕೃತಜ್ಞನು.

ಕರಡು ತಿದ್ದುವ ಪ್ರಸಂಗ ಪೆಡಂಭೂತವಾಯಿತು. ಆ ಭೂತವನ್ನು ದೂರಕೋಡಿಸಿ, ನೆಮ್ಮದಿಯನ್ನಿತ್ತವರು ಗೆಳೆಯರಾದ ಶ್ರೀ ಆದ್ಯ ಅನಂತಾಚಾರ್ಯ ಜಾಗೀರದಾರ, ಆತನ ಕುವರಿ ಕು.ಸೌ. ಜ್ಯೋತ್ಸ್ನಾ ಅವರು. ಕರಡು ತಿದ್ದಿದ್ದೇ ಅಲ್ಲದೇ ತಮ್ಮ ಅನಿಸಿಕೆಗಳನ್ನು ವಿಮರ್ಶಾತ್ಮಕ ಮುನ್ನುಡಿಯ ರೂಪದಲ್ಲಿತ್ತು ಸಹಕರಿಸಿದ್ದಾರೆ. ಅವರನ್ನು ನೆನೆಯದಿದ್ದರೆ ಕರ್ತವ್ಯಚ್ಯುತಿಯಾಗುವುದಿಲ್ಲವೇ?

ಶ್ರೀನಿವಾಸನ ಸಂಬಂಧ ಜನ್ಮ ಜನ್ಮಗಳಲ್ಲಿ ಇದ್ದದ್ದೇ. ಈ ಜನ್ಮದಲ್ಲಿ ವಿಶೇಷವೆಂದೇ ಹೇಳಬೇಕು. ನನ್ನ ಉದ್ಧಾರಕ್ಕಾಗಿ ಅನೇಕ ಸದವಕಾಶಗಳನ್ನು ಒದಗಿಸಿದ್ದಾನೆ. ತಾನಾಗಿಯೇ ಕರೆಯಿಸಿಕೊಂಡು ಏಕಾಂತ ದರ್ಶನವಿತ್ತು ಟಿಟಿಡಿ ಯವರಿಂದ ಉತ್ತಮ ಸಲಹೆಗಳನ್ನು ಕೊಡಿಸಿ, ಸಾಕಷ್ಟು ಸಹಾಯ ಮಾಡಿದ್ದಾನೆ. ಭಕ್ತರಿಗೆ ಪ್ರೇರಣೆಯಿತ್ತು ಅನಂತ ಹಸ್ತದಿಂದ ಅನುಗ್ರಹಿಸಿದ್ದಾನೆ. ಈ ಸಂದರ್ಭದಲ್ಲಿ ಶ್ರೀನಿವಾಸನನ್ನು, ಆತನ ಪ್ರತಿನಿಧಿಯಾಗಿ ಕೆಲಸ ಮಾಡುತ್ತಿರುವ ಟಿಟಿಡಿ ಸಂಸ್ಥೆಯವರನ್ನು ಸ್ಮರಿಸುತ್ತ ಮತ್ತೊಮ್ಮೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕೊನೆಯದಾಗಿ: ಭಕ್ತರೇ, ತಮ್ಮ ಸಹಕಾರವಿಲ್ಲದಿದ್ದರೆ ಈ ಕಾರ್ಯ ಮುಂದುವರಿಯುತ್ತಿರಲಿಲ್ಲ. ಇದುವರೆಗೆ ಸಾಕಷ್ಟು ಸಹಕರಿಸಿದ್ದೀರಿ. ಮುಂದೆಯೂ ಸಹಕರಿಸುವಿರಿ ಎಂಬ ವಿಶ್ವಾಸ ನನಗಿದೆ.

ಮಹಾಭಾರತ ತಾತ್ಪರ್ಯ ನಿರ್ಣಯ ಇನ್ನೂ ಎರಡು ಸಂಪುಟಗಳಾಗುವಷ್ಟು ಸುಮಾರು ೮೦೦ ಪುಟಗಳ ಸಾಹಿತ್ಯ ಬರೆದು ತಿದ್ದಿ ಸಿದ್ಧವಾಗಿದೆ. ಅದು ಅಚ್ಚಾದರೆ ಯಜ್ಞದ ಒಂದು ಭಾಗ ಮುಗಿಯುತ್ತದೆ. ಈ ಜ್ಞಾನಯಜ್ಞವನ್ನು ಪೂರ್ತಿಗೊಳಿಸಲು ತಾವೆಲ್ಲರೂ ಎರಡು ಪ್ರತಿಗಳನ್ನು ಖರೀದಿಸಿ ಒಂದನ್ನು ದಾನವಾಗಿ ಕೊಡಿ. ಅನುಕೂಲವಿದ್ದವರು ತಮಗೆ ಪ್ರೇರಣೆಯಾದಷ್ಟು ಧನಸಹಾಯ ಮಾಡಿ ಓಡಾಡುವ ಶಕ್ತಿಯಿಲ್ಲದ ಪ್ರಯುಕ್ತ ಪುಸ್ತಕಗಳ ಮಾರಾಟ ಅಸಂಭವ. ಎಲ್ಲ ಪುಸ್ತಕಗಳನ್ನು ಸಟ್ಟಿನ ರೂಪದಲ್ಲಿ ಪ್ರತ್ಯಗಾತ್ಮನಾದ ಪರಮಾತ್ಮನಿಗೆ ಅರ್ಪಿಸುವ ಯೋಜನೆಯಿದೆ. ಇದನ್ನು ಈಡೇರಿಸುವುದು ತಮ್ಮ ಹೊಣೆಯೆಂದು ಆತ್ಮೀಯತೆಯಿಂದ ವಿನಂತಿಸಬಯಸುತ್ತೇನೆ.

ಜಗಜನ್ಮಾದಿ ಕಾರಣನಾದ ನಾರಾಯಣನು ಈ ಜನ್ಮದಲ್ಲಿ ಇಷ್ಟಾದರೂ ಸೇವೆ ಗೈಯಲು ಅನುಕೂಲಿಸಿಕೊಟ್ಟಿದ್ದಾನೆ. ಮುಂಧೆ ಜನ್ಮ ಜನ್ಮಗಳಲ್ಲೂ ಇದೇ ರೀತಿಯ ಅವಕಾಶ ಒದಗಿಸಲೆಂದು ಅನನ್ಯ ಭಕ್ತಿಯಿಂದ ಕಲಿಯುಗದ ತಾರಕನಾದ ಶ್ರೀವೆಂಕಟೇಶನ ಅಡಿದಾವರೆಗಳಲ್ಲಿ ಪ್ರಾರ್ಥಿಸಿ ಲೇಖನಿಗೆ ವಿರಾಮವೀಯುತ್ತೇನೆ.

ಸಾಹಿತ್ಯ ಸದನ, ಕಲ್ಬುರ್ಗಿ — ಭಕ್ತರ ಭಕ್ತರ ಭಕ್ತ

೧೩–೬–೯೫ — **ಆರ್. ಎಚ್. ಕುಲಕರ್ಣಿ**

ಸರ್ವಂ, ಶುಭಂ, ಮಂಗಲಮ್

# ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ

## ಭಾಗ – ೫

# ಭಾರತ ಪ್ರಕರಣ

## ಖಾಂಡವ ದಹನ

(ಅಧ್ಯಾಯ ೧೭ ರಿಂದ ೨೦)

॥ ಹರಿಃ ಓಂ ॥

॥ ಶ್ರೀ ಗುರುಭ್ಯೋ ನಮಃ ॥

॥ ಶ್ರೀ ವಿಘ್ನಹರ್ತಾಯ ನಮಃ ॥

# ಅಧ್ಯಾಯ ಹದಿನೇಳು

**ಗತೇಽಥ ಚೇದಿಪೇ ಸ್ವಕಂ ಪುರಂ ಜನಾರ್ದನೋಽಶೃಣೋತ್ ।**
**ರಮೈವ ರುಕ್ಮಿಣೀತಿ ಯೋದ್ಯತಾಂ ಸ್ವಯಂ ವರಾಯ ತಾಮ್ ॥೧॥**

ಚೇದಿ ರಾಜನು ತನ್ನ ರಾಜಧಾನಿಗೆ ತೆರಳಿದ ಮೇಲೆ, ರುಗ್ಮಿಯು, ರುಕ್ಮಿಣಿಯ ಸ್ವಯಂವರದ ಸಿದ್ಧತೆ ಮಾಡಿರುವನೆಂದು ಶ್ರೀಕೃಷ್ಣನು ಕೇಳಿದನು.

ರಮೈವ = ಎನ್ನುವ ಪದ ಇರುವದರಿಂದಾ ಸಾಕ್ಷಾತ್ ಲಕ್ಷ್ಮೀಗೂ ಮತ್ತು ರುಕ್ಮಿಗೂ ಅಭೇದವನ್ನು ಹೇಳಿರುವರು.

**ಸ ರುಕ್ಮಿ ನಾಮಕೋಽಗ್ರಜಃ ಶ್ರಿಯೋ ದ್ವಿಷನ್ರಮಾಪತಿಂ ।**
**ಹರೇಃ ಪ್ರದಾತು ಮುದ್ಯತಾಂ ನ್ಯವಾರಯದ್ಧರಿ ಪ್ರಿಯಾಂ ॥೨॥**

ಆ ರುಕ್ಮಿಣಿಯ ಅಣ್ಣ ರುಕ್ಮಿ. ಅವನು ಹಿಂದೆ ರುಗ್ಮಿ ಎಂಬ ಅಸುರ. ಅವನು ಶ್ರೀಕೃಷ್ಣನನ್ನು ದ್ವೇಷಿಸುತ್ತಿದ್ದನು. ಅವನು ಶ್ರೀದೇವಿಯೇ ಇಲ್ಲಿ ರುಕ್ಮಿಣಿಯಾಗಿದ್ದಾಳೆ ಎಂದು ಅರಿಯದ ಅಜ್ಞಾನಿ. ಹರಿ ಪ್ರಿಯರಾದ ಭೀಷ್ಮಕ ಮೊದಲಾದವರು ರುಕ್ಮಿಣಿಯನ್ನು ಶ್ರೀಕೃಷ್ಣನಿಗೆ ಕೊಡಲು ಸಿದ್ಧರಾಗಿದ್ದರೂ ರುಕ್ಮಿ ಅವರನ್ನು ತಡೆದನು.

**ಪ್ರಘೋಷಿತೇ ಸ್ವಯಂವರೇಽಥ ತೇನ ಮಾ(ಘ) ಗಧಾದಯಃ ।**
**ಸಮೀಯುರುಗ್ರ ಪೌರುಷಾಃ ಸಸಾಲ್ವ ಪೌಂಡ್ರಚೇದಿಪಾಃ ॥೩॥**

ರುಕ್ಮಿಯು ಸ್ವಯಂವರವನ್ನು ಘೋಷಿಸಿದನು. ಆಗ ಮಹಾ ಪರಾಕ್ರಮಿಗಳಾದ ಸಾಲ್ವ, ಪೌಂಡ್ರಕ, ಶಿಶುಪಾಲ, ಮೊದಲಾದ ರಾಜರು ಜರಾಸಂಧನನ್ನು ಕೂಡಿಕೊಂಡು ಅಲ್ಲಿಗೇ ಬಂದರು.

**ತದಾ ಜಗಾಮ ಕೇಶವೋ ಜವೇನ ಕುಂಡಿನಂ ಪುರಂ ।**
**ಸ್ಮೃತೋಽಥ ತೇನ ಪಕ್ಷಿರಾಟ್ ಸಮಾಜಗಾಮ ಕೇಶವಂ ॥೪॥**

ಆಗ ಶ್ರೀಕೃಷ್ಣನು ಗರುಡನನ್ನು ಸ್ಮರಿಸಿದನು. ಕೂಡಲೆ ಗರುಡನು ಪ್ರತ್ಯಕ್ಷನಾದನು. ಶ್ರೀಕೃಷ್ಣನು ಗರುಡನನ್ನು ಏರಿ, ಅತಿವೇಗವಾಗಿ ಕುಂಡಿನಿಪುರಕ್ಕೆ ಬಂದನು.

**ವಿ. ವಿ. :** ಕುಂಡಿನಿಪುರ ಭೀಷ್ಮಕನ ರಾಜಧಾನಿ.

**ಪತತ್ರ ವಾಯುನಾಸ್ಯ ತೇ ನರೇಶ್ವರಾಃ ಪ್ರಪಾತಿ ತಾಃ ।**
**ಯದೇದೃಶಂ ಪತತ್ರಿಣೋ ಬಲಂ ಹರೇಃಕಿಮುಚ್ಯತೇ ॥೫॥**

ಆ ಗರುಡನ ರೆಕ್ಕೆಗಳ ಗಾಳಿಯ ವೇಗಕ್ಕೆ ಜರಾಸಂಧ ಮೊದಲಾದ ನರೇಶರು ಉರುಳಿಬಿದ್ದರು. ಆ ಹರಿಯ ವಾಹನವಾದ ಗರುಡನಿಗೆ ಇಷ್ಟು ಬಲ ಇರುವಾಗ ಹರಿಯ ಬಲವನ್ನು ಏನೆಂದು ಹೇಳಬೇಕು ?

**ಕಿಮತ್ರ ನಃ ಕೃತಂ ಭವೇತ್ ಸುಖಾಯ ಹೀತಿ ತೇಽಬ್ರುವನ್ ।**
**ಅಥಾಬ್ರವೀಜ್ಜರಾಸುತೋ ಜಯೀ, ಪಯೋಬ್ಧಿ ಮಂದಿರಃ ॥೬॥**

**ಕಿಲ್ವೈಷ ಪಕ್ಷಿವಾಹನೋ ಯತಶ್ಚ ನಾನ್ಯಥಾ ಭವೇತ್ ।**
**ಜಿತಾ ವಯಂ ಚ ಸರ್ವಶೋಽಮುನೈಕಲೇನ ಸಂಯುಗೇ ॥೭॥**

ಆ ರಾಜರೆಲ್ಲ ಕೂಡಿ ನಮಗೆ ಇಲ್ಲಿ ಯಾವ ಕಾರ್ಯದಿಂದ ಸುಖವು ಲಭಿಸೀತು ಇದನ್ನು ಕೇಳಿದ ಜರಾಸಂಧನು, "ಆತನು, ಶ್ರೀಕೃಷ್ಣನು ಕ್ಷೀರ ಸಮುದ್ರವನ್ನೆ ತನ್ನ ಮಂದಿರವನ್ನಾಗಿ ಮಾಡಿಕೊಂಡಿದ್ದಾನೆ. ಆತನಿಗೆ ಪ್ರಬಲವಾದ ಗರುಡನ ವಾಹನವಿದೆ. ಅಲ್ಲದೆ ನನ್ನನ್ನು, ನನ್ನ ಸೈನ್ಯ ಸಮೂಹವನ್ನು ಅನೇಕ ಸಲ ಒಬ್ಬನೇ ಗೆದ್ದಿದ್ದಾನೆ. ಇಂಥವನೊಡನೆ ನಾವು ವ್ಯರ್ಥವಾಗಿ ದ್ವೇಷ ಮಾಡಿದೆವು" ಎಂದು ನುಡಿದನು.

**ವಿ. ಅರ್ಥ** : ಗರುಡನ ಮಹತ್ವವನ್ನು ಮೂಲ ಭಾರತದಲ್ಲಿ ವರ್ಣನೆ ಮಾಡಿದ್ದಾರೆ. ಬ್ರಹಸ್ಪತ್ಯಚಾರ್ಯರು ಇಂದ್ರನಿಗೆ ಹೇಳಿದ ಮಾತು–

समर्थो बलिनां श्रेष्ठो हुर्तुंसोमं विहंगम । सर्वसंभावयाम्यस्मिन् न साध्य मपि साघयेत् (आदि 30-42)

ಗರುಡನು ಬಲದಿಂದ ಶ್ರೇಷ್ಠರಾದವರಲ್ಲಿಯೂ ಶ್ರೇಷ್ಠನಾದವನು. ಅಮೃತವನ್ನು ತರುವದರಲ್ಲಿ ಇವನು ಸಮರ್ಥನಾದವನು. ಯಾವ ಕಾರ್ಯ ಅಸಾಧ್ಯವೋ ಅದನ್ನು ಮಾಡಿ ತೋರಿಸುವವನು, ಮತ್ತು ಬಲವಾನ್ कामरुपधृक् = ಒಳ್ಳೆಯ ಬಲಿಷ್ಠನೂ ತನ್ನ ಇಚ್ಛಾನುಸಾರಿಯಾದ ರೂಪವನ್ನು ಧರಿಸುವವನು. ಇನ್ನು ವಿಶೇಷ ಬೇಕಾದರೆ ಮಾ. ಭಾರತ ಆದಿ ಪರ್ವ ೨೦ ರಿಂದ ೨೪ ಅಧ್ಯಾಯಗಳಲ್ಲಿ ನೋಡಬಹುದು.

**ಅನೇಕಶೋ ನ ಸಂಗತೈರ್ಜಿತಃ ಕದಾಚಿದೇಷ ಹಿ ।**
**ಅಮುಷ್ಯ ಚಾಗ್ರಜಃ ಪುರಾ ನಿಹಂತು ಮುದ್ಯತೋ ಹಿ ಮಾಂ ॥೮॥**

ನಾನು ಅನೇಕ ಸಲ ಸೈನ್ಯ ಸಮೇತನಾಗಿ ಆಕ್ರಮಿಸಿದೆ. ಆದರೂ ಈತನು ಪರಾಜಿತನಾಗಿಲ್ಲ. ಈತನ ಅಣ್ಣನು ಕೂಡ ಬಲಾಢ್ಯನೇ! ಆತನು ಹಿಂದೆ ನನ್ನನ್ನು ಹಿಡಿದು ಒಬ್ಬನೇ ಕೊಲ್ಲಲು ಉದ್ಯುಕ್ತನಾಗಿದ್ದನು.

**ಅದೃಶ್ಯ ವಾಕ್ಯತೋಽತ್ಯಜತ್ಪ್ರತಾಡನಾತ್ಸು ಪೀಡಿತಂ ।**
**ಕಿಮಸ್ಯ ತೂಚ್ಯತೇ ಬಲಂ ವಯಂ ತೃಣೋಪಮಾಃ ಕೃತಾಃ ।**
**ಸಮಸ್ತ ಶೋ ಮೃಧೆ ಮೃಧೇ ಹಿ ಯೇನಚಾಕ್ಷತೇನ ಹಿ (ಹಾ) ॥೯॥**

ಸುದೈವದಿಂದ ಆಗ (ಅದೃಶ್ಯ) ಅಶರೀರವಾಣಿ ಆಯಿತು. ಅದನ್ನು ಕೇಳಿ ನನ್ನನ್ನು ಬಿಟ್ಟುಬಿಟ್ಟನು. ಆದರೂ ನಾನು ಅನೇಕ ಪೆಟ್ಟುಗಳಿಂದ ಪೀಡಿತನಾಗಿದ್ದೆ. ಅವರ ಬಲ, ಚ್ಯುತಿರಹಿತವಾದದ್ದು ನನ್ನನ್ನು, ನನ್ನ ಸೈನ್ಯವನ್ನು ಅವರು ತೃಣಕ್ಕೆ ಸಮನಾಗಿ ಕಂಡರು. ನನ್ನ ಎಲ್ಲ ಸೈನಿಕರು ನಾಶ ಹೊಂದಿದರು. ಈಗ ಶ್ರೀಕೃಷ್ಣನೇ ಇಲ್ಲಿಗೆ ಸಾಕ್ಷಾತ್ತಾಗಿ ಬಂದಿದ್ದಾನೆ !

**ಕಿಮತ್ರ ಕುರ್ವತಾಂ ಸುಖಂ ಭವೇದುದೀರ್ಣಸಂಕಟೇ ।**
**ಇತಿ ಬ್ರುವನ್ನವಾಙ್ಮುಖಂ ಸ್ವಹಶ್ಚಕಾರ ವಿಚ್ಛವಿಃ (ವಿ) ॥೧೦॥**

ಇಂತಹ ಭಯಂಕರವಾದ ಸಂಕಟ ಪ್ರಸಂಗದಲ್ಲಿ ನಾವು ಏನು ಮಾಡಿದರೆ ತಾನೇ ಸುಖವಾದೀತು ? ಎಂದ ಜರಾಸಂಧನು ಕಾಂತಿಹೀನನಾಗಿ ಅಧೋಮುಖನಾಗಿ ಕುಳಿತುಬಿಟ್ಟನು.

**ತಥಾಹ ಚೇದಿಭೂಪತಿಃ ಸದಂತವಕ್ರಕೋ ವಚಃ ।**
**ಪುರಾ ಹರೇರ್ಹಿ ಪಾರ್ಷದಃ ಪ್ರಸನ್ನ ಬುದ್ಧಿ ರೇಕದಾ ॥೧೧॥**

ಆಗ ಶಿಶುಪಾಲ, ದಂತವಕ್ರರು, ಹಿಂದೆ ಇವರೇ ಶ್ರೀಹರಿಯ (ಪಾರ್ಷದರು) ಸೇವಕರಾಗಿದ್ದರು. ಈಗ ಪ್ರಸನ್ನಚಿತ್ತರಾಗಿ, ಸುಜೀವಿಯ ಆವೇಶದಿಂದ ಹೀಗೆ ಹೇಳಿದರು.

**ಶೃಣುಷ್ವ ರಾಜಸತ್ತಮ ಪ್ರಭುಂ ಶಿವಸ್ವಯಂಭುವೋಃ ।**
**ಹರಿಂ ವದಂತಿ ಕೇಚಿದಪ್ಯದೋ ಭವೇನ್ನವೈ ಮೃಷಾ ॥೧೨॥**

ಹೇ ರಾಜಶ್ರೇಷ್ಠನಾದ ಜರಾಸಂಧನೇ ಕೇಳು 'ಈ ಶ್ರೀಹರಿ, ರುದ್ರಬ್ರಹ್ಮರಿಗೆ ಪ್ರಭುವು' ಎಂದು ಕೆಲವು ಸಜ್ಜನರು ಹೇಳುತ್ತಾರೆ. ಅದು ಸುಳ್ಳೇನಲ್ಲ ಎಂದು ಕಾಣುತ್ತದೆ.

**ತಥಾವಯೋಶ್ಚ ದರ್ಶನೇ ಭವೇತ್ಕದಾಚಿ ದೂರ್ಜಿತಾ ।**
**ಅಮುಷ್ಯ ಭಕ್ತಿ ರನ್ಯಥಾ ಪುನಶ್ಚ ಜಾಯತೇ ಕ್ರುಧಾ ॥೧೩॥**

ಹಾಗೆಯೇ ನಮ್ಮಿಬ್ಬರಿಗೂ ಶ್ರೀಕೃಷ್ಣನ ದರ್ಶನವಾದ ಕೂಡಲೇ ಕೆಲವು ಸಲ ಭಕ್ತಿ ಆತನಲ್ಲಿ ಊರ್ಜಿತವಾಗುತ್ತದೆ. ಮತ್ತೆ ಪುನಃ ಆತನಲ್ಲಿ ಕ್ರೋಧದ ಪ್ರವೃತ್ತಿಬೆಳೆಯುತ್ತದೆ.

**ನ ಕಾರಣಂ ಚ ವಿದ್ಮಹೇ ನ ಸಂಶಯಃ ಪರೋ ಹರಿಃ ।**
**ವ್ರಜಾಮ ತಂ ಸುಖಾರ್ಥಿನೋ ವಯಂ ವಿಹಾಯ ಶತ್ರುತಾಂ ॥೧೪॥**

ಶ್ರೀಕೃಷ್ಣನಲ್ಲಿ ಭಕ್ತಿ ದ್ವೇಷಗಳಿಗೆ ಕಾರಣಗಳು ತಿಳಿಯಲೊಲ್ಲವು. ಶ್ರೀಕೃಷ್ಣನು ಸರ್ವೋತ್ತಮನು, ಇದಕ್ಕೆ ಸಂಶಯವಿಲ್ಲ. ಆದಕಾರಣ ನಾವು ಸುಖಾಪೇಕ್ಷಿಗಳಾಗಿ, ಆತನಲ್ಲಿ ಶತ್ರುತ್ವ ಭಾವನೆಯನ್ನು ಬಿಟ್ಟು, ಭಕ್ತಿಯಿಂದ ಆರಾಧಿಸೋಣ.

**ವಿ.ವಿ. :** ಶ್ರೀಮದಾಚಾರ್ಯರು ಇಲ್ಲಿ 'ಜೀವದ್ವಯ' ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಜೊತೆಯಲ್ಲಿ ಶಿಶುಪಾಲ ದಂತವಕ್ರರು ಯಾರು ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

**ಇಲ್ಲಿ ಒಂದು ಸಂಶಯ :** ಈ ಪ್ರಸಂಗ ಭಾರತ–ಹರಿವಂಶ, ರುಕ್ಮಿಣೀಶವಿಜಯ ಇತ್ಯಾದಿ ಗ್ರಂಥಗಳಲ್ಲಿ ಎಲ್ಲಿಯೂ ಕಂಡಂತೆ ಆಗಿಲ್ಲ. ಏಕೆ ?

**ಇದಂ ಹಿ ನಃ ಶುಭಪ್ರದಂ ನ ಚಾನ್ಯಥಾ ಶುಭಂ ಕ್ವಚಿತ್ ।**
**ಇತೀರಿತೋ ಜರಾಸುತೋ ದದರ್ಶ ತೌ ದಹನ್ನಿವ ॥೧೫॥**

ಈ ಮಾತು ಮಂಗಲಕರವಲ್ಲ. ಬೇರೆ ಯೋಚನೆಯೂ ನಿಮಗೆ ಯಾವ ರೀತಿಯಿಂದಲೂ ಶುಭವಾಗಲಾರದು. ಹೀಗೆಂದು ಕೇಳಿದ ಜರಾಸಂಧನು ಅವರನ್ನು ಸುಟ್ಟು ಬಿಡುವನೋ ಎಂಬಂತೆ ಕೆಂಗಣ್ಣಿನಿಂದ ನೋಡಿದನು.

**ಅಥ ಪ್ರಹಸ್ಯ ಸೌಭರಾಡ್ಯಚೋ ಜಗಾದ ಮಾಗಧಂ ।**
**ವಿನಿಂದ್ಯ ತೌ ಕ್ರುಧಾ ಸ್ಫುರನ್ ಕ್ರುಧಾ ಸ್ಫುರಂತಮೀಕ್ಷ್ಯ ಚ ॥೧೬॥**

ಆನಂತರ ಸಾಲ್ವನು ಕ್ರುದ್ಧನಾಗಿ, ಕ್ರುದ್ಧನಾದ ಜರಾಸಂಧನನ್ನು ನೋಡಿ, ಶಿಶುಪಾಲ ದಂತವಕ್ರರನ್ನು ಗೇಲಿ ಮಾಡುತ್ತ, (ಮೂದಲಿಸುತ್ತ) ನಿಂದಿಸಿ ಹೀಗೆ ಮಾತನಾಡಿದನು.

**ನ ತನ್ಮೃಷಾ ಹರಿಃ ಸ್ವಯಂ ಜನಾರ್ದನೋ ವಧಾಯ ನಃ ।**
**ಪ್ರಜಾತ ಏಷ ಯಾದವೋ ವಯಂ ಚ ದಾನವೇಶ್ವರಾಃ ॥೧೭॥**

ನೀವನ್ನುವುದು ಸುಳ್ಳಲ್ಲ. ಶ್ರೀಹರಿಯು ಸಮರ್ಥನೂ ನಿಜವೇ ? ಶ್ರೀಹರಿಯನ್ನು 'ಜನಾರ್ದನ' ಎಂದು ಕರೆಯುತ್ತಾರೆ. ಅಂದರೆ ದಾನವರನ್ನು ಸಂಹರಿಸುವುದೇ ಆತನ ಕೆಲಸ. ಅದಕ್ಕಾಗಿಯೇ ಆತನು ಯಾದವರಲ್ಲಿ ಜನಿಸಿದ್ದಾನೆ. ನಾವಾದರೋ ದಾನವೇಶ್ವರರು.

**ನಮ್ಮ ಧರ್ಮ ಏನು ?**

**ಸ್ವಧರ್ಮ ಏಷನಃ ಸದಾ ದೃಢ ಪ್ರತೀಪತಾ ಹರೌ ।**
**ಸ್ವಧರ್ಮಿಣೋ ಹತಾ ಅಪಿ ಪ್ರಯಾಮ ಸದ್ಗತಿಂ ಧ್ರುವಂ ॥೧೮॥**

ಶ್ರೀಹರಿಯಲ್ಲಿ ಯಾವಾಗಲೂ ದ್ವೇಷ ಮಾಡುವುದೇ ನಮ್ಮ ಧರ್ಮವು. ಒಂದು ವೇಳೆ ನಾವು ಸ್ವಧರ್ಮದಲ್ಲಿ ಹತರಾದರೂ ನಮಗೆ ಸದ್ಗತಿ ನಿಶ್ಚಯ.

**ಶಿವಶ್ಚ ನಃ ಪರಾ ಗತಿರ್ಗುರುರ್ಭವಾನರಿಹರೇಃ (ರೇಃ) ।**
**ಇತೀರಿತಃ ಸ ಮಾಗದೋ ಜಗಾದ ಸಾಧು ಸಾಧ್ವಿತಿ ॥೧೯॥**

ನಮಗೆ ಶಿವನೇ ಪರಮಗತಿಯು. ಎಲೈ ಮಾಗಧ, ನೀನೇ ನಮಗೆ ಪರಮ ಗುರುವು. ಶ್ರೀಹರಿ ನಮಗೆ ಶತ್ರುವು. ಹೀಗೆ ಹೇಳಿದ ಸಾಲ್ವನ ಮಾತುಗಳನ್ನು ಕೇಳಿ ಜರಾಸಂಧನು ಬಹಳ ಸಂತುಷ್ಟನಾದನು.

**ತಥೈವ ರುಕ್ಮಿ ಪೂರ್ವಕಾಃ ಕರೂಶ ಚೇದಿಪೌ ಚ ತೌ ।**
**ವಿನಿಶ್ಚಯಂ ಕುಬುದ್ಧಯೋ ಯುಧೇ ಚ ಚಕ್ರುರೂರ್ಜಿತಂ ॥೨೦॥**

ಆಗ ರುಕ್ಮಿಯೇ ಆದಿಯಾಗಿ ಕರೂಶ ಮತ್ತು ಚೇದಿ ದೇಶಗಳ ಅರಸರು ದಂತವಕ್ರ ಶಿಶುಪಾಲರು ಕೂಡ ಹಾಗೆಯೇ ಆಗಲಿ ಎಂದು ದುರ್ಬುದ್ಧಿಯಿಂದ ಕೃಷ್ಣನಲ್ಲಿ ದ್ವೇಷವನ್ನು ಹೆಚ್ಚಿಸಿಕೊಂಡು ಯುದ್ಧಕ್ಕಾಗಿ ಸಿದ್ಧರಾದರು.

**ಸದಾ ಪ್ರತೀಪ ಕಾರಿಣೌ ಭವಾವ ಕೃಷ್ಣ ಇತ್ಯಪಿ ।**
**ಗುರೋಃ ಪ್ರಸಾದಮಾಪ್ನುತಾಂ ಕರೂಶಚೇದಿ ಭೂಭೃತೌ ॥೨೧॥**

'ನಾವೆಲ್ಲರೂ ಸದಾ ಶ್ರೀಕೃಷ್ಣನಲ್ಲಿ ದ್ವೇಷವನ್ನು ಸಾಧಿಸೋಣ' ಎಂದು ದಂತವಕ್ರ – ಶಿಶುಪಾಲ ಮೊದಲಾದವರು ಹೇಳಿದಾಗ, ಗುರುವಾದ ಜರಾಸಂಧನು ಪ್ರಸನ್ನಚಿತ್ತನಾದನು.

**ಪುನಶ್ಚ ತೇ ತ್ವಮಂತ್ರಯನ್ ಸಹೈವ ಪಾಪ ಬುದ್ಧಯಃ ।**
**ಧ್ರುವಂ ಸಮಾಗತೋ ಹರಿರ್ಲಭೇತ ರುಕ್ಮಿಣೀಮಿಮಾಂ ॥೨೨॥**

ಪಾಪ ಬುದ್ಧಿಯುಳ್ಳ ಅವರೆಲ್ಲರೂ ಕೂಡಿ ಆಲೋಚಿಸಿ, "ರುಕ್ಮಿಣೀ ಸ್ವಯಂವರಕ್ಕೆ ಶ್ರೀಕೃಷ್ಣನು ಬಂದೇ ಬರುತ್ತಾನೆ" ಎಂದು ನಿಶ್ಚಯಿಸಿಕೊಂಡರು.

**ಅಯಂ ತ್ರಿಲೋಕ ಸುಂದರಸ್ಸು (ರೋಽಸು) ರೂಪಿಣೀ ಚ ರುಕ್ಮಿಣೀ ।**
**ಮುಖೇನ ಬಾಹುನಾಪ್ಯಯಂ ಸಮಸ್ತ ಲೋಕ ಜಿದ್ವಶೀ ॥೨೩॥**

ಶ್ರೀಕೃಷ್ಣನು ಮೂರು ಲೋಕಗಳಲ್ಲೂ ಸುಂದರನಾಗಿದ್ದಾನೆ. ಅದರಂತೆ ರುಕ್ಮಿಣಿಯೂ ಕೂಡ. ಶ್ರೀಕೃಷ್ಣನು ತನ್ನ ಮುಖಸೌಂದರ್ಯದಿಂದ, (ಪ್ರಬಲವಾದ ಕಾಂತಿಯಿಂದ) ಅಲ್ಲದೆ ಬಾಹುಬಲದಿಂದಲೂ ಸಮಸ್ತ ಲೋಕಗಳನ್ನು ಗೆದ್ದಿದ್ದಾನೆ.

**ಸಮಸ್ತ ವೇದಿನಾಂ ವರಂ ಜಿತಾರಿಮಗ್ರ್ಯ ರೂಪಿಣಂ ।**
**ಸಮಸ್ತ ಯೋಷಿತಾಂ ವರಾ ವ್ರಜೇತ ರುಕ್ಮಿಣೀ ಧ್ರುವಂ ॥೨೪॥**

ಸರ್ವಜ್ಞರಲ್ಲಿ ಶ್ರೇಷ್ಠನಾದವನು, ಮನ್ಮಥನನ್ನು ಗೆದ್ದವನು, ಸುಂದರನಾದ ಶ್ರೀಕೃಷ್ಣನನ್ನು, ಎಲ್ಲ ಸ್ತ್ರೀಯರಲ್ಲಿ ಶ್ರೇಷ್ಠಳಾದ ಮತ್ತು ಸುಂದರಿಯೂ ಆದ ರುಕ್ಮಿಣಿ ದೇವಿಯು ಸಹಜವಾಗಿ ಮೆಚ್ಚುತ್ತಾಳೆ. ಇದು ನಿಶ್ಚಿತ.

**ವಯಂ ಚ ಮಾನ ಸಂಕ್ಷಯಂ ನಿತಾಂತಮಾಪ್ನು ಮಸ್ತದಾ ।**
**ನ ಶಕ್ನುಮೋ ನಿವಾರಿತುಂ ಶರೈರಮುಂ ಕಥಂಚನ ॥೨೫॥**

ಆಗ ನಮಗೆಲ್ಲರಿಗೂ ಮಾನಭಂಗವಾಗುತ್ತದೆ. ಆತನನ್ನು ನಾವು ಬಾಣಗಳಿಂದಾಗಲಿ, ಬಲದಿಂದಾಗಲಿ ತಡೆಯಲಾರೆವು.

**ಕಾರಣ –**

**ಅತಃ ಸ್ವಯಂವರೇ ಯಥಾ ನ ಸಂಗಮೋ ಹರೇರ್ಭವೇತ್ ।**
**ತಥಾ ವಿಧಾನಮೇವ ನಃ ಸುನೀತಿ ರೂರ್ಜಿತಾ ಧ್ರುವಂ ॥೨೬॥**

ನಾವೆಲ್ಲರೂ ಸೇರಿ ಶ್ರೀಕೃಷ್ಣನು ಸ್ವಯಂವರಕ್ಕೆ ಬಾರದಂತೆ ಮಾಡಬೇಕು. ಆ ವಿಧವಾದ ಪ್ರಯತ್ನವೇ ನಮಗೆ ಉತ್ತಮವಾದ ನೀತಿಯಾಗುತ್ತದೆ. ಇದು ನಿಶ್ಚಿತ.

**ಅತೋ ನ ದೇಯಮಸ್ಯ ನಃ ಸುಭೂಭುಜಾಂ ಸಮಾಗಮೇ**
**ಕ್ವಚಿತ್ ಕದಾಚಿದಾಸನಂ ನ ಚಾರ್ಘ್ಯಪೂರ್ವಕೋ ವಿಧಿಃ ॥೨೭॥**

ಕಾರಣ, ನಾವೆಲ್ಲ ರಾಜರು ಕುಳಿತಿರುವ ಸಮಯದಲ್ಲಿ, ಇಲ್ಲಾಗಲಿ, ಮತ್ತೆಲ್ಲಿಯೇ ಆಗಲಿ, ಅವನು ಬಂದರೆ, ಅವನಿಗೆ ಆಸನವನ್ನು ಕೊಡಬಾರದು. ಅರ್ಘ್ಯ ಪಾದ್ಯಾದಿ ವಿಧಿಪೂರ್ವಕ (ಅವನನ್ನು) ಸತ್ಕರಿಸಬಾರದು.

ಈ ರೀತಿ ಮಾಡಿದರೆ,

**ನ ಚಾಸ್ಯತಿ ಕ್ಷಿತೌ ಕ್ವಚಿತ್ ವಿಮಾನಿತಃ ಪುರೋ ಹಿ ನಃ ।**
**ಮಹಾಸನಸ್ಥ ಭೂಭುಜಾಂ ಸಮಾನಿತೋ ಹಿ ದೈವತೈಃ ॥೨೮॥**

ದೇವತೆಗಳಿಂದಲೂ ಪೂಜಿಸಲ್ಪಡುವ ಆ ಶ್ರೀಕೃಷ್ಣನು, ನಾವೆಲ್ಲ ರಾಜರು ಶ್ರೇಷ್ಠವಾದ ಆಸನಗಳಲ್ಲಿ ಕುಳಿತಿರುವಾಗ ನಮ್ಮೆದುರಿನಲ್ಲಿ ಅವಮಾನಿತನಾಗಿ ಭೂಮಿಯ ಮೇಲೆ ಕೂಡಲಾರನು.

ಅದರಿಂದ

**ಸ ದರ್ಪಮಾನ ಸಂಯುತಃ ಕ್ರುಧಾ ಪ್ರಯಾಸ್ಯತಿ ಧ್ರುವಂ ।**
**ಪುರೀಂ ಸ್ವಕಾಂ ತತೋ ವಯಂ ವಿಧೇಮ ಚ ಸ್ವಯಂವರಂ ॥೨೯॥**

ಗರ್ವದಿಂದ ಅಭಿಮಾನದಿಂದ ಕೂಡಿದ ಶ್ರೀಕೃಷ್ಣನು ಕ್ರುದ್ಧದಾನಿ, ಅವಮಾನಿತ–ನಾಗಿ, ಇಲ್ಲಿ ನಿಲ್ಲದೆ, ತನ್ನ ಪಟ್ಟಣಕ್ಕೆ ತಿರುಗಿ ಹೋಗುತ್ತಾನೆ ಇದು ಖಂಡಿತ. ನಂತರ ನಾವು ಸ್ವಯಂವರವನ್ನು ನಡಿಸೋಣ.

**ಇತಿ ಸ್ಮ ಸರ್ವಭೂಭುಜಾಂ (ಭೃತಾಂ) ವಿನಿಶ್ಚಯಂ ಸಕೈಶಿಕಃ ।**
**ಕ್ರಥೋಽವಗಮ್ಯ ಭೀಷ್ಮ ಕಾನುಜೋಽಭ್ಯಯಾದ್ಧರಿಂ ದ್ರುತಂ ॥೩೦॥**

ಈ ಪ್ರಕಾರವಾಗಿ ಎಲ್ಲ ರಾಜರು ಕೂಡಿ ನಿಶ್ಚಯಿಸಿದ ವರ್ತಮಾನವನ್ನು ಕ್ರಥ ಎಂಬ ರಾಜನು ಭೀಷ್ಮಕನ ತಮ್ಮನಾದ ಕೈಶಿಕನಿಂದ ತಿಳಿದುಕೊಂಡನು. ನಂತರ ಅವನು ಶ್ರೀಕೃಷ್ಣನ ಹತ್ತಿರ ಶೀಘ್ರವಾಗಿ ನಡೆದನು.

**ಪ್ರಣಮ್ಯ ಪಾದಪದ್ಮಯೋರ್ನಿಜಂ ಗೃಹಂ ಪ್ರವೇಶ್ಯ ಚ ।**
**ಮಹಾಸನಂ ಪ್ರದಾಯ ತೌ ಪ್ರಚಕ್ರತುರ್ವರಾರ್ಚನಂ ॥೩೧॥**

ಕ್ರಥ ಮತ್ತು ಕೌಶಿಕರು ಶ್ರೀಕೃಷ್ಣನ ಹತ್ತಿರ ಬಂದು ಆತನ ಪಾದಪದ್ಮಗಳಿಗೆ ನಮಸ್ಕರಿಸಿದರು. ತಮ್ಮ ಮನೆಗೆ ಕರೆದೊಯ್ದರು. ಉಚಿತವಾದ ಆಸನದಲ್ಲಿ ಕುಳ್ಳಿರಿಸಿ, ಆತನಿಗೆ ಶ್ರೇಷ್ಠವಾದ ಗೌರವವನ್ನಿತ್ತು ಪೂಜಿಸಿದರು.

**ಅಥಾಗಮಚ್ಛತಕ್ರತೋರ್ವಚಃ ಪ್ರಗೃಹ್ಯ ಭೂಭುಜಃ ।**
**ಜರಾಸುತಾದಿಕಾನ್ ಪುಮಾನುವಾಚ ಚಾರ್ಥವದ್ವಚಃ ॥೩೨॥**

ಅದೇ ಕಾಲದಲ್ಲಿ ದೇವೇಂದ್ರನ ಅಪ್ಪಣೆಯಂತೆ ಓರ್ವ ದೂತನು ಆ ರಾಜರ ಸಮೀಪಕ್ಕೆ ಬಂದು, ಜರಾಸಂಧನೆ ಮೊದಲಾದ ರಾಜರನ್ನು ಕುರಿತು ಒಂದು ಮಹತ್ವವಾದ ಅರ್ಥವುಳ್ಳ ಮಾತನ್ನು ಹೇಳಿದನು.

**ಅಹಂ ಪ್ರಿಯಃ ಶಚೀಪತೇಃ ಸದಾಸ್ಯ ಚಾಕ್ಷಿಗೋಚರಃ ।**
**ಸುರೇಂದ್ರ ಆಜ್ಞಿಯಾಽವದನ್ನೃಪಾನ್ಸ ಈಶ್ವರೋ ಹಿ ಸಃ ॥೩೩॥**

ನಾನು ದೇವೇಂದ್ರನಿಗೆ ಅತಿಪ್ರಿಯನಾದವನು. ಯಾವಾಗಲೂ ಆತನ ಕಣ್ಣ ಮುಂದೆ ಓಡಾಡತಕ್ಕವನು. ಆ ದೇವೇಂದ್ರನು ನಿಮಗೆಲ್ಲರಿಗೂ ಸ್ವಾಮಿಯಾಗಿದ್ದಾನೆ. ಆತನ ಆಜ್ಞೆಯನ್ನೇ ನಾನು ನಿಮಗೆ ಹೇಳುತ್ತೇನೆ.

**ಸಮಸ್ತ ರಾಜ ಸತ್ಪತಿರ್ಹರಿರ್ನಚಾಸ್ಯ ಇತ್ಯಪಿ ।**
**ವರಾಭಿಷೇಕಮಿಾಸಿತುಃ ಕುರುಧ್ವಮಾಶ್ವ ಸಂಶಯಂ ॥೩೪॥**

ಸಮಸ್ತ ರಾಜರಿಗೆಲ್ಲ ಶ್ರೀಹರಿಯೇ ಸ್ವಾಮಿಯು. ಅನ್ಯರು ಯಾರೂ ಇಲ್ಲ. ಇದರಲ್ಲಿ ಸಂಶಯವನ್ನು ತೋರದೆ, ನೀವೆಲ್ಲರು ಆ ಶ್ರೀಕೃಷ್ಣನಿಗೆ ಶ್ರೇಷ್ಠವಾದ ಮತ್ತು ಉತ್ತಮವಾದ ಅಭಿಷೇಕವನ್ನಿತ್ತು ಶೀಘ್ರದಲ್ಲಿ ಆದರಿಸಿರಿ.

**ಅತೋಽನ್ಯಥಾ ಶಿರಸ್ಯಹಂ ನಿಪಾತಯಾಮಿ ವೋಽಶನಿಂ ।**
**ಇತೀದ ಮಿಂದ್ರ ಶಾಸನಂ ಕುರುಧ್ವಮಿತ್ಯಸೌ ಯಯೌ ॥೩೫॥**

"ನಾನು ಹೇಳಿದಂತೆ ಮಾಡದಿದ್ದಲ್ಲಿ, ನಿಮ್ಮ ತಲೆಗಳ ಮೇಲೆ ವಜ್ರಾಯುಧವನ್ನು ಹಾಕುತ್ತೇನೆ" ಇದು ಇಂದ್ರನ ಶಾಸನವಿದೆ. ಕಾರಣ ಆತನು ಹೇಳಿದಂತೆ ಕೂಡಲೇ ಮಾಡಿರಿ ಎಂದು ಹೇಳಿ ಆ ದೂತನು ಹೊರಟುಹೋದನು.

**ತದೀರಿತಂ ನಿಶಮ್ಯ ತೇ ಪುನಃ ಸುತಪ್ತ ಚೇತಸಃ ।**
**ಬಭೂವುರೂಚಿರೇ ವಚಃ ಸುಗರ್ವಿತೋಽಹಿ ವಾಸವಃ ॥೩೬॥**

ಆ ದೂತನ ಮಾತುಗಳನ್ನು ಕೇಳಿದ ರಾಜರೆಲ್ಲರು ಪುನಃ ಸಂತೃಪ್ತಚಿತ್ತರಾಗಿ ಮೌನವನ್ನು ತಾಳಿದರು. ಅವರಲ್ಲೊಬ್ಬನು, "ಈಗ ದೇವೇಂದ್ರನು ಬಹಳ ಗರ್ವಿಷ್ಠನಾಗಿದ್ದಾನೆ" ಎಂದು ಸಿಡುಕಿನಿಂದ ನುಡಿದನು.

**ಪುರಾ ಬಿಭೇತ ನಃ ಸದಾ ಪ್ರತಿ ಪ್ರತಿ ಸ್ಮ ವಾಸವಃ ।**
**ಉತಾದ್ಯ ಕೃಷ್ಣ ಸಂಶಯಾದ್ಧೃಢಂ ವಿಭೀಷಯತ್ಯ (ತ್ಯ) ಸೌ ॥೩೭॥**

ಮೊದಲು ಇದೇ ದೇವೇಂದ್ರನು, ನಮ್ಮಲ್ಲಿ ಒಬ್ಬೊಬ್ಬರಿಗೂ ಹೆದರುತ್ತಿದ್ದನು. ಈಗ ಅದೇ ದೇವೇಂದ್ರನು ಶ್ರೀಕೃಷ್ಣನ ಆಶ್ರಯದಿಂದ ನಮ್ಮೆಲ್ಲರನ್ನೂ ಹೆದರಿಸುತ್ತಿದ್ದಾನೆ.

**ಅದೃಶ್ಯ ಏವ ದೇವರಾಡ್ಯದಿಸ್ಮ ವಜ್ರಮುತ್ಸೃಜೇತ್ ।**
**ಭವೇಮ ಪೀಡಿತಾ ವಯಂ ವರಾದಮೃತ್ಯ ವೋಽಪಿ ಹಿ ॥೩೮॥**

ಒಂದು ವೇಳೆ ದೇವೇಂದ್ರನು ಅದೃಶ್ಯವಾಗಿ ತನ್ನ ವಜ್ರಾಯುಧವನ್ನು ನಮ್ಮ ಮೇಲೆ ಒಗೆದರೆ, ನಾವು ಅವಧ್ಯರಾದಾಗ್ಯೂ ನಮಗೆ ಪೀಡೆ ತಪ್ಪಿದ್ದಲ್ಲ. (ಕನಿಷ್ಠ ಅಂಗಗಳಾದರೂ ನ್ಯೂನವಾಗುವವು)

**ಪುರಾ ದಿವಿ ಸ್ಥಿತಸ್ಯ ಚ ಪ್ರಮರ್ದನೇ ವಯಂ ಕ್ಷಮಾಃ ।**
**ಉತಾದ್ಯ ಯದ್ಯಮುಂ ವಯಂ ವ್ರಜೇಮ ಕೃಷ್ಣ ಏಷ್ಯತಿ ॥೩೯॥**

ಹಿಂದೆ ಸ್ವರ್ಗಲೋಕದಲ್ಲಿದ್ದ ಇದೇ ಇಂದ್ರನನ್ನು ನಾವು ಮರ್ದಿಸಲು ಸಮರ್ಥರಾಗಿದ್ದೆವು. ಈಗ ಅದೇ ಇಂದ್ರನ ಮೇಲೆ ನಾವು ದಾಳಿ ಮಾಡಿದರೆ ಶ್ರೀಕೃಷ್ಣನು ಸಹಾಯಕ್ಕಾಗಿ ಬರುವನು.

**ಅತೋಽಭಿಷೇಚ ನಾದ್ಯದೀಹ ಶಾರ್ಙ್ಗಿಣಃ ಶಚೀ ಪತಿಃ ।**
**ನ ವಜ್ರ ಮುತ್ಸೃಜೇತ್ತದಾಽಭಿಷೇಚಯಾಮ ತಂ ವಯಂ ॥೪೦॥**

ಶ್ರೀಕೃಷ್ಣನಿಗೆ ಅಭಿಷೇಕ ಮಾಡಿದ ಪಕ್ಷದಲ್ಲಿ ಇಂದ್ರನು ನಮ್ಮ ಮೇಲೆ ವಜ್ರಾಯುಧವನ್ನು ಬೀಳಿಸುವದಿಲ್ಲ. ಅದಕ್ಕಾಗಿ ನಾವೆಲ್ಲರೂ ಸೇರಿ ಶ್ರೀಕೃಷ್ಣನಿಗೆ ಅಭಿಷೇಕ ಮಾಡಿದರಾಯಿತು! ಎಂದು ಎಲ್ಲರೂ ಸಿದ್ಧರಾದರು.

**ಅತೋಽನ್ಯಥಾ ದನುರ್ಯಥಾ ವರಾದವಧ್ಯತ್ಯು ಕೋಽಪಿ ಸನ್ ।**
**ಸುರೇಂದ್ರ ವಜ್ರ ತಾಡಿತೋ ಬಭೂವ ಕುಕ್ಷಿಗಾಸ್ಯಯುಕ್ ॥೪೧॥**

'ದನು' ಎಂಬ ಗಂಧರ್ವನ ಮೇಲೆ ಇಂದ್ರನು ವಜ್ರಾಯುಧವನ್ನು ಎಸೆದನು. ಆಗ ಅವನು ಅವಧ್ಯನಾಗಿದ್ದರೂ ಅವನ ತಲೆ ಹೊಟ್ಟೆಯಲ್ಲಿ ಇಳಿಯಿತು. (ಈಗ ನಾವು ದೇವೇಂದ್ರನ ಮಾತು ಕೇಳದಿದ್ದಲ್ಲಿ ನಮಗೂ ಹಾಗೇ ಆದೀತು).

**ತಥೈವ ಕೃಷ್ಣ ಸಂಶ್ರಯಾತ್ಸ ನಃ ಶಚೀಪತಿರ್ನ ಯೇತ್ ।**
**ಇತಿ ಸ್ಮ ನಿಶ್ಚಿತಾ ನೃಪಾನಯಾತಯಂತ ಶೌರಯೇ ॥೪೨॥**

ನಾವು ದೇವೇಂದ್ರನು ಹೇಳಿದಂತೆ ಮಾಡದಿದ್ದಲ್ಲಿ ಕೃಷ್ಣನ ಸಹಾಯದಿಂದ ಇಂದ್ರನು ನಮ್ಮ ಮೇಲೆ ದಾಳಿ ಮಾಡಿಯಾನು. ಹೀಗೆ ಯೋಚಿಸಿ, ಕೃಷ್ಣನಿಗೆ ಅಭಿಷೇಕ ಮಾಡುವುದಕ್ಕಾಗಿ ಕೆಲವು ರಾಜರನ್ನು ಕಳಿಸಿದರು.

**ವಿ. ವಿ. :** ಜರಾಸಂಧ, ಶಿಶುಪಾಲ, ದಂತವಕ್ರ ಮುಂತಾದವರು ಅಹಂಕಾರ ದಿಂದ ಹೋಗಲಿಲ್ಲ.

**ಸಮಸ್ತ ಶೋ ಜರಾಸುತಾದಿಭಿಃ ಕೃತೇಽಭಿಷೇಚನೇ ।**
**ಅತೀವ ಭಗ್ನ ಮಾನಕಾ ಸ್ಮ ಚಾಸುಯಾತಿ ಕಶ್ಚನ ॥೪೩॥**

ಸಮಸ್ತ ರಾಜರಿಂದ ಕೂಡಿಕೊಂಡು ಭಗ್ನ ಮನಸ್ಕನಾಗಿ ಜರಾಸಂಧನು ಕೂಡ ಶ್ರೀಕೃಷ್ಣನಿಗೆ ಪೂರ್ಣಕುಂಭದಿಂದ ಅಭಿಷೇಕ ಮಾಡಿದರೆ ಇದನ್ನು ನೋಡಿದ ಅನೇಕ ರಾಜರು ಶ್ರೀಕೃಷ್ಣನತ್ತ ವಾಲುತ್ತಾರೆ. ಜರಾಸಂಧನ ಅನುಯಾಯಿಗಳು ಬಹಳ ಕಡಿಮೆ ಆದಾರು !

**ಸಮಾಶ್ರಯಂ ಚ ಕೇಶವಂ ತದೈವ ಜೀವನಾರ್ಥಿನಃ ।**
**ಪ್ರ ಕುರ್ಯು ರಾಸುರಾ ಅಪೀತಿ ದೇವಕಾರ್ಯ ಸಂಕ್ಷಯಃ ॥೪೪॥**

**ಇತೀಕ್ಷ್ಯ ಪಾಕಶಾಸನೋऽವದಚ್ಚರಾ ಸುತಾದಿಕಾನ್ ।**
**ಸ ರುಕ್ಮಿ ಸಾಲ್ವ ಚೇದಿ (ಚೇದಿ ಸಾಲ್ವ) ಪೊ ನ ಯಾತು ಮಾಗಧೋ ಹರಿಂ ॥೪೫॥**

## ಜರಾಸಂಧಾದಿಗಳು ಏಕೆ ಹೋಗಲಿಲ್ಲ?

ಎಲ್ಲ ದೈತ್ಯರು ಶ್ರೀಕೃಷ್ಣನೇ ದೊಡ್ಡವನೆಂದು ತಿಳಿದು ಅತನನ್ನು ಆಶ್ರಯಿಸಿದರೆ, ಶರಣಾಗತರನ್ನು ರಕ್ಷಿಸುವುದು ಆತನ ಕಾರ್ಯವಾಗುತ್ತದೆ. ಆದರಿಂದ ದೇವಕಾರ್ಯ ಆಗಲಾರದು. ಇದನ್ನು ತಿಳಿದ ದೇವೇಂದ್ರನು ಇನ್ನೊಬ್ಬ ದೂತನ ಮೂಲಕ ಜರಾಸಂಧ ಇತ್ಯಾದಿಗಳಿಗೆ ಹೋಗದಂತೆ ಮಾರ್ಗದರ್ಶನ ವಿತ್ತನು.

**ತತಸ್ತು ತಾನ್ವಿನಾ ಪರೇऽಧಿರಾಜ ರಾಜ ಇತ್ಯಮುಂ ।**
**ತದಾಭಿಷೇಕ್ತು ಮುದ್ಯತಾ ನೃಪಾಃ ಸುರೇಶಶಾಸನಾತ್ ॥೪೬॥**

ಇಂದ್ರನ ಆಜ್ಞೆಯಂತೆಯೇ ಆಗಲಿ ಎಂದು, ಜರಾಸಂಧ ಮೊದಲಾದ ಕೆಲವು ರಾಜರನ್ನು ಬಿಟ್ಟು, ಉಳಿದ ರಾಜಾಧಿರಾಜರೆಲ್ಲರು ಶ್ರೀಕೃಷ್ಣನ ಅಭಿಷೇಕದಲ್ಲಿ ಉದ್ಯುಕ್ತರಾಗಿದ್ದರು.

**ತತಃ ಶಚೀಪತಿನಿರ್ಜಂ ವರಾಸನಂ ಹರೇರದಾತ್ ।**
**ವಿವೇಶ ತತ್ರ ಕೇಶವೋ ನಭಸ್ಥಳಾವತಾರಿತೇ ॥೪೭॥**

ಆಗ ಶಚೀಪತಿಯಾದ ಇಂದ್ರನು ಶ್ರೀಕೃಷ್ಣನಿಗಾಗಿ ತನ್ನ ಉತ್ತಮವಾದ ಆಸನವನ್ನು ಅಲ್ಲಿಗೆ ಕಳಿಸಿಕೊಟ್ಟನು. ಆಕಾಶದಿಂದ ಬಂದ ಆ ಆಸನದಲ್ಲಿ ಶ್ರೀಕೃಷ್ಣನು ಅಲಂಕರಿಸಿದನು.

**ಕರೇ ಪ್ರಗೃಹ್ಯ ಕೇಶವೋ ನ್ಯವೇಶಯತ್ಸ ಹಾऽಸನೇ**
**ಪತತ್ರಿ ಪುಂಗವಂ ಚ ತೌ ಸ ಭೀಷ್ಮ ಕಾನಜೌ ಪ್ರಭುಃ ॥೪೮॥**

ಶ್ರೀಕೃಷ್ಣನು, ಗರುಡನನ್ನು, ಭೀಷ್ಮಕ ರಾಜನ ತಮ್ಮಂದಿರಾದ ಕ್ರಥ–ಕೌಶಕರನ್ನು ಕೈಹಿಡಿದು ಕರೆ ತಂದು ಇಂದ್ರನು ಕಳುಹಿದ ಆ ಆಸನದಲ್ಲಿ ಕುಳ್ಳಿರಿಸಿದನು.

**ಅಥಾಖಿಲಾ ನರೇಶ್ವರಾ ಮುನೀಂದ್ರ ಸಂಯುತಾ ಹರಿಂ ।**
**ಸುಶಾತ ಕೌಂಭಕುಂಭಕೈಃ ಪ್ರಚಕ್ರು ರಾಭಿಷೇಕಿಣಂ ॥೪೯॥**

ಆನಂತರ ಎಲ್ಲ ರಾಜರು ಋಷಿಮುನಿಗಳನ್ನು ಕೂಡಿಕೊಂಡು ಸುವರ್ಣ ಕಲಶಗಳಲ್ಲಿ ಪವಿತ್ರವಾದ ನೀರನ್ನು ತಂದು ಶ್ರೀಕೃಷ್ಣನಿಗೆ ಅಭಿಷೇಕ ಮಾಡಿದರು.

**ವಿರಿಂಚ ಶರ್ವ ಪೂರ್ವಕೈರಭಿಷ್ಟುತಃ ಸುರಾದಿಭಿಃ ।**
**ಸಮಸ್ತ ದೇವಗಾಯಕೈಃ ಪ್ರಗೀತ ಆಸ ಕೇಶವಃ ॥೫೦॥**

ಬ್ರಹ್ಮ, ರುದ್ರ, ಮೊದಲಾದ ದೇವತೆಗಳು ಸಂತೋಷಗೊಂಡು ಸ್ತುತಿಸಿದರು. ಮತ್ತು ಗಂಧರ್ವ ಮೊದಲಾದ ಗಾಯಕರು ಕೇಶವನನ್ನು ಅನೇಕ ಹಾಡುಗಳಿಂದ ಹೊಗಳಿದರು.

**ಅಥಾಽಹ ಭೀಷ್ಮಕಂ ಪ್ರಭುಃ ಸ್ವಯಂವರಃ ಕಿಲ ತ್ವಯಾ ।**
**ಅಭೀಪ್ಸಿತಃ ಸುತಾಕೃತೇ ಶುಭಾಯತೇ ಭವೇನ್ನ ಸಃ ॥೫೧॥**

"ನಿನ್ನ ಮಗಳಿಗಾಗಿ ನೀನು ಇಷ್ಟಪಟ್ಟು ಏರ್ಪಡಿಸಿರುವ ಈ ಸ್ವಯಂವರವು ನಿನಗೆ ಮಂಗಳಕರವಾಗಲಾರದು" ಹೀಗೆಂದು ಭೀಷ್ಮಕ ರಾಯನಿಗೆ ಪ್ರಭುವಾದ ಶ್ರೀಕೃಷ್ಣ ಹೇಳಿದನು.

**ಇಯಂ ರಮಾ ತವಾತ್ಮಜಾ ಬಭೂವ ತಾಂ ಹರೇರ್ನ ಚೇತ್ (ಚ) ।**
**ದದಾತಿ ಚೇತ್ತದಾ ಪಿತಾ ನಿರಿಂದಿರೋ ವ್ರಜೇದಧಃ ॥೫೨॥**

ಈಕೆಯೇ ರಮಾದೇವಿ. ನಿನಗೆ ಮಗಳಾಗಿ ಹುಟ್ಟಿದ್ದಾಳೆ. ಆಕೆಯು ಶ್ರೀಹರಿಯ ಹೊರತು ಅನ್ಯರಿಗೆ ಯೋಗ್ಯಳಲ್ಲ. ನೀನು ತಂದೆಯಾಗಿ ಆಕೆಯನ್ನು ಅನ್ಯರಿಗೆ ಕೊಟ್ಟೆಯಾದರೆ, ಲಕ್ಷ್ಮಿ ಇಲ್ಲದವನಾಗಿ, ಸಂಪತ್ತನ್ನು ಕಳೆದುಕೊಂಡು ಅಧೋಗತಿಯನ್ನು ಹೊಂದುತ್ತಿ.

**ಹಿತಾಯ ಚೈತದೀರಿತಂ ತವಾನ್ಯಥಾ ನ ಚಿಂತಯ ।**
**ನ ಯೋಷಿ ದಿಚ್ಛಯಾ ತ್ವಹಂ ಬ್ರವೀಮಿ ಪಶ್ಯ ಯಾದೃಶಃ ॥೫೩॥**

ನಿನ್ನ ಹಿತಕ್ಕಾಗಿಯೇ ನಾನು ನಿನಗೆ ಈ ಮಾತನ್ನು ಹೇಳುತ್ತಿದ್ದೇನೆ. ನೀನು ಅನ್ಯಥಾ ಆಲೋಚಿಸಬೇಡ. ನನಗೆ ಹೆಂಡತಿ ಬೇಕೆಂಬ ಇಚ್ಛೆಯಿಂದಲೂ ಈ ಮಾತನ್ನು ಹೇಳುವುದಿಲ್ಲ. ನಾನು ಎಂಥವನು. ನನ್ನ ಸಂಪತ್ತು ಎಂತಹುದು ಎಂಬುದನ್ನಾದರೂ ನೋಡು" ಎಂದು ಶ್ರೀಕೃಷ್ಣನು ಭೀಷ್ಮಕ ರಾಜನಿಗೆ ಹೇಳಿದನು.

**ಉದೀರ್ಯ ಚೈವಮೀಶ್ವರಶ್ಚಕಾರ ಹಾಽವಿರಾತ್ಮನಃ ।**
**ಸ ವಿಶ್ವರೂಪ ಮುತ್ತಮಂ ವಿಸಂಖ್ಯ ಶೀರ್ಷಬಾಹುಕಂ ॥೫೪॥**

**ಅನಂತತೇಜ ಆತತಂ ವಿಸಂಖ್ಯ ರೂಪ ಸಂಯುತಂ ।**
**ವಿಚಿತ್ರ ಮೌಲಿ ಕುಂಡಲಾಂಗದೋ ರುಹಾರ ನೂಪುರಂ ॥೫೫॥**

**ಜ್ವಲತ್ಸು ಕೌಸ್ತುಭಪ್ರಭಾಽಪ್ರಭಾಸಕಂ ಶುಭಾಂಬರಂ ।**
**ಪ್ರಪಶ್ಯ ಯಾದೃಶಾಃ ಸ್ತ್ರಿಯೋ ಮಮೇತ್ಸ ದರ್ಶಯಾತ್ಶ್ರಿಯಂ ॥೫೬॥**

**ಅನಂತ ರೂಪಿಣೀಂ ಪರಾಂ ಮನುಷ್ಯದೃಷ್ಟಿತೋಽಧಿಕಾಂ ।**
**ಸ ರುಕ್ಮಿಣೀ ತನೋರಪಿ ವ್ಯದರ್ಶಯಚ್ಚ ದೇವತಾಃ ॥೫೭॥**

ಇಲ್ಲಿ ನೋಡು ಎಂದು ಶ್ರೀಕೃಷ್ಣನು ನುಡಿಯುತ್ತಿರಲು, ಭೀಷ್ಮಕನಿಗೆ ಶ್ರೇಷ್ಠವಾದ ವಿಶ್ವರೂಪದ ದರ್ಶನ ಆಗಹತ್ತಿತು. ಅಸಂಖ್ಯವಾದ ತಲೆಗಳು, ಬಾಹುಗಳು, ವಿಚಿತ್ರವಾದ ತೇಜಸ್ಸು, ಅನಂತ ಬ್ರಹ್ಮಾಂಡಗಳು, ಅಸಂಖ್ಯ ರೂಪಗಳು, ವಿಚಿತ್ರವಾದ ಕರ್ಣಕುಂಡಲಗಳು, ಅಮೌಲ್ಯ ಆಭರಣಗಳು, ಹಾರಗಳು, ನೂಪುರಗಳು, ಸೂರ್ಯನಂತೆ ಥಳಥಳಿಸುವ ಕೌಸ್ತುಭ, ಮಂಗಲಕರವಾದ, ಒಳ್ಳೆಯ ಪೀತಾಂಬರ ಇವೆಲ್ಲವು ಕಾಣತೊಡಗಿದವು.

ಮುಂದೆ ನೋಡು ನನ್ನಲ್ಲಿ ಎಂತೆಂಥ ಸ್ತ್ರೀಯರು ಇದ್ದಾರೆ ಎಂಬುದನ್ನು ನಿನ್ನ ರುಕ್ಮಿಣೀ ದೇವಿಯರಿಗಿಂತಲೂ ಅಧಿಕವಾದ ರೂಪವುಳ್ಳವರು, ಲಕ್ಷ್ಮೀದೇವಿಯರು, ಇನ್ನಿತರ ಬ್ರಹ್ಮಾದಿ ದೇವತೆಗಳನ್ನೂ ನೋಡು ಎಂದು ತನ್ನ ವಿಶ್ವರೂಪವನ್ನು ತೋರಿಸಿದನು.

**ವಿ. ವಿ. :** ಇಲ್ಲಿ ಶ್ರೀ ಮದಾಚಾರ್ಯರು 'ವಿಸಂಖ್ಯ ರೂಪ ಸಂಯುತಂ' ಎಂಬ ಪದವನ್ನು ಬಳಸಿ, ಮತ್ಸ್ಯ, ಕೂರ್ಮ, ವರಾಹ ಮೊದಲಾದ ಅವತಾರಗಳ ದರ್ಶನವನ್ನು ಮಾಡಿಸಿದ್ದಾರೆ. ಇನ್ನಿತರ ಪ್ರಾಣಿಗಳನ್ನೂ ತೋರಿಸಿದ್ದಾರೆ ಎಂಬ ಅಭಿಪ್ರಾಯ ವನ್ನು ವ್ಯಕ್ತಪಡಿಸಿದ್ದಾರೆ.

ಅದೇ ರೀತಿಯಾಗಿ 'ಮನುಷ್ಯದೃಷ್ಟಿತೋಽಧಿಕಾಂ' ಎಂಬ ಪದದಿಂದ, ಲಕ್ಷ್ಮೀದೇವಿಯರು ಅಧಿಕ ಸುಂದರರು, ರುಕ್ಮಿಣಿ ದೇವಿಯರು ಕಡಿಮೆ ಎಂಬ ಭಿನ್ನಾಭಿಪ್ರಾಯ ಬಂದೀತೆಂಬ ಸಂಶಯ ದೃಷ್ಟಿಯನ್ನು ಮನುಷ್ಯ ದೃಷ್ಟಿಯಿಂದ ಎಂದು ಹೇಳಿ ಸಂಶಯ ಪರಿಹಾರ ಮಾಡಿದ್ದಾರೆ. "ಅವತಾರಗಳಲ್ಲಿ ಭೇದವಿಲ್ಲ" "ಅಂದರೆ ರುಕ್ಮಿಣಿ ದೇವಿಯರು ಬೇರೆಯಲ್ಲ ಲಕ್ಷ್ಮಿದೇವಿಯರು ಬೇರೆಯಲ್ಲ" ಎಂಬ ಸ್ಥಿರವಾದ ಸಿದ್ಧಾಂತವನ್ನು ಸ್ಥಿರಪಡಿಸಿದ್ದಾರೆ.

**ತದದ್ಭುತಂ ಸಮೀಕ್ಷ್ಯೈ ತು ಪ್ರಭೀತ ಆಸ (ಸು) ಭೀಷ್ಮಕಃ ।**
**ಪಪಾತ ಪಾದಯೋರ್ವಿಭೋಃ ಕರೋಮಿ ತತ್ತಥೇತಿ ಚ ॥೫೮॥**

ಆ ಅದ್ಭುತವಾದ ದೃಶ್ಯವನ್ನು ಕಂಡು ಭೀಷ್ಮಕ ರಾಜನು ಅತಿಯಾಗಿ ಭಯಗೊಂಡನು. ಶ್ರೀಕೃಷ್ಣನ ಪಾದಗಳಿಗೆ ನಮಸ್ಕರಿಸಿದನು. ನೀವು ಹೇಳಿದಂತೆ ಮಾಡುತ್ತೇನೆ ಎಂದು ಶ್ರೀಕೃಷ್ಣನಿಗೆ ಮತ್ತೊಮ್ಮೆ ಪ್ರಣಾಮಗಳನ್ನು ಮಾಡಿದನು.

**ಪುನಶ್ಚ ವಿಶ್ವರೂಪತಾಂ ಪಿಧಾಯ ಪದ್ಮಲೋಚನಃ ।**
**ಜಗಾಮ ಪಕ್ಷಿವಾಹನಃ ಪುರೀಂ ಸ್ವಬಾಹುಪಾಲಿತಾಂ ॥೫೯॥**

ಕಮಲನೇತ್ರನಾದ ಶ್ರೀಕೃಷ್ಣನು ವಿಶ್ವರೂಪವನ್ನು ಸಮಾಪ್ತಗೊಳಿಸಿದನು. ಪುನಃ ತನ್ನ ಬಾಹುಬಲದಿಂದ ರಕ್ಷಿಸಲ್ಪಟ್ಟ, ತನ್ನ ಪಟ್ಟಣಕ್ಕೆ ಪಕ್ಷಿವಾಹನನಾಗಿ ನಡೆದನು.

**ಅಪಾಂ ಪತಿಶ್ಚ ಮೈಥಿಲಃ ಸ್ವಯಂವರಂ ಕೃತಾವಪಿ ।**
**ಹರಿಂ ವಿನಿಶ್ಚಯಾದಿಯುಂ ವ್ರಜೇದಿತಿ ಸ್ಮ ಚಕ್ರತುಃ ॥೬೦॥**

ಜ್ಞಾನಿಗಳಾದ ಜನಕರಾಜ ಮತ್ತು ವರುಣ, ಇವರುಗಳು ಸೀತಾದೇವಿ ಮತ್ತು ಲಕ್ಷ್ಮಿದೇವಿಯರ ಸ್ವಯಂವರವನ್ನು ಏರ್ಪಡಿಸಿದರಲ್ಲ ? ಎಂಬ ಸಂಶಯಕ್ಕೆ ಅವನಿಗೆ ಲಕ್ಷ್ಮಿನಾರಾಯಣರ ಬಗೆಗೆ ಸೀತಾರಾಮರ ಬಗೆಗೆ ನಿಶ್ಚಿತ ಜ್ಞಾನವಿದ್ದಿತು.

**ವಿ. ವಿ. :** ಅಂದರೆ ಅವರ ಸ್ವಯಂವರದ ಉದ್ದೇಶವೇನಿದ್ದಿತು ? ಅದಕ್ಕೆ ಸಮಾಧಾನ ವರುಣನು ಲಕ್ಷ್ಮಿದೇವಿಯ ಸ್ವಯಂವರ ಏರ್ಪಡಿಸಿದ್ದು, 'ನಾರಾಯಣನಲ್ಲಿ ಯಾವ ದೋಷಗಳಿಲ್ಲ. ಆತನು ನಿರ್ದೋಷಿ' ಉಳಿದ ದೇವತೆಗಳಿಗೆ ಈ ಯೋಗ್ಯತೆಯಿಲ್ಲ.

ಪ್ರತಿಯೊಬ್ಬರಲ್ಲೂ ಒಂದಿಲ್ಲ ಒಂದು ದೋಷವಿದೆ ಎಂಬುದನ್ನು ಜಗತ್ತಿಗೆ ಸ್ಪಷ್ಟ ಪಡಿಸುವದಕ್ಕಾಗಿ ಅದೇ ರೀತಿಯಾಗಿ ಜನಕರಾಜನು ಸ್ವಯಂವರ ಏರ್ಪಡಿಸಿದ್ದು.

'ಶ್ರೀ ರಾಮನು ಬೇರೆಯಲ್ಲ ನಾರಾಯಣನು ಬೇರೆಯಲ್ಲ. ಆತನೇ ಸರ್ವೋತ್ತಮನು. ಶಿವನ ಧನುಸ್ಸನ್ನು ಮುರಿಯಲು ಅನ್ಯರಿಗೆ ಸಾಧ್ಯವಿಲ್ಲ'. ಎಂಬುದನ್ನು ಸಿದ್ಧಪಡಿಸುವಕ್ಕಾಗಿ (नेहनानास्ति किंचन)

ಅವರು ಜ್ಞಾನಿಗಳಿದ್ದ ಕಾರಣ ಅವರಿಗೆ ಹೆಚ್ಚಿನ ತಿಳುವಳಿಕೆಯಾಗಲಿ, ವಿಶ್ವರೂಪದರ್ಶನದ ಅವಶ್ಯಕತೆಯಾಗಲಿ ಇರಲಿಲ್ಲ. ಇಲ್ಲಿ ಭೀಷ್ಮಕನಿಗೆ ಸರಿಯಾದ ತಿಳುವಳಿಕೆಯನ್ನು ಮಾಡಿಸಿ ಕೊಟ್ಟಿದ್ದಾನೆ.

**ಸ್ವಯಂವರಃ ಕ್ಷಿತೇರ್ಭುಜಾಂ ಸ್ವಧರ್ಮ ಇತ್ಯತೋ ದ್ವಯೋಃ ।**
**ನ ದೋಷ ಆಸ ಭೀಷ್ಮಕೋ ನ ಕೇಶವಾರ್ಥಮೈಚ್ಛತ ॥೬೧॥**

ಸ್ವಯಂವರ ಏರ್ಪಾಟು ಮಾಡುವುದು ರಾಜರಾದವರಿಗೆ (ಕ್ಷತ್ರಿಯರಿಗೆ) ಸ್ವಧರ್ಮವು. ಅದು ದೋಷವಲ್ಲ. ಕಾರಣ ವರುಣನು, ಜನಕನು ಅದನ್ನು ಏರ್ಪಡಿಸಿದರು. ಇಲ್ಲಿ ಭೀಷ್ಮಕನು ಕೇಶವನಿಗಾಗಿ ಎಂದು ಇಚ್ಛೆಸಿರಲಿಲ್ಲ.

**ಅತೋ ಹರೌ ಪ್ರಬೋಧ್ಯ ತಂ ಗತೇ ಕೃಪಾಲು ಸತ್ತಮೇ ।**
**ವಶೀಕೃತೇ ಚ ಭೀಷ್ಮಕೇ ನೃಪಾಸ್ತ್ವಮಂತ್ರಯನ್ಪುನಃ ॥೬೨॥**

ಕೃಪಾಳು (ದಯಾಳು) ಆದ ಶ್ರೀಕೃಷ್ಣನು ಭೀಷ್ಮಕನಿಗೆ ನಾರಾಯಣನ ಬಗೆಗೆ ಸರಿಯಾದ ಜ್ಞಾನಕೊಟ್ಟು, ಬೋಧಿಸಿ ಹೋದಮೇಲೆ, ಭೀಷ್ಮಕನು ಶ್ರೀಕೃಷ್ಣನ ವಶವಾಗಿದ್ದಾನೆ ಎಂದು ತಿಳಿದು ಇತರ ರಾಜರು ಪುನಃ ಮಂತ್ರಾಲೋಚನೆ ಮಾಡಿದರು.

**ಯಶಶ್ಚ ಧರ್ಮಮುತ್ತಮಂ ವಿಧಿತ್ಸತಾ ವೃಕೋದರೇ ।**
**ನ ಕೇಶವೇನ ಸೂದಿತೋ ಜರಾಸುತೋ ಹಿ ಮನ್ಯತೇ ॥೬೩॥**

'ಭೀಮಸೇನನಿಗೆ ಯಶಸ್ಸನ್ನು ತಂದು ಕೊಡುವುದೆ, ತನಗೆ ಶ್ರೇಷ್ಠವಾದ ಮತ್ತು ಉತ್ತಮವಾದ ಧರ್ಮ' ಎಂಬ ಕೇಶವನ ಮನದಿಂಗಿತವನ್ನು ಅರಿಯದ ಜರಾಸಂಧನು ಹೀಗೆ ತಿಳಿದು ಆಲೋಚಿಸಿದನು.

**ಪುರಾಚ್ಛಿವಸ್ಯ ಮಾಮಯಂ ನ ಹಂತುಮೀಶ್ವ ಉತ್ತಮಾತ್ ।**
**ಅತಃ ಶಿವಪ್ರಸಾದ ತೋ ಜಿತೋಽಪಿ ಜೇಷ್ಯ ಉತ್ತರಮ್ ॥೬೪॥**

"ಉತ್ತಮನಾದ ಶಿವನ ವರವಿದ್ದ ಕಾರಣ ಶ್ರೀಕೃಷ್ಣನು ನನ್ನನ್ನು ಕೊಲ್ಲಲು ಶಕ್ತನಾಗಲಿಲ್ಲ. ಈಗ ಪುನಃ ಆ ಶಿವನ ಪ್ರಸಾದ ಸಂಪಾದಿಸಿ ಉತ್ತರೋತ್ತರ ಅವನನ್ನು ಗೆಲ್ಲುತ್ತೇನೆ" ಎಂದು ಜರಪಾಸಂಧನು ನಿಶ್ಚಯಿಸಿಕೊಂಡನು.

**ಮೃಧೇ ಮೃಧೇ ಜಿತೋಽಪಿ ಸನ್ ದೃಢಾಶಯಾ ಪುನಃ ಪುನಃ ।**
**ಸಮೀಹತೆ ಯುಧೇ ಶಿವಂ ನ ಚಾವಮನ್ಯತೇ ಕ್ವಚಿತ್ ॥೬೫॥**

ಪದೇ ಪದೇ ಪರಾಜಿತನಾದಾಗ್ಯೂ ಜರಾಸಂಧನು ಉತ್ತರೋತ್ತರ ಗೆಲ್ಲುವೆನೆಂಬ ದೃಢವಾದ ಆಶೆಯಿಂದ ಶ್ರೀಕೃಷ್ಣನೊಡನೆ ಯುದ್ಧ ಮಾಡಲು ಪುನಃ ಪುನಃ ಸಿದ್ಧನಾಗುತ್ತಾನೆ. ಎಲ್ಲಿಯೂ, ಯಾವ ಕಾಲದಲ್ಲಿಯೂ ಶಿವನನ್ನು ನಿಂದಿಸುವದಿಲ್ಲ.

ವಿ. ವಿ. : ತನ್ನ ಸೋಲಿಗಾಗಿ ತನ್ನ ತಪ್ಪುಗಳನ್ನೇ ಹುಡುಕುತ್ತಾನೆ.

**ಅತಃ ಪುನಶ್ಚ ಭೂಮಿಪಾನುವಾಚ ಬಾರುಹ (ರ್ಹ)ದ್ರಥಃ ।**
**ಧಿಗೇವ ಪೌರುಷಂ ಹಿನೋ ಯದೇಷ ನೋಽಜಯತ್ಸದಾ ॥೬೬॥**

ಈಗ ಪುನಃ ಜರಾಸಂಧನು ರಾಜರೊಡನೆ ಮಾತನಾಡಿದನು. "ನಮ್ಮ ಪೌರುಷಕ್ಕೆ ಧಿಃಕ್ಕಾರವಿರಲಿ. ಶ್ರೀಕೃಷ್ಣನು ಪ್ರತಿ ಯುದ್ಧದಲ್ಲೂ ನಮ್ಮನ್ನು ಗೆದ್ದಿದ್ದಾನೆ." ಹೀಗೆಂದು ನೊಂದು ನುಡಿದನು.

**ಅಭೂಪತೇರ್ನ ಚಾಽಸನಂ ಪ್ರದೇಯ ಮಿತ್ಯುದಾಹೃತಂ ।**
**ಅಮುಷ್ಯ ನಸ್ತ್ವದನ್ಯಥಾ ಬಭೂವ ಚಿಂತಿತಂ ನೃಪಾಃ ॥೬೭॥**

ಅವನು ರಾಜನಲ್ಲ. ಕಾರಣ ಅವನಿಗೆ ಆಸನವನ್ನು ಕೊಡಬಾರದೆಂದು ನಮ್ಮಿಂದಲೇ ನಿರ್ಣಯವಾಗಿದೆ. ಆದರೆ ಎಲೈ ರಾಜರೇ ಈಗ ಪರಿಸ್ಥಿತಿ ಅದಕ್ಕೆ ವಿರುದ್ಧವಾಗಿಯೇ ಆಯಿತು ಎಂದು ಚಿಂತಿಸ (ಯೋಚಿಸ) ಬೇಕಾಗಿದೆ.

**ಅಯಂ ನೃಪೋತ್ತ ಮಾಂಗಣೇ ಮಹೇಂದ್ರ ಪೀಠ ಮಾರುಹತ್ ।**
**ಸಮಸ್ತ ರಾಜರಾಜತಾ ಮವಾಪ ನೋಽಪ್ಯನಿಚ್ಛತಾಂ ॥೬೮॥**

ಈತನು ನೃಪೋತ್ತಮನಾದ ಭೀಷ್ಮಕ ರಾಜನ ಅಂಗಳದಲ್ಲಿ ನಮ್ಮೆಲ್ಲರ ಸಮ್ಮುಖದಲ್ಲಿ ದೇವೇಂದ್ರನು ಕಳಿಸಿದಂಥ ಪೀಠವನ್ನು ಆರೋಹಣ ಮಾಡಿದನು. (ಏರಿ ಕುಳಿತನು) ಇದನ್ನು ನಾವೆಲ್ಲರು ಎಂದೂ ಇಚ್ಛಿಸಿರಲಿಲ್ಲ. ಅಂತಹ ಚಕ್ರವರ್ತಿ ಪದವಿಯನ್ನು ಪಡೆದನು.

**ಅತಃ ಪುನಃ ಕಥಂ ಹರಿಂ ವಯಂ ಜಯೇಮ ಚಿಂತ್ಯತಾಂ ।**
**ಯಥಾ ಚ ಭೀಷ್ಮ ಕಾತ್ಮಜಾ ಮವಾಪ್ನು ಯಾಚ್ಚ ಚೇದಿರಾಟ್ ॥೬೯॥**

'ಕಾರಣ ಈಗ ನಾವೆಲ್ಲರು ಕೂಡಿ ಶ್ರೀಹರಿ (ಶ್ರೀಕೃಷ್ಣ)ಯನ್ನು ಹೇಗೆ ಗೆಲ್ಲಬಹುದು ಎಂಬುದನ್ನು ಚಿಂತಿಸೋಣ. ಜೊತೆಯಲ್ಲಿ ಭೀಷ್ಮಕ ರಾಜನ ಮಗಳು ಶಿಶುಪಾಲನಿಗೆ ಹೇಗೆ ದೊರೆತಾಳು ಎಂಬುದನ್ನು ಆಲೋಚಿಸೋಣ'.

**ಅಯಂ ಹಿ ದತ್ತ ಪುತ್ರಕೋ ಮಮೌ(ಔ) ರಸಾದ್ವಿ ಶಿಷ್ಯತೇ ।**
**ಅತೋ ನಿವೇಶ್ಯ ಏಷ ಮೇ ಸುರೂಪಿಣೀ ಚ ರುಕ್ಮಿಣೀ ॥೭೦॥**

ಇವನು ನನಗೆ ದತ್ತಕ ಮಗನಾಗಿದ್ದಾನೆ. ಆದಕಾರಣ ಇವನಿಗೆ ವಿವಾಹ ಮಾಡುವುದು ನನ್ನ ಕರ್ತವ್ಯವಾಗಿದೆ. ಸುಂದರಿಯಾದ ರುಕ್ಮಿಣಿಯು ಇವನಿಗೆ ಯೋಗ್ಯಳಾಗಿಯೇ ಇದ್ದಾಳೆ.

ವಿ. ವಿ. : ಶಿಶುಪಾಲನ ತಂದೆಯು, ಶಿಶುಪಾಲನನ್ನು ಜರಾಸಂಧನಿಗೆ ಒಪ್ಪಿಸಿ ಇವನ ಯೋಗಕ್ಷೇಮವನ್ನು ನೋಡಿಕೋ ವಿವಾಹ ಇತ್ಯಾದಿಗಳನ್ನು ಮಾಡು ಎಂದು ಹೇಳಿದ್ದನಂತೆ. ಆ ಮಾತು "ದತ್ತ ಪುತ್ರಕೊ" ಎಂಬ ಶಬ್ದದಿಂದ ಸೂಚಿತವಾಗುತ್ತದೆ.

**ಶಿವಾಗಮೇಷು ಶಿಷ್ಯಕಾಃ ಸ ರುಕ್ಮಿ ಸಾಲ್ವ ಪೌಂಡ್ರಕಾಃ ।**
**ಮಮಾಖಿಲಾ ನೃಪಾಸ್ತತಃ ಕುರುಧ್ವ ಮೇತದೇವ ಮೇ ॥೭೧॥**

ಶಿವಾಗಮವನ್ನು ತಿಳಿದುಕೊಳ್ಳುವುದರಲ್ಲಿ ನೀವೆಲ್ಲರೂ ನನ್ನ ಶಿಷ್ಯರು. ಕಾರಣ ರುಕ್ಮಿ, ಸಾಲ್ವ, ಪೌಂಡ್ರಕ ಮತ್ತಿತರ ಎಲ್ಲ ರಾಜರು ಸೇರಿ ಈ ನನ್ನ ಅಭೀಷ್ಟೆಯನ್ನು ಪೂರ್ಣ ಮಾಡಿರಿ.

ವಿ. ವಿ. : ಇದರಿಂದ ಜರಾಸಂಧನು ಕೇವಲ ಬಲಶಾಲಿಯೇ ಅಲ್ಲ, ಶೈವಾಗಮ ಜ್ಞಾನದಲ್ಲಿ ಎಲ್ಲ ರಾಜರಿಗೂ ಗುರುಸ್ಥಾನದಲ್ಲಿದ್ದನು ಎಂಬುದು ತಿಳಿಯುತ್ತದೆ.

**ಇತೀರಿತೇ ತು ಸೌಭರಾಟ್ ಜಗಾದ ರುಕ್ಮಿ ಸಂವಿದಾ ।**
**ಸ್ವಯಂವರೋ ನಿವರ್ತಿತಃ ಸ್ವಸಾರಮೇಷ ದಾಸ್ಯತಿ ॥೭೨॥**

ಜರಾಸಂಧನ ಈ ರೀತಿಯ ಮಾತುಗಳನ್ನು ಕೇಳಿದ ಮೇಲೆ, ಸಾಲ್ವ ರಾಜನು ರುಕ್ಮಿಯ ಅನುಮತಿಯಿಂದಲೇ ಈ ಮಾತು ಹೇಳಿದನು. ಈಗ ನಾವು ಸ್ವಯಂವರದ ನಿರ್ಧಾರವನ್ನು ಬಿಟ್ಟುಬಿಡೋಣ. ರುಕ್ಮಿಯು ತನ್ನ ತಂಗಿಯನ್ನು ಶಿಶುಪಾಲನಿಗೆ ಸ್ವಸಂತೋಷದಿಂದ ಕೊಡುತ್ತಾನೆ ಎಂದು ನುಡಿದನು.

**ನ ಚಾತಿ ವರ್ತಿತುಂ ಕ್ಷಮಃಪಿತಾಽಸ್ಯ ಚೇದಿಪಾಯ ತಾಂ ।**
**ಪ್ರದಾತು ಕಾಮಮಾತ್ಮಜಂ ವಯೋಗತಸ್ತಥಾಽಬಲಃ ॥೭೩॥**

ಈ ಭೀಷ್ಮಕ ರಾಜನು ತನ್ನ ಮಗನ ಇಚ್ಛೆಯ ವಿರುದ್ಧವಾಗಿ ವರ್ತಿಸಲು ಸಮರ್ಥನಲ್ಲ. ಏಕೆಂದರೆ ಆತನು ವಯೋವೃದ್ಧನೂ ದುರ್ಬಲನೂ ಆಗಿದ್ದಾನೆ.

**ಸ್ವಯಂ ತು ಕೃಷ್ಣ ಏತ್ಯ ನೋ ವಿಜಿತ್ಯ ಕನ್ಯಕಾಂ ಹರೇತ್ ।**
**ತತೋಽಸ್ಯ ಪೂರ್ವಮೇವ ನೋ ಹ್ಯಭೂಾಮತಾ ಕೃತಾಶುಭಾ ॥೭೪॥**

**ಉಪಾಯ ಏಷ ಚಿಂತಿತೋ ಮಯಾಽತ್ರ ಮಾಗಧೇಶ್ವರ ।**
**ಮುನಿಂ ಹಿ ಗರ್ಗನಾಮಕಂ ಹ್ಯಮುಷ್ಯ ಶಾ(ಸಾ)ಲ ಆಕ್ಷಿಪತ್ ॥೭೫॥**

ಸ್ವಯಂ ಶ್ರೀಕೃಷ್ಣನೇ ಬಂದು ಕನ್ಯೆಯನ್ನು ಅಪಹರಿಸಿಕೊಂಡು ಹೋಗಬಹುದು ಎಂಬ ಭಯಕ್ಕೆ ಕಾರಣವಿಲ್ಲ. ಏಕೆಂದರೆ ಮೊದಲೇ ಶ್ರೀಕೃಷ್ಣನಿಗೆ ಗರ್ಗಾಚಾರ್ಯರಿಂದ ಕನ್ಯಾಭಾವದ ಶಾಪ ಸಿಕ್ಕಿದೆ. ಅದು ನಮಗೆ ಉತ್ತಮವೇ ಆಗಿದೆ. ಹೇ ಜರಾಸಂಧನೇ ಕೇಳು ಯಾದವರ ಒಬ್ಬ ಬಂಧುವು ಗರ್ಗಾಚಾರ್ಯರನ್ನು ನಿಂದಿಸಿದನು.

ಅದು ಇಂತಿದೆ :

**ಯದಾಽಸ್ಯ ಷಂಡತೋದಿತಾ ಮುನೇಃ ಪುರೋಹಿತಸ್ಯ ಚ ।**
**ಪರೇಣ ವೃಷ್ಣಯೋಽಹ ಸಂಸ್ಮು ಕೋಪ ಗರ್ಗವಿಭು ಹಿ ॥೭೬॥**

ಪುರೋಹಿತರಾದ ಗರ್ಗಾಚಾರ್ಯರಿಗೆ, ಯಾದವರಲ್ಲಿ ಒಬ್ಬನು ನೀನು 'ಷಂಡನು' ಎಂದು ನಿಂದಿಸಿ ಅಪಹಾಸ್ಯ ಮಾಡಿದನು. ಆಗ ಅಲ್ಲಿ ಶ್ರೀಕೃಷ್ಣನೂ ಇದ್ದನು. ಎಲ್ಲರೂ ನಕ್ಕಿದ್ದನ್ನು ಕಂಡು ಗರ್ಗಾಚಾರ್ಯರು ಯಾದವರ ಮೇಲೆ ಕೋಪಗೊಂಡರು.

**ಚಕಾರ ಚ ಪ್ರತಿ ಶ್ರವಂ ಸಮಾರ್ಜಯೇ ಸುತಂ ದ್ರುತಂ ।**
**ಅಕೃಷ್ಣತಾಂ ಯ ಆನಯೇದ್ವೋಽಪಿವೃಷ್ಣ ನಾಶಕಃ ॥೭೭॥**

'ಯಾದವರನ್ನು ನಾಶಮಾಡತಕ್ಕ, ಭೂಮಿಯ ಮೇಲೆ ಕೃಷ್ಣನ ಹೆಸರೇ ಇಲ್ಲದಂತೆ ಮಾಡತಕ್ಕ ಮಗನನ್ನು ಪಡೆಯುತ್ತೇನೆ. ಇದು ನಿಶ್ಚಯ' ಎಂದು ಪ್ರತಿಜ್ಞೆಯನ್ನು ಗರ್ಗಾಚಾರ್ಯರು ಮಾಡಿದರು.

**ವಿ. ವಿ. :** ಗರ್ಗಾಚಾರ್ಯರಂಥ ಪುರೋಹಿತರಿಗೆ ಈ ರೀತಿ ವಿಚಾರ ಬರಲು ಕಾರಣವೇನು ? ನಿಶ್ಚಯವಾಗಿ ಅಸುರಾವೇಶವೇ ಕಾರಣ. ಜೊತೆಯಲ್ಲಿ ಯಾದವನ ಚುಚ್ಚು ಮಾತು.

ಇಲ್ಲದಿದ್ದಲ್ಲಿ ಇದೇ ಗರ್ಗಾಚಾರ್ಯರೆ ಶ್ರೀಕೃಷ್ಣನ ನಾಮಕರಣ ಕಾಲದಲ್ಲಿ, 'ಈತನನ್ನು ನೀನು ಮಗನೆಂದು ತಿಳಿಯಬೇಡ. ಈತನು ಸಾಕ್ಷಾತ್ ನಾರಾಯಣನಿದ್ದಾನೆ'. ಎಂದು ನಂದನಿಗೆ ಹೇಳಿದ್ದು ವಾಚಕರಿಗೆ ನೆನಪಿರಬಹುದು.

**ಯತೋ ಹಿ ಕೃಷ್ಣ ಸಂಶ್ರಯಾದ್ಬತಾಪ ಹಾಸಿತಾ ವಯಂ ।**
**ಇತಿ ಬ್ರುವನ್ವನಂ ಯಯೌ ತಪಶ್ಚ ಶ್ಚೈವ ಮಾಚರತ್ ॥೭೮॥**

**ಸ ಚೂರ್ಣಮಾಯಸಂ ತ್ವದನ್ ದದರ್ಶ ಚಾಬ್ದತಃ ಶಿವಂ ।**
**ವರಂ ತತೋಽಭಿಪೇದಿವಾನ್ ಸುತಂ ಹರೇರಭಾವದಂ ॥೭೯॥**

'ಈ ಕೃಷ್ಣನ ಆಶ್ರಯದಲ್ಲಿದ್ದ ಯಾದವರೇ ನನಗೆ ಅಪಮಾನ ಮಾಡಿದ್ದಾರೆ. ಇದಕ್ಕೆ ಶ್ರೀಕೃಷ್ಣನೇ ಕಾರಣನು' ಎಂದು ಹೇಳುತ್ತ ಈಶ್ವರನನ್ನು ಕುರಿತು ತಪಸ್ಸು ಮಾಡುವುದಕ್ಕಾಗಿ ವನಕ್ಕೆ ನಡೆದರು. ಅಲ್ಲಿ ಒಂದು ವರ್ಷ ಪರ್ಯಂತರ ಕೇವಲ ಉಕ್ಕಿನ ಪುಡಿಯನ್ನು ಸೇವಿಸಿ ತಪವನ್ನಾಚರಿಸಿದರು. ಒಂದು ವರ್ಷದ ನಂತರ ರುದ್ರದೇವರು ಪ್ರತ್ಯಕ್ಷರಾದರು. ಶ್ರೀಹರಿಯನ್ನು ಇಲ್ಲದಂತೆ ಮಾಡುವ ಮಗನು ಹುಟ್ಟುವಂತೆ ವರವನ್ನು ದಯಪಾಲಿಸು ಎಂದು ಗರ್ಗಾಚಾರ್ಯರು ರುದ್ರದೇವರನ್ನು ಪ್ರಾರ್ಥಿಸಿಕೊಂಡರು.

**ವಿ. ವಿ. :** ಬಹುಶಃ ಗರ್ಗಾಚಾರ್ಯರು ಇಂದು ಸೇವಿಸಿದ ಈ ಉಕ್ಕಿನ ಪುಡಿಯೇ ಮುಂದೆ ಮುಸಲವಾಗಿ ಯಾದವರ ಕುಲದ ನಾಶಕ್ಕೆ ಕಾರಣವಾಗಿರಬೇಕಲ್ಲವೇ?

**ಸ ವಿಷ್ಣು ದೈವತೋಽಪಿ ಸನ್ ಪ್ರವಿಷ್ಟ ಉಲ್ಬಣಾಸುರೈಃ ।**
**ವ್ಯಧಾದ್ಧರೇಃ ಪ್ರತೀಪಕಂ ವ್ರತಂ ತು (ಚ) ನೈಷ್ಠಿಕಂಜಹೌ ॥ ॥೮೦॥**

ಆ ಗರ್ಗಾಚಾರ್ಯರು ಶ್ರೀ ವಿಷ್ಣುವಿನ ಪರಮ ಭಕ್ತರಾದಾಗ್ಯೂ; ಕ್ರೂರನಾದ ಲ್ಬಣ ಎಂಬ ಅಸುರ ಅವರಲ್ಲಿ ಪ್ರವಿಷ್ಟನಾದುದರಿಂದ, ಅವರು ಹರಿದ್ವೇಷವನ್ನು ಾಡಿದರು. ಜಪರೂಪವಾದ ಅಷ್ಟೇ ಅಲ್ಲ ಇಂದಿನವರೆಗೆ ನಿಯಮಿತವಾಗಿ ಪಾಲಿಸಿಕೊಂಡು ಂದ ಬ್ರಹ್ಮಚರ್ಯ ವ್ರತವನ್ನೂ ತ್ಯಜಿಸಿದರು.

**ತಮಾರ ಚಾಽಸುರಾಪ್ಸರಾ ಬಲಿಷ್ಠ ಪುತ್ರ ಕಾಮ್ಯಯಾ ।**
**ಪ್ರವಿಶ್ಯಗೋಪಿ ಕಾಂಗನಾ ಸಮೂಹ ಮಧ್ಯಮುಲ್ಬಣಾ ॥೮೧॥**

ಅದೇ ಕಾಲಕ್ಕೆ ಒಬ್ಬ ಅಸುರ ಅಪ್ಸರೆಯು (ಅಸುರರಲ್ಲಿ ವೇಶ್ಯೆಯು) ಬಲಿಷ್ಠ ತ್ರನ ಇಚ್ಛೆಯಿಂದಲೇ ಗೋಪಿಕಾ ಸ್ತ್ರೀಯರ ಮಧ್ಯದಲ್ಲಿ ಪ್ರವೇಶಿಸಿದಳು.

**ಸ ಯೌವನೇನ ಭೂಭೃತಾ ಹಿ ಗೋಪಿಕಾಭಿರರ್ಚಿತಃ ।**
**ಅಪುತ್ರಕೇನ ಜಾನತಾ ಮುನೇರ್ಮನೋಽನುಚಿಂತಿತಂ ॥೮೨॥**

ಆ ವೇಶ್ಯೆಯು ಒಬ್ಬ ಯವನ ರಾಜನಿಂದ ಪ್ರೇರಿತಳಾಗಿ ಬಂದಿದ್ದಳು. ವನಿಗೂ ಮಕ್ಕಳಿರಲಿಲ್ಲ. ಕಾರಣ ಅವಳಿಗೆ ಒಬ್ಬ ಮಗನನ್ನು ಪಡೆಯುವ ಇಚ್ಛೆಯಿದ್ದಿತು. ದಕ್ಕಾಗಿ ಅವಳು ಮುನಿಯ ಮನೋಗತವನ್ನು ತಿಳಿದು ತಾನೂ ಗೋಪಿಕಾ ಸ್ತ್ರೀಯರ ುಧ್ಯದಲ್ಲಿ ಒಂದು ಗರ್ಗಾಚಾರ್ಯರನ್ನು ಪೂಜಿಸುತ್ತಿದ್ದಳು.

**ಸ ಚಾಪ್ಸರಸ್ತನೌ ಸುತಂ ನಿಷಿಚ್ಯ ಯೌವನಾಯ ಚ ।**
**ದ ದೌ ವಿಮೋಹಿತಃ ಕ್ರುಧಾ ಕಿಮೇತದೀಶವೈರಿಣಃ ॥೮೩॥**

ಆ ಯವನ ವೇಶ್ಯೆಯ ಮೋಹಕ್ಕೆ ಒಳಗಾದ ಗರ್ಗಾಚಾರ್ಯರು, ಆಕೆಯಲ್ಲಿ ಬ್ಬ ಮಗನನ್ನು ಹಡೆದು ಕೊಟ್ಟರು. ಕ್ರೋಧದ ಪರಿಣಾಮವಾಗಿ, ಕೃಷ್ಣನ ಭಕ್ತನಲ್ಲಿಯೇ ೃಷ್ಣನ ವೈರಿ, ಹುಟ್ಟಿದ್ದು ಎಂತಹ ಆಶ್ಚರ್ಯ.

**ಗರ್ಗಾಚಾರ್ಯರ ಪಶ್ಚಾತ್ತಾಪ** (पश्चातापेन शुध्यति) :

**ಸ ಆಶ್ರಮಾಚ್ಚ ನೈಷ್ಠಿಕಾ ದ್ವಿದೂಷಿತಃ ಪ್ರತೀಪಕೃತ್ ।**
**ಹರೇಶ್ಚ ತಾಪಮೇಯಿವಾನ್ ಜಗರ್ಹ ಚಾಽತ್ಮಶೇ ಮುಷೀಂ ॥೮೪॥**

ನೈಷ್ಠಿಕ ಬ್ರಹ್ಮಚರ್ಯಾಶ್ರಮದಿಂದ ಭ್ರಷ್ಟರಾದ ಆ ಗರ್ಗಾಚಾರ್ಯರು, ಶ್ರೀಕೃಷ್ಣನಿಗೆ ುರೋಧಿಸಿ ನಾನು ಎಂತಹ ಕಾರ್ಯ ಮಾಡಿದೆನಲ್ಲಾ ತಮ್ಮ ಬುದ್ಧಿಯನ್ನು ನಿಂದಿಸಿಕೊಳ್ಳುತ್ತ ಪಶ್ಚಾತ್ತಾಪವನ್ನು ಪಟ್ಟರು.

**ಜಗಾಮ ಚಾರಣಂ ಹರಿಂ ಪ್ರಪಾಹಿ ಮಾಂ ಸುಪಾಪಿನಂ ।**
**ಇತಿ ಸ್ಮ ವಿಷ್ಣು ಸುಜ್ಞಯಾ ಚಕಾರ ವೈಷ್ಣವಂ ತಪಃ ॥೮೫॥**

ನಂತರ ಆ ಗರ್ಗಾಚಾರ್ಯರು ಶ್ರೀಕೃಷ್ಣನ ಹತ್ತಿರ ಬಂದು "ನಾನು ಮಹಾ ಪಾಪಿಷ್ಠನು. ನೀನು ರಕ್ಷಿಸಬೇಕು" ಎಂದು ಮೊರೆಹೊಕ್ಕರು – ಶ್ರೀಕೃಷ್ಣನ ಆಜ್ಞೆಯಿಂದಲೆ ಅವರು ಪುನಃ ವಿಷ್ಣುವನ್ನು ಕುರಿತು ತಪಸ್ಸು ಮಾಡಹತ್ತಿದರು.

**ಕುತೋ ಹಿ ಭಾಗ್ಯ ಮಾರುತೇಸ್ಮುನೇಃ ಶಿವಾರ್ಚನೇ ಸದಾ ।**
**ಭವಾದೃಶಾ ಹಿ ದಾನವಾಃ ಸ್ಥಿರಾಃ ಶಿವಾರ್ಚನೇ ಸದಾ ॥೮೬॥**

ಶಿವಾರ್ಚನೆಯಲ್ಲಿ ಸ್ಥಿರವಾದ ಬುದ್ಧಿಯಿಲ್ಲದ ಆ ಗರ್ಗಾಚಾರ್ಯರಿಗೆ ಭಾಗ್ಯವು ಹೇಗೆ ಬಂದೀತು? ಹೇ ದಾನವಾ! ನಿನ್ನಂತೆ ಆತನು ಸ್ಥಿರವಾದ ಬುದ್ಧಿಯಿಂದ ಸದಾ ಶಿವಾರ್ಚನೆಯನ್ನು ಮಾಡಲಿಲ್ಲ. ಇದು ಸಾಲ್ವನು ಹೇಳಿದ ಮಾತು. ಸ್ಥಿರವಾದ ಬುದ್ಧಿಯಿಂದ ಮಾಡಿದ ಕಾರ್ಯವು ಫಲಕಾರಿಯಾಗುತ್ತದೆ ಎಂದು ಅಭಿಪ್ರಾಯ.

**ಸುತೋಽಸ್ಯ ಕಾಲನಾಮಕೋ ಬಭೂವ ಕೃಷ್ಣಮರ್ದಿತುಂ ।**
**ಸದೈವ ಕಾಲಕಾಂಕ್ಷಣಾತ್ ಸ ಯಾವನಾಭಿಷೇಚಿತಃ ॥೮೭॥**

ಆ ಗರ್ಗಾಚಾರ್ಯರ ಮಗನನ್ನು 'ಕಾಲ' ಎಂದೇ ಕರೆದರು. ಅವನು ಶ್ರೀಕೃಷ್ಣನನ್ನು ಕೊಲ್ಲಲೆಂದೇ ಯಾವಾಗಲೂ ಕಾಲವನ್ನು ನಿರೀಕ್ಷಿಸುತ್ತಿದ್ದನು. ಅದಕ್ಕಾಗಿಯೇ ಅವನು 'ಕಾಲ' ಎಂದು ಪ್ರಸಿದ್ಧನಾದನು. ಮುಂದೆ ಅವನು ಯವನ ರಾಜನಲ್ಲಿ ಬೆಳೆದು ಅಭಿಷಿಕ್ತನಾದ ಕಾರಣ ಅವನನ್ನು ಜನರು 'ಕಾಲಯವನ' ಎಂದು ಕರೆದರು.

**ತವೈವ ಶಿಷ್ಯ ಏಷ ಚಾತಿ ಭಕ್ತಿ ಮಾನ್ ಹಿ ಶಂಕರೇ ।**
**ಪ್ರಭೂತ ಸೇನಯಾಯುತೋ ಬಲೋದ್ಧತಶ್ಚ ಸರ್ವದಾ ॥೮೮॥**

ಎಲೈ ಜರಾಸಂಧ ರಾಜನೇ । ಆ ಕಾಲಯವನನು ನಿನ್ನ ಶಿಷ್ಯನಾಗಿದ್ದಾನೆ. ರುದ್ರದೇವರಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿದ್ದಾನೆ. ಬಲಾಢ್ಯನಾಗಿದ್ದಾನೆ. ಅಲ್ಲದೇ ಅವನ ಹತ್ತಿರ ಉತ್ತಮ ಸೇನೆಯೂ ಇದೆ.

**ತಮೇವ (ಷ) ಯಾಮಿ ಶಾಸನಾತ್ತವೋಪನೀಯ ಸತ್ವರಂ ।**
**ವಿಕೃಷ್ಣಕಂ ವಿಧಾಯ್ತು ಚ ಕ್ಷಿತೇಸ್ತಲಂ ರಮಾಮಹೇ ॥**
**(ವಿಕೃಷ್ಣ ಕ್ಷಿತೇಸ್ತಲಂ ವಿಧಾಯ ಸಂ ರಮಾಮಹೇ) ॥೮೯॥**

ಈಗ ನಾನು, ನಿನ್ನ ಆಜ್ಞೆಯಿಂದ ಕಾಲಯವನನ ಹತ್ತಿರ ಶೀಘ್ರದಲ್ಲಿ ಹೋಗುತ್ತೇನೆ. ಕೂಡಲೇ ಅವನನ್ನು ನಿನ್ನ ಹತ್ತಿರ ತಂದು ನಿಲ್ಲಿಸುತ್ತೇನೆ. ಆಗ ನಾವೆಲ್ಲರೂ ಸೇರಿ ಈ ಭೂಪ್ರದೇಶದ ಮೇಲೆ ಶ್ರೀಕೃಷ್ಣನು ಇಲ್ಲದಂತೆ ಮಾಡೋಣ.

**ತತಶ್ಚ ರುಕ್ಮಿಣೀಂ ವಯಂ ಪ್ರದಾಪಯಾಮ ಚೇದಿಪೇ ।**
**ವಿನಾಶ್ಯ ದೇವಪಕ್ಷಿಣೋ ಯಥೇಷ್ಟಮಾಸ್ಮ ಸರ್ವದಾ ॥೯೦॥**

ಅನಂತರ ನಾವು ಈ ರುಕ್ಮಿಣಿದೇವಿಯನ್ನು ಶಿಶುಪಾಲನಿಗೆ ಕೊಡಿಸೋಣ. ದೇವ ಪಕ್ಷದವರೆಲ್ಲರನ್ನೂ ನಾಶಮಾಡಿ, ನಾವು ನಮ್ಮ ಇಚ್ಛಾನುಸಾರವಾಗಿ ಸದಾ ಸಂತೋಷದಿಂದ ಇರೋಣ.

**ಇತೀರಿತೋ ಜರಾಸುತೋ ಬಭೂವ ದುರ್ಮನಾ ಭೃಶಂ ।**
**ಕಿರೀಟಿ ಮಂಡಿತಂ ಶಿರಶ್ಚಕಾರ ಚಾsಶ್ವವಾಗ್ಭೃಶಂ ॥೯೧॥**

ಇದನ್ನು ಕೇಳಿದ ಜರಾಸಂಧನು ಬಹು ದುಃಖಿತನಾದನು. ಕಿರೀಟದಿಂದ ಅಲಂಕೃತವಾದ ತನ್ನ ತಲೆಯನ್ನು ಬಾಗಿಸಿದನು.

**ಕರಂ ಕರೇಣ ಪೀಡಯನ್ನಿಶಾಮ್ಯ ಚಾsತ್ಮನೋ ಭುಜೌ ।**
**ಜಗದಾ ಕಾರ್ಯಸಿದ್ಧಯೇ ಕಥಂ ಪ್ರಯಾಚಯೇ ಪರಂ ॥೯೨॥**

ಅವನು ತನ್ನ ಎರಡೂ ಕೈಗಳನ್ನು ಹೊಸೆಯುತ್ತ, ತನ್ನ ಬಾಹುಗಳನ್ನು ನೋಡುತ್ತ, 'ತನ್ನ ಕಾರ್ಯವನ್ನು ಸಾಧಿಸಲು ಇನ್ನೊಬ್ಬರನ್ನು ಯಾಚಿಸಬೇಕೇ?' ಎಂದು ಚಿಂತಿಸಿದನು.

**ಸುದುರ್ಗ ಕಾರ್ಯಸಂತತಿಂ ಹ್ಯಗುಃ ಸ್ಮ ಮದ್ಭುಜಾಶ್ರಯಾಃ ।**
**ಸಮಸ್ತ ಭೂತಲೇನೃಪಾಃ ಸ ಚಾಹಮೇಷ ಮಾಗಧಃ ॥೯೩॥**

ಕಷ್ಟತರವಾದ ಅನೇಕ ಕಾರ್ಯಗಳನ್ನು, ನನ್ನ ಈ ಬಾಹುಬಲದಿಂದ ಈ ಜಗತ್ತಿನ ಅನೇಕ ರಾಜರು ಪೂರೈಸಿಕೊಂಡಿದ್ದಾರೆ! ಆ ಜರಾಸಂಧ ನಾನೇ ಅಲ್ಲವೇ!

**ಕದಾsಪ್ಯ ಚೀರ್ಣಮದ್ಯ ತತ್ಕಥಂಕರೋಮಿ ಕೇವಲಂ ।**
**ಗಿರೀಶಪಾದ ಸಂಶ್ರಯಃ ಪ್ರಭುಃ ಸಮಸ್ತ ಭೂಭೃತಾಂ ॥೯೪॥**

ಕೇವಲ ರುದ್ರದೇವರ ಪಾದವನ್ನು ನಂಬಿ, ಆತನ ಆಶ್ರಯದಲ್ಲಿ ಇರುವ ನಾನು ಎಲ್ಲ ರಾಜರಿಗೂ ಪ್ರಭುವಾಗಿದ್ದೇನೆ. ಅಂತಹ ನಾನು ಇಂದಿಗೂ ಯಾರಿಗೂ ಮಾಡದಿರುವ ಪ್ರಾರ್ಥನೆಯನ್ನು ಇಂದು ಹೇಗೆ ಮಾಡಲಿ? (ಇದು ಜರಾಸಂಧನ ಸ್ವಾಭಿಮಾನಕ್ಕೆ ಧಕ್ಕೆ ಯಾಗುವ ವಿಚಾರವಾಗಿತ್ತು.)

**ಇತೀರಿತಃ ಸ ಸೌಭರಾಟ್ ಜಗಾದ ವಾಕ್ಯಮುತ್ತರಂ ।**
**ಭವಾನಪಿ ಸ್ಮ ಮುಹ್ಯತೇ ಕಿಮಸ್ಮದಾದಯಃ ಪ್ರಭೋ ॥೯೫॥**

ಜರಾಸಂಧನಿಂದ ಮೇಲಿನ ವಾಕ್ಯಗಳನ್ನು ಕೇಳಿದ ಸಾಲ್ವನು, ಹೀಗೆ ಉತ್ತರಿಸಿದನು. ಪ್ರಭೋ, ನಿಮ್ಮಂಥವರಿಗೆ ಅಭಿಮಾನದ ವ್ಯಾಮೋಹ ಉಂಟಾಗಿದೆ. ಅಂದಮೇಲೆ ನಮ್ಮಂಥವರ ಪಾಡೇನು?

**ಸ್ವ ಶಿಷ್ಯಕೈಃ ಕೃತಂ ತು ಯತ್ಕಿಮನ್ಯ ಸಾಧಿತಂ ಭವೇತ್ ।**
**ಸ್ವಶಿಷ್ಯ ದಾಸವರ್ಗಕೈಃ ಸಮರ್ಥಯಂತಿ ಭೂಭುಜಃ ॥೯೬॥**

ಸ್ವಶಿಷ್ಯರಿಂದ ಕಾರ್ಯವನ್ನು ಮಾಡಿಸಿಕೊಂಡರೆ, ಅದು ಅನ್ಯರಿಂದ ಆಯಿತೇ? ಸಮರ್ಥರಾದ ರಾಜರು, ತಮ್ಮ ದಾಸವರ್ಗವರಿಂದಾಗಲಿ, ಶಿಷ್ಯರಿಂದಾಗಲಿ ಕಾರ್ಯ ಮಾಡಿಸಿದರೆ, ಅದು ಅನ್ಯರಿಂದ ಮಾಡಿಸಿದಂತೆ ಆಗುವುದಿಲ್ಲ.

**ಅಪಿ ಸ್ಮ ತೇ ಬಲಾಶ್ರಯ ಪ್ರವೃತ್ತ್ಯೋಽಸ್ಮದಾದಯಃ ।**
**ಪುಮಾನ್ ಕುಠಾರ ಸಂಗ್ರಹಾದಶಕ್ತ ಈರ್ಯತೇನು (ಹಿ) ಕಿಂ ॥೯೭॥**

ನಾನು ಮೊದಲ್ಗೊಂಡು ಎಲ್ಲರೂ ನಿನ್ನ ಬಲದ ಆಶ್ರಯದಲ್ಲಿಯೇ ಬೆಳೆದವರು. ಹೇ ಪ್ರಭೋ! ಶ್ರೇಷ್ಠನಾದ ರಾಜನು ಶಸ್ತ್ರಗಳನ್ನು ಸಂಗ್ರಹಿಸಿಟ್ಟರೆ, ಅದು ಅವನ ಅಶಕ್ತತೆಯನ್ನು ತೋರಬಲ್ಲದೆ? (ಅವನನ್ನು ಅಶಕ್ತನೆಂದು ಕರೆಯಬಹುದೇ?)

**ಕುಠಾರ ಸಮ್ಮಿತೋ ಹ್ಯಸೌ ತವೈವ ಯಾವನೇಶ್ವರಃ ।**
**ವಿನಾ ಭವದ್ಬಲಂ ಕ್ವಚಿತ್ ಪ್ರವರ್ತಿತುಂ ನ ಹಿ ಕ್ಷಮಃ ॥೯೮॥**

ಈ ಯವನ ರಾಜನು ನಿನಗೆ ಕುಠಾರಕ್ಕೆ ಸಮನಾಗಿದ್ದಾನೆ. ನಿನ್ನ ಬಲವಿಲ್ಲದೆ ಏನನ್ನೂ ಮಾಡಲಾರ.

ವಿ. ವಿ. : ಕೇವಲ ಕುಠಾರ ಏನನ್ನೂ ಮಾಡಲಾರದು. ಅದು ಇನ್ನೊಬ್ಬರ ಕೈಯಲ್ಲಿ ಬಂದಾಗ, ಇನ್ನೊಬ್ಬರ ಬಲ ಅದಕ್ಕೆ ದೊರೆತಾಗ, ಅದು ತನ್ನ ಸಾಮರ್ಥ್ಯವನ್ನು ತೋರಿಸಬಲ್ಲದು. ಅಲ್ಲವೇ?

**ಅಲ್ಲದೆ,**

**ವರೋಹಿ ಕೃಷ್ಣಮರ್ದನೇ ವೃತೋಽಸ್ಯ ಕೇವಲಂ (ಲಃ) ಶಿವಾತ್ ।**
**ತದನ್ಯ ಶತ್ರು ಪೀಡನಾತ್ತ್ವಮೇವ ಚಾ(ತ)ಸ್ಯ ರಕ್ಷಕಃ ॥೯೯॥**

ಆ ಕಾಲಯವನನು, ಶಿವನ ಪ್ರಸಾದದಿಂದ ಕೇವಲ ಕೃಷ್ಣನನ್ನು ಮರ್ದಿಸುವುದಕ್ಕಾಗಿಯೇ ಹುಟ್ಟಿದ್ದಾನೆ. ಅವನಿಂದ ನಿನ್ನ ಆ ಶತ್ರುವು ನಾಶವಾದರೆ, ಅದೂ ನಿನಗೆ ಶುಭವೇ, ಅವನಿಂದ ನೀನೂ ರಕ್ಷಕನಾಗುತ್ತಿ?

**ತವಾಖಿಲೈ ರಜೇಯತಾ ಶಿವಪ್ರಸಾದ ತೋಽಸ್ತಿ ಹಿ ।**
**ವಿಶೇಷತೋ ಹರೇರ್ಜಯೇ ವರಾದಯಂ ವಿಮೃಗ್ಯ ತೇ ॥೧೦೦॥**

ಶಿವನ ವರಪ್ರಸಾದದಿಂದಲೇ ನಿನಗೆ ಅಜೇಯತ್ವ ಲಭಿಸಿದೆ. ಅದರಂತೆಯೇ ಹರಿಯನ್ನು ಜಯಿಸುವುದರಲ್ಲಿ (ಮರ್ದಿಸುವಲ್ಲಿ) ಕಾಲಯವನನಿಗೆ ವಿಶೇಷವಾದ ವರವು ದೊರೆತಿದೆ. ಅವನು ಕೂಡ ಈ ದಿಶೆಯಲ್ಲಿ ಪ್ರಯತ್ನಿಸುತ್ತಿದ್ದಾನೆ.

ವಿ. ವಿ. : ಸಾಲ್ವ ಮತ್ತು ಜರಾಸಂಧ ಇವರಿಬ್ಬರ ಮಾತುಗಳಿಂದ ಶ್ರೀಮದಾಚಾರ್ಯರು ಇಲ್ಲಿ ಎರಡು ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ ಎನ್ನಬಹುದು.

**ಆಧ್ಯಾತ್ಮ ದೃಷ್ಟಿಯಿಂದ**, ದಾನವರ ಸ್ವಭಾವ ಹೇಗೆ, ಪರಮಾತ್ಮನನ್ನು ಅವರು ಹೇಗೆ ದ್ವೇಷಿಸುತ್ತಾರೆ. ಶ್ರೀಕೃಷ್ಣ ಮತ್ತು ರುಕ್ಮಿಣಿದೇವಿಯರ ಬಗೆಗೆ ಅವರಿಗೆ ಎಂಥ ಅಜ್ಞಾನವಿದೆ – ಇತ್ಯಾದಿಗಳನ್ನು ತಿಳಿಸಿದ್ದಾರೆ. ಜೊತೆಯಲ್ಲಿ **ಮಾನವೀಯ ದೃಷ್ಟಿಯಿಂದ – ಮನೋವಿಜ್ಞಾನದ ದೃಷ್ಟಿಯಿಂದ** – ಮಾನವನು ತನ್ನ ಕಾರ್ಯವನ್ನು ಸಾಧಿಸಲು ಹೇಗೆ ಹೆಣಗುತ್ತಾನೆ. ತನ್ನ ವಿಚಾರಗಳನ್ನು ಹೇಗೆ ಸಮರ್ಥಿಸಿಕೊಳ್ಳುತ್ತಾನೆ. ಸ್ವಾಭಿಮಾನಿಯಾದರೂ

ಕೆಲವೊಂದು ಪ್ರಸಂಗಗಳಲ್ಲಿ ಅವನು ಹೇಗೆ ವರ್ತಿಸುತ್ತಾನೆ. ಅವನ ಹಾವಭಾವಗಳು ಹೇಗೆ ಪ್ರಕಟವಾಗುತ್ತವೆ ಎಂಬುದನ್ನು ತಿಳಿಸುತ್ತ ಶ್ರೀಮದಾಚಾರ್ಯರು ವೈಜ್ಞಾನಿಕ ಮನೋ ವಿಶ್ಲೇಷಣೆ ಮಾಡಿದ್ದಾರೆ ಎಂದರೆ ಸತ್ಯದೂರವಾಗಲಾರದು.

**ಇತೀರಿತೇಽಪ್ಯ ತೃಪ್ತವತ್ ಸ್ಥಿತೇತು ಬಾರುಹ (ರ್ಹ) ದ್ರಥೇ ।**
**ಜಗಾಮ ಸೌಭಮಾಸ್ಥಿತಃ ಸ ಸೌಭರಾಟ್ ಯಾವನಂ ॥೧೧೧॥**

ಸಾಲ್ವನ ಈ ಮಾತುಗಳು ಜರಾಸಂಧನಿಗೆ ತೃಪ್ತಿಯನ್ನು ತರಲಿಲ್ಲ. ಅವನು, ಅತೃಪ್ತನಾಗಿಯೇ ಉಳಿದನು. ನಂತರ ಸಾಲ್ವರಾಜನು 'ಭೌಮ' ಎಂಬ ವಿಮಾನವನ್ನು ಹತ್ತಿ ಕಾಲಯವನನ ಸಮೀಪಕ್ಕೆ ಬಂದನು.

**ಸ ಕಾಲಯಾವನೋಽದ್ಧ್ವ ತಂ ಜರಾಸುತಾಂತಿಕಾಗತಂ ।**
**ನಿಶಮ್ಯ ಭಕ್ತಿ ಪೂರ್ವಕಂ ಪ್ರಣಮ್ಯ ಚಾಽರ್ಚಯದ್ದ್ರುತಂ ॥೧೧೨॥**

ಆ ಕಾಲಯವನನು, ಜರಾಸಂಧನಿಂದ ಸಂದೇಶವನ್ನು ತಂದ ಸಾಲ್ವ ರಾಜನಿಗೆ ಬಹು ಭಕ್ತಿಯಿಂದ ಸತ್ಕರಿಸಿ ನಸ್ಕಾರ ಮಾಡಿ ಗೌರವಿಸಿದನು.

**ಜರಾಸುತೊ ಹಿ ದೈವತಂ ಸಮಸ್ತ ಕೇಶವದ್ವಿಷಾಂ ।**
**ಇತಿ ಪ್ರಣಮ್ಯ ತಾಂ ದಿಶಂ ತದೀಯಮಾಶ್ವ ಪೂಜಯತ್ ॥೧೧೩॥**

ಶ್ರೀಹರಿಯ ದ್ವೇಷಿಗಳೆಲ್ಲರಿಗೂ ಜರಾಸಂಧನೇ ಪರಮದೈವತ ಎಂದು ಆತನ ಊರಿನ ದಿಕ್ಕಿನ ಕಡೆಗೆ ಮತ್ತೊಮ್ಮೆ ನಮಿಸಿ, ಸಾಲ್ವನನ್ನು ಬಹುವಾಗಿ ಆದರಿಸಿದನು.

**ತದೀರಿತಂ ನಿಶಮ್ಯ ಚ ದ್ರುತಂ ತ್ರಿಕೋಟಿಸಂಖ್ಯಯಾ ।**
**ಅಕ್ಷೌಹಿಣೀ ಕಯಾ ಯುತಃ ಸ್ವಸೇನಯಾ ನಿರಾಕ್ರಮತ್ ॥೧೧೪॥**

ಸಾಲ್ವರಾಜನು ಹೇಳಿದ ಮಾತುಗಳನ್ನು ಕೇಳಿ, ಕಾಲಯವನನು, ತನ್ನಲ್ಲಿದ್ದ ಮೂರುಕೋಟಿ ಸಂಖೆಯ ಅಕ್ಷೌಹಿಣೀ ಸೈನಿಕರೊಡನೆ ಸಿದ್ಧನಾಗಿ ಹೊರಟನು.

**ತದಶ್ವಮೂತ್ರವಿಷ್ಟಯೊ ಬಭೂವ ನಾಮತಃ ಶಕೃತ್ ।**
**ನದೀ ಸುವೇಗಗಾಮಿನೀ ಕಲೌ ಚ ಯಾವಹೇದ್ದ್ರುತಂ ॥೧೧೫॥**

ಆ ಕಾಲಯವನನ ಸೈನ್ಯದಲ್ಲಿದ್ದ ಕುದುರೆಗಳ ಮೂತ್ರ ಮತ್ತು ಲದ್ದಿ, ಇವುಗಳಿಂದ ಒಂದು ನದಿಯೇ ಸಿದ್ಧವಾಯಿತು. ಅದನ್ನೇ 'ಶಕೃತ್' ಎಂದು ಕರೆದರು. ಅದೇ ನದಿಯು ಕಲಿಯುಗದಲ್ಲಿ ಬಹುವೇಗದಿಂದ ಪವಹಿಸಹತ್ತಿತು. ಇದನ್ನೇ ಇಂದು ಕೋಶಿನದಿ ಎಂದು ಕರೆಯುವರು.

**ಪುನಃ ಪುನರ್ನದೀಭವಂ ನಿಶಾಮ್ಯದೇಶ ಸಂಕ್ಷಯಂ ।**
**ತದನ್ಯ ದೇಶ ಮೂತ್ರಿತಂ ವ್ಯಶೋಷಯದ್ಧಿ ಮಾರುತಃ ॥೧೧೬॥**

ಆದರ ಹೊಲಸಿನಿಂದ ಅನೇಕ ದೇಶಗಳು ಹಾಳಾದವು. (ಮಲ ಮೂತ್ರಗಳು ಅನಾರೋಗ್ಯಕ್ಕೆ ಕಾರಣವಲ್ಲವೇ?) ಇದನ್ನರಿತು ಪರೋಪಕಾರಿಯಾದ ವಾಯುದೇವರು ಅದನ್ನು ಸಹಜವಾಗಿಯೇ ಒಣಗಿಸಿಬಿಟ್ಟರು.

**ಹರಿಶ್ಚ ವೈನತೇಯ ಯುಗ್ವಿಚಾರ್ಯ ರಾಮಸಂಯುತಃ ।**
**ಸದಾಽತಿ ಪೂರ್ಣ ಸಂವಿದಪ್ಯಜೋಽಥ ಲೀಲಯಾಽಸ್ಮರತ್ ॥೧೦೭॥**

ಸರ್ವಜ್ಞನು, ಸದಾಪೂರ್ಣನಾದ ಶ್ರೀಹರಿಯು ತನ್ನ ಲೀಲೆಯನ್ನು ತೋರುವುದಕ್ಕಾಗಿ ಗರುಡನ ಸಹಿತನಾಗಿ ರಾಮನಿಂದ ಕೂಡಿಕೊಂಡು ವಿಚಾರದಲ್ಲಿ ತೊಡಗಿದನು.

**ಯುಯುತ್ಸುರೇಷ ಯಾವನಃ ಸಮೀಪಮಾಗತೋಽದ್ಯ ನಃ ।**
**ಯುಯುತ್ಸತಾಮನೇನ ನೋ ಜರಾಸುತೋಽಭಿಯಾಸ್ಯತಿ ॥೧೦೮॥**

ಈ ಕಾಲಯವನನು ಉತ್ಸುಕನಾಗಿ ನಮ್ಮೊಡನೆ ಯುದ್ಧ ಮಾಡಲು ಬರುತ್ತಾನೆ. ನಾವು ಆತನೊಡನೆ ಯುದ್ಧ ಮಾಡಲು ಪ್ರಾರಂಭಿಸಿದರೆ, ಆ ಜರಾಸಂಧನು ಕೂಡ ಯುದ್ಧಕ್ಕೇ ಸಿದ್ಧನಾಗಿ ಬರುತ್ತಾನೆ.

**ಸ ಯಾದವಾನ್ ಹನಿಷ್ಯತಿ ಪ್ರಭಂಗತಸ್ತು ಕೋಪ (ಪಿ) ತಃ ।**
**ಪುರಾ ಜಯಾಶಯಾ ಹಿ ನೌಯದೊನ್ನ ಜಘ್ನಿವಾನಸೌ ॥೧೦೯॥**

ಈಗ ಈ ಜರಾಸಂಧನು ಹಿಂದಿನ ಸೋಲಿನ ಸಿಟ್ಟಿನಿಂದ ಯಾದವರನ್ನು ಕೊಲ್ಲುತ್ತಾನೆ. ಹಿಂದೆಯೇ ಈ ಕೆಲಸ ಮಾಡಬಹುದಾಗಿದ್ದಿತು. ಆದರೆ ತಾನು ಗೆಲ್ಲುತ್ತೇನೆ ಎನ್ನುವ ಆಶೆಯಿಂದ ಯಾದವರನ್ನು ಕೊಲ್ಲಲಿಲ್ಲ.

**ನಿರಾಶಕೋಽದ್ಯ ಯಾದವಾನಪಿ ಸ್ಮ ಪೀಡಯಿಷ್ಯತಿ ।**
**ಅತಃ ಸಮುದ್ರ ಮಧ್ಯಗಾ ಪುರೀ ವಿಧಾನಮದ್ಯ ಮೇ ॥೧೧೦॥**

ಈಗ ಜರಾಸಂಧನು ಹತಾಶನಾಗಿದ್ದಾನೆ. ಕಾರಣ ಯಾದವರನ್ನು ಪೀಡಿಸುವುದು ನಿಶ್ಚಿತ. ಅದಕ್ಕಾಗಿ ಸಮುದ್ರದ ಮಧ್ಯದಲ್ಲಿ ಒಂದು ನಗರವನ್ನು ನಿರ್ಮಿಸುವುದೇ ಉತ್ತಮವಾದ ಉಪಾಯವು.

**ಪ್ರರೋಚತೇ ನಿಧಾನಮತ್ರ ಮುತ್ರ ಸರ್ವಸಾತ್ವತಾಂ ।**
**ಉದೀರ್ಯ ಚೈವ ಮೀಶ್ವರೋಽಸ್ಮರತ್ಸುರೇಶ ವಾ ರ್ಧಕಿಂ ॥೧೧೧॥**

ಅಲ್ಲಿ ಸಾತ್ವಿಕರಾದ ಎಲ್ಲ ಯಾದವರನ್ನು ನೆಲಸುವಂತೆ ಮಾಡೋಣ ಇದು ನನಗೆ ಸರಿಯೆನಿಸುತ್ತಿದೆ. ಹೀಗೆ ಹೇಳುತ್ತ ಶ್ರೀಕೃಷ್ಣನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಸ್ಮರಿಸಿದನು.

**ಸ ಭೌವನಃ ಸಮಾಗತಃ ಕುಶಸ್ಥಲೀಂ ವಿನಿರ್ಮಮೇ ।**
**ನಿರಂಬುಕೇ ತು ಸಾಗರೇ ಜನಾರ್ದನಾಜ್ಞಯಾ ಕೃತೆ ॥೧೧೨॥**

ಭುವನಾಖ್ಯ ವರ್ಧಕಿಯ ಮಗನಾದ ವಿಶ್ವಕರ್ಮನು ಬಂದನು. 'ಕುಶಸ್ಥಲ' ಎಂಬ ಸ್ಥಳದಲ್ಲಿ ಶ್ರೀಕೃಷ್ಣನ ಆಜ್ಞೆಯಿಂದ ಒಂದು ಸುಂದರವಾದ ಪಟ್ಟಣವನ್ನು ನಿರ್ಮಿಸಿದನು. ಸಮುದ್ರದ ಭಾಗವಾದರೂ ಅಲ್ಲಿ ನೀರು ಬಹಳ ಕಡಿಮೆ ಪ್ರಮಾಣದಲ್ಲಿ ಇದ್ದಿತು.

**ಮಹೋದಕಸ್ಯ ಮಧ್ಯ ತತ್ಸಕಾರ ತಾಂ ಪುರೀಂ ಶುಭಾಂ ।**
**ದ್ವಿಷಟ್ಕ ಯೋಜನಾಯತಾಂ ಪಯೋಬ್ಧಿ ಮಧ್ಯಗೋಪಮಾಂ ॥೧೧೩॥**

ಮಹೋದಕದ ಮಧ್ಯದಲ್ಲಿ ಒಂದು ಸುಂದರವಾದ ಪಟ್ಟಣವನ್ನು ನಿರ್ಮಿಸಿದನು. ಆ ಪಟ್ಟಣವು ಹನ್ನೆರಡು ಯೋಜನೆ ವಿಸ್ತೃತವಾಗಿದ್ದಿತು. ಅದು ಕ್ಷೀರಸಮುದ್ರದಲ್ಲಿರುವ ಪಟ್ಟಣಕ್ಕೆ ಸದೃಶವಾಗಿತ್ತು.

ವಿ. ವಿ. : ವೈಕುಂಠಕ್ಕೆ ಸದೃಶವಾಗಿತ್ತು. ಪಟ್ಟಣದ ಸುತ್ತಲೂ ನೀರಿನ ಪ್ರಾಕಾರವಿದ್ದಿತು.

**ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಂ ।**
**ಸಭಾಂ ಸುಧರ್ಮನಾಮ ಕಾಂ ದದೌಸಮೀರಣೋಽಸ್ಯಚ ॥೧೧೪॥**

ಆ ಪಟ್ಟಣದ ಸುತ್ತಲೂ ಉಪ್ಪುನೀರು ಇದ್ದಿತು. ಶ್ರೀಕೃಷ್ಣನು ತನ್ನ ಪ್ರಭಾವದಿಂದ ಆ ನೀರನ್ನು ಅಮೃತಕ್ಕೆ ಸಮನಾಗಿ ಮಾಡಿದನು. ವಾಯುದೇವರು 'ಸುಧರ್ಮ' ಎಂಬ ಹೆಸರಿನ ಸಭೆಯ ಪೀಠವನ್ನು ತಂದುಕೊಟ್ಟರು.

ವಿ.ವಿ. : ಅಚಿಂತ್ಯ ಶಕ್ತಿಯುಳ್ಳ ಪರಮಾತ್ಮನಿಗೆ, ಉಪ್ಪು ನೀರನ್ನು ಸಿಹಿಯಾಗಿ ಮಾಡುವುದು ಆಶ್ಚರ್ಯವೇ?

**ಸುಧರ್ಮವು ಇಂದ್ರನಲ್ಲಿದ್ದಿತಲ್ಲವೇ?**

**ಶತಕ್ರತೋಃ ಸಭಾಂ ತು ತಾಂ ಪ್ರದಾಯ ಕೇಶವಾಯ ಸಃ ।**
**ನಿಧೀನ್ ಸಮರ್ಪ್ಯ ಸರ್ವಶೋ ಯಯೌ ಪ್ರಣಮ್ಯತಂ ಪ್ರಭುಂ ॥೧೧೫॥**

ಆ ಸುಧರ್ಮವು ಇಂದ್ರನದೇ. ಅದನ್ನೇ ವಾಯುದೇವರು ತಂದು ನಾರಾಯಣನಿಗೆ ಕೊಟ್ಟರು. ನಂತರ ನವನಿಧಿಗಳನ್ನು ಸಮರ್ಪಿಸಿ, ಪ್ರಭುವಿಗೆ ನಮಿಸಿ, ಅಲ್ಲಿಂದ ಪ್ರಯಾಣ ಬೆಳೆಸಿದರು.

**ಸಮಸ್ತ ದೇವತಾಗಣಾಃ ಸ್ವಕೀಯಮರ್ಪಯನ್‌ಹರೌ ।**
**ವಿಮುಚ್ಯ ಪಕ್ಷಿ ಪುಂಗವ ಸ ಯೋದ್ಧು ಮೈಚ್ಛ ದಚ್ಯುತಃ ॥೧೧೬॥**

ಸಮಸ್ತ ದೇವತೆಗಳು ತಮ್ಮಲ್ಲಿರತಕ್ಕ ಉತ್ಕೃಷ್ಟವಾದ ವಸ್ತುಗಳನ್ನು ಶ್ರೀಹರಿಗೆ ಸಮರ್ಪಿಸಿದರು. ಇದೆಲ್ಲ ಆದನಂತರ ಶ್ರೀಹರಿಯು ಗರುಡನನ್ನು ಬಿಟ್ಟು, ಯುದ್ಧಕ್ಕೆ ಇಚ್ಛಿಸಿ ಸಿದ್ಧನಾದನು.

**ಸಮಸ್ತ ಮಾಥುರಾನ್ ಪ್ರಭುಃ ಕುಶಸ್ಥಲೀ ಸ್ಥಿತಾನ್ ಕ್ಷಣಾತ್ ।**
**ವಿಹಾ(ಧಾ)ಯ ಬಾಹುಯೋಧಕಃ ಸಯಾವನಂ ಸಮಭ್ಯಯೊತಾ ॥೧೧೭॥**

ಪ್ರಭುವಾದ ಶ್ರೀಕೃಷ್ಣನು ಮಧುರಾ ಪಟ್ಟಣದಲ್ಲಿರುವ ಸಮಸ್ತ ಜನರನ್ನು ಕ್ಷಣಾರ್ಧದಲ್ಲಿ ಕುಶಸ್ಥಲೀ (ದ್ವಾರಕಾದಲ್ಲಿ) ಯಲ್ಲಿ ತಂದು ನಿಲ್ಲಿಸಿದನು. ಬಾಹುಗಳಿಂದಲೇ ಯುದ್ಧ ಮಾಡುವ ಉದ್ದೇಶದಿಂದ ಆ ಕಾಲಯವನನಿಗೆ ಎದುರಾಗಿ ಬಂದನು.

**ಅನಂತ ಶಕ್ತಿರಪ್ಯಜಃ ಸುನೀತಿ ದೃಷ್ಟಯೇ ನೃಣಾಂ ।**
**ವ್ಯವಾಸಯನ್ನಿಜಾನ್ ಜನಾನ್ ಸ ಲೀಲಯೈವ ಕೇವಲಂ ॥೧೧೮**

ಶ್ರೀಕೃಷ್ಣನು ಅನಂತ ಶಕ್ತಿಯುಳ್ಳವನಾದರೂ, ಜಗತ್ತಿನ ನರರಿಗೆ ಒಂದು ಲೀ ಮತ್ತು ನೀತಿಯನ್ನು ತೋರುವುದಕ್ಕಾಗಿ, ತನ್ನ ಎಲ್ಲ ಜನರನ್ನು ಆಟ ಆಡಿದಂ ತಂದುಬಿಟ್ಟನು. 'ಜರಾಸಂಧನಿಗಾಗಲಿ, ಕಾಲಯವನಿಗಾಗಲಿ, ಅಂಜಿ ಓಡಿಬಂದನೇ' ಎನ್ನುವುದಕ್ಕೆ ಉತ್ತರ.

**ಅನಾದ್ಯನಂತಕಾಲಕಂ ಸಮಸ್ತ ಲೋಕಮಂಡಲಂ ।**
**ಯದೀಕ್ಷಯೈವ ರಕ್ಷತೇ ಕಿಮಸ್ಯವೃಷ್ಣಿ ರಕ್ಷಣಂ ॥೧೧೯**

ಅನಾದಿಯಿಂದಲೂ, ಅನಂತಕಾಲದಿಂದಲೂ, ಸಮಸ್ತ ಲೋಕಗಳನ್ನು ರಕ್ಷಿಸುವಂ ಶ್ರೀಹರಿಗೆ (ಶ್ರೀಕೃಷ್ಣನಿಗೆ) ಯಾದವರನ್ನು ರಕ್ಷಿಸುವುದು ಅಸಾಧ್ಯವೇ? (ಸರ್ವಥಾ ಇಲ್ಲ.

**ನಿರಾಯುಧಂ ಚ ಮಾಮಯಂ ವರಾಚ್ಛಿವಸ್ಯ ನ ಕ್ಷಮಃ ।**
**ಸಮಸ್ತ ಸೇನಯೊ ಯುತೋಽಪಿ ಯೋದ್ಧುಮಿತ್ಯ ದರ್ಶಯತಾ ॥೧೨೦**

'ಕಾಲಯವನನಿಗೆ ಸಕಲಸೈನ್ಯವಿದೆ. ರುದ್ರದೇವರ ವರವೂ ಇದೆ. ಆದರು ನಿರಾಯುಧನಾದ ನನಗೆ ಸಮಾನಾಗಲಾರ' ಇದನ್ನು ತೋರಿಸಲೆಂದೇ ಬಾಹುಯುದ್ಧ ಸಿದ್ಧನಾದನು.

**ಸ ಕೃಷ್ಣ ಪನ್ನಗಂ ಘಟೇನಿಧಾಯ ಕೇಶವೋಽರ್ಪಯತ್ ।**
**ನಿರಾಯುಧೋಽಪ್ಯಹಂ ಕ್ಷಮೋನಿಹಂತುಮ ಪ್ರಿಯಾನಿತ ॥೧೨೧**

**ಘಟೇಂ ಪಿಪೀಲಿಕಾಗಣೈಃ ಪ್ರಪೂರ್ಯಯಾವನೋಽಸ್ಯ ಚ ।**
**ಬಹುತ್ವತೋ ವಿಜೇಷ್ಯ ಇತ್ಯಹಿಂ ಮೃತಂ ವ್ಯದರ್ಶಯತ್ ॥೧೨೨**

ನಾನು ನಿರಾಯುಧನಾಗಿ ಒಬ್ಬನಿದ್ದಾಗ್ಯೂ, ಶತ್ರುಗಳನ್ನು ಕೊಲ್ಲಬಲ್ಲೆ ಎಂಬುದನ ಸೂಚಿಸಲು, ಒಂದು ಕೊಡದಲ್ಲಿ ಕರಿಹಾವನ್ನು ಹಾಕಿ ಶ್ರೀಕೃಷ್ಣ ಕಾಲಯವನನಿ ಕಳಿಸಿಕೊಟ್ಟನು.

ಆಗ ಕಾಲಯವನನು, ಅದೇ ಘಟದಲ್ಲಿ, ಆ ಹಾವನ್ನು ಕೊಂದು ಅನೇ ಇರಿವೆಗಳನ್ನು ತುಂಬಿ ಶ್ರೀಕೃಷ್ಣನಿಗೆ ತಿರುಗಿ ಕಳಿಸಿದನು. ನೀನು ಬಲಿಷ್ಠನಾದರೂ, ನಾವು ಅನೇಕರು. ಇರುವೆಗಳಂತೆ ಇದ್ದೇವೆ. ನಾವು ನಿನ್ನನ್ನು ಗೆದ್ದು ಕೊಲ್ಲಬಲ್ಲೆವು ಎಂಬುದನ್ನು ಸೂಚಿಸುವಂತಿತ್ತು.

**ವಿ. ವಿ. :** 'ಕೃಷ್ಣ' ಎಂಬ ಪದವನ್ನು ಕಾಲಯವನನು ಕೊಂದದ್ದರಿಂದ ಗರ್ಗಾಚಾರ್ಯರ ಅಭಿಪ್ರಾಯ ಪೂರ್ಣಗೊಂಡಿತು. ದೇವರು ಕೊಟ್ಟ ರುದ್ರ ವರವೂ ಸಾರ್ಥಕವಾಯಿತು ಎಂದು ಶ್ರೀ ಶ್ರೀ ಶ್ರೀ ವಾದಿರಾಜರು ಚಮತ್ಕಾರಿಕವಾಗಿ ಹೇಳಿದ್ದಾರೆ. ಎರಡೂ – 'ಕೃಷ್ಣ' ಶಬ್ದಗಳಲ್ಲವೇ? ಇದು ಶಬ್ದ ಚಾತುರ್ಯವಷ್ಟೇ. ಕೃಷ್ಣ – ಕೇಶವ ಕೃಷ್ಣ – ಕರಿನಾಗರಹಾವು.

**ಕಿಮತ್ರ ಸತ್ಯ ಮಿತ್ಯಹಂ ಪ್ರದರ್ಶಯಿಷ್ಯ ಇತ್ಯಜಃ ।**
**ಉದೀರ್ಯ ದೂತಮಬ್ಯ ಯಾತ್ಯಯಾವನಂ ಪ್ರಬಾಧಿತುಂ ॥೧೨೩॥**

"ಇವುಗಳಲ್ಲಿ ಯಾವುದು ಸತ್ಯ ಎಂಬುದನ್ನು ನಾನು ತೋರಿಸಿ ಕೊಡುತ್ತೇನೆ" ಹೀಗೆ ಉತ್ಪತ್ತಿರಹಿತನಾದ ಶ್ರೀಕೃಷ್ಣನು ದೂತನ ಸಂಗಡ ಹೇಳಿ ಕಳುಹಿ, ಆ ಕಾಲಯವನನ್ನು ಸಂಹರಿಸಲು ಸಿದ್ಧನಾಗಿ ಹೊರಟನು.

**ವಿ. ವಿ. :** ಇಲ್ಲಿ ಎರಡು ಅಭಿಪ್ರಾಯಗಳಿವೆ.

೧) ಒಬ್ಬನು ಪ್ರಬಲನಾದಾಗ್ಯೂ, ಅನೇಕ ಜನರು ಸೇರಿ ಅವನನ್ನು ಕೊಲ್ಲಲು ಸಾಧ್ಯ. ಇದು ಕಾಲಯವನನ ಅಭಿಪ್ರಾಯ. ಇದು ಲೋಕಾರೂಢಿಯಿಂದ ಸತ್ಯವೇ.

೨) 'ಬಲಿಷ್ಠನಾದವನು ಒಬ್ಬನೇ ಸಾಕು. ಕೆಲಸಕ್ಕೆ ಬಾರದ ಸಾವಿರ ಜನ ಇದ್ದು ಏನು ಪ್ರಯೋಜನ' ಇದು ದೈನಂದಿನ ವ್ಯವಹಾರದಲ್ಲಿ ಸತ್ಯ. ಆದರೆ ಶ್ರೀಕೃಷ್ಣನ ಅಭಿಪ್ರಾಯವೇ ಬೇರೆ. ಆತನು (ಪರಮಾತ್ಮನು) ಸತ್ಯಸಂಕಲ್ಪನು. ಉಳಿದವರ ಸಂಕಲ್ಪ ಮಿಥ್ಯಸಂಕಲ್ಪ. ಅದನ್ನು ಶ್ರೀಕೃಷ್ಣನು ಈ ಘಟನೆಯಿಂದ ತೋರಿಸಿಕೊಟ್ಟಿದ್ದಾನೆ ಎಂದರೆ ಅತಿಶಯೋಕ್ತಿಯಲ್ಲ.

**ಸ ಬಾಹುನೈವ ಕೇಶವೋ ವಿಜಿತ್ಯಯಾವನಂ ಪ್ರಭುಃ ।**
**ನ್ಯಪಾತ ಯದ್ರಥೋತ್ತ್ ಮಾತ್ತ್ತತೇನ ಕೇಶವೋಽರಿಹಾ ॥೧೨೪॥**

ಕೇಶವನು ತನ್ನ ಬಾಹುಬಲದಿಂದಲೇ ಆ ಕಾಲಯವನನ ಸರ್ವಸೈನ್ಯವನ್ನು ಸಂಹರಿಸಿದನು. ಇನ್ನುಳಿದ ಆನೆ–ಕುದುರೆ ಇತ್ಯಾದಿಗಳನ್ನು ತನ್ನ ಪುರವಾದ ದ್ವಾರಕಾ ಪಟ್ಟಣಕ್ಕೆ ಕಳುಹಿಸಿಕೊಟ್ಟನು.

**ಮ (ಸ) ಹಾಸ್ತ್ರ ಶಸ್ತ್ರ ಸಂಚಯಾನ್ ಸೃಜಂತಮಾ ಶು ಯಾವನಂ ।**
**ನ್ಯಪಾತ ಯದ್ರಥೋತ್ತ್ ಮಾತ್ತ್ತತೇನ ಕೇಶವೋಽ ರಿಹಾ ॥೧೨೫॥**

ಅನೇಕ ಅಸ್ತ್ರ–ಶಸ್ತ್ರಗಳನ್ನು ಹುಟ್ಟಿಸತಕ್ಕ ಸಾಮರ್ಥ್ಯವುಳ್ಳ ವೈರಿಯಾದ ಕಾಲ ಯವನನನ್ನು, ರಥರಹಿತನನ್ನಾಗಿಯೂ, ಶಸ್ತ್ರಗಳು ಇಲ್ಲದವನನ್ನಾಗಿ ಮಾಡಿ ಕೆಡಹಿದನು. (ಸಂಹರಿಸಲಿಲ್ಲ)

**ವಿವಾಹನಂ ನಿರಾಯುಧಂ ವಿಧಾಯ ಬಾಹುನಾ ಕ್ಷಣಾತ್ ।**
**ವಿಮೂರ್ಛಿತಂ ನ ಬಾಹನತ್ ಸುರಾರ್ಥಿತಂ ಸ್ಮರಣ್ ಹರಿಃ ॥೧೨೬॥**

**ಏಕೇ೭ಪುರಾ ಹಿ ಯೌವನಾಶ್ವಜೇ ವರಪ್ರದಾಃ ಸುರೇಶ್ವರಾಃ ।**
**ಯಯಾಚಿರೇ ಜನಾರ್ದನಂ ವರಂ ವರಪ್ರದೇಶ್ವರಂ ॥೧೨೭॥**

ಹಿಂದೆ ದೇವತೆಗಳು ಕೊಟ್ಟ ವರವನ್ನು ಸ್ಮರಿಸಿಕೊಂಡು, ಅದನ್ನು ಸತ್ಯ ಮಾಡುವದಕ್ಕಾಗಿ ಶ್ರೀಕೃಷ್ಣನು, ಕೇವಲ ವಿರಥ ಮತ್ತು ಶಸ್ತ್ರಗಳಿಲ್ಲದವನನ್ನಾಗಿ ಮಾಡಿ – ಕಾಲಯವನನ್ನು ಕೆಡಹಿದನು. ಕೊಲ್ಲಲಿಲ್ಲ. ಅದರಿಂದ ಅವನು ಮೂರ್ಛಿತನಾದನು.

ಹಿಂದೆ ದೇವಾಸುರರ ಯುದ್ಧವು ಮುಗಿದ ಮೇಲೆ, ಮುಚುಕುಂದ ರಾಜನಿಗೆ ದೇವತೆಗಳು ವರಕೊಟ್ಟಿದ್ದರು. ಅದನ್ನು ಸತ್ಯವನ್ನಾಗಿ ಮಾಡಲು , ಎಲ್ಲರಿಗೂ ವರಪ್ರಸಾದ ಮಾಡುವ ಪರಮಾತ್ಮನನ್ನು ಕುರಿತು ಪ್ರಾರ್ಥಿಸಿದ್ದರು.

**ಅನರ್ಥಕೋ ವರೋಽಮುನಾ ವೃತೋಽಪಿ ಭವೇತ್ ।**
**ಅರಿಂ ಭವಿಷ್ಯಯಾವನಂದಹತ್ವಯಂ ತವೇಶ್ವರ ॥೧೨೮॥**

ನಾವು ಕೊಟ್ಟ ವರದಿಂದ ಮುಚ್ಕುಂದ ರಾಜನಿಗೆ ಅನರ್ಥವಾಗುವುದನ್ನು ತಪ್ಪಿಸಿ, ನೀನು ಅದನ್ನು ಸಾರ್ಥವನ್ನಾಗಿ ಮಾಡು. ಅದು ಹೇಗೆ? ಮುಂದೆ ಭವಿಷ್ಯದಲ್ಲಿ ಇವನು ನಿನ್ನ ಶತ್ರುವಾದ ಕಾಲಯವನನನ್ನು ಸುಟ್ಟು ಹಾಕಲಿ. (ಅಂದರೆ ಮುಚ್ಕುಂದ ರಾಜನಿಗೆ ಸಾರ್ಥಕವಾದೀತು)

**ವಿ. ವಿ. :** ಮುಚುಕುಂದ ರಾಜನಿಗೆ ದೇವತೆಗಳು ಕೊಟ್ಟ ವರದಿಂದ ಯಾವ ಪುರುಷಾರ್ಥಗಳೂ ಇರಲಿಲ್ಲ. ಕಾರಣ ಅದು ಅನರ್ಥಕಾರಿ. ಮುಂದೆ ಶ್ರೀಕೃಷ್ಣನ ಕಾರ್ಯದಲ್ಲಿ ಸಹಾಯಕನಾದುದರಿಂದ ಅದು ಸಾರ್ಥಕ. ಏಕೆಂದರೆ ಅದರಿಂದ ಭಗವಂತನ ಪ್ರೀತಿ ಪ್ರಾಪ್ತವಾಯಿತು.

**ಮುಚುಕುಂದನ ಕಥೆಯ ಹಿನ್ನೆಲೆ ಭಾಗವತದಲ್ಲಿ ಬಂದಿದೆ. ಅದು ಇಂತಿದೆ:** ಹಿಂದೆ ದೇವಾಸುರ ಯುದ್ಧದಲ್ಲಿ ಯೌವನಾಶ್ವರಾಯನ ಪುತ್ರ ಮಾಂಧಾತ – ಆತನ ಮಗ ಮುಚುಕುಂದ, ಆತನು ದೇವತೆಗಳಿಗೆ ಸಹಾಯ ಮಾಡಿದ್ದನು. ಅದರಿಂದ ದೇವತೆಗಳುಗೆದ್ದರು. ಆಗ ದೇವತೆಗಳು ಪ್ರೀತರಾಗಿ 'ನಿನಗೆ ಏನು ವರ ಬೇಕು?' ಎಂದು ಕೇಳಿದರು "ನನಗೆ ಸ್ವರ್ಗ ಇತ್ಯಾದಿಗಳು ಏನೂ ಬೇಡ. ಕೇವಲ ನನಗೆ ನಿದ್ರೆಯನ್ನು ಕೊಡಿರಿ. ನನ್ನನ್ನು ಯಾರು ಎಚ್ಚರಿಸುವರೊ, ನನ್ನ ದೃಷ್ಟಿ ಬಿದ್ದ ಕೂಡಲೇ ಅವರು ಮರಣ ಹೊಂದಲಿ" ಅದರಂತೆ ದೇವತೆಗಳು ವರವನ್ನು ಕೊಟ್ಟರು. ಅದನ್ನು ಸತ್ಯ ಮಾಡುವದಕ್ಕಾಗಿ ಶ್ರೀಕೃಷ್ಣನು ಕಾಲಯವನನ ಕೂಡ ಯುದ್ಧ ಮಾಡಿ ಓಡಿಹೋದವರಂತೆ ನಟಿಸಿ, ಮುಚುಕುಂದನು ಮಲಗಿದ ಗುಹೆಗೆ ಓಡಿಹೋದನು. ಕಾಲಯವನನು ಆತನನ್ನು ಬೆನ್ನು ಹತ್ತಿ ಅಲ್ಲಿ ಕೃಷ್ಣನು ಅಡಗಿದ. (ಭಯದಿಂದಲ್ಲ) ಗುಹೆಗೆ ಬಂದನು ಕಾಲಯವನನು, ಮುಚುಂದ ರಾಜನನ್ನೇ ಶ್ರೀಕೃಷ್ಣನೆಂದು ತಿಳಿದು ಅವನನ್ನು ಒದೆದು ಎಬ್ಬಿಸಿದ. ಅದರಿಂದ ಮುಚಕುಂದನು ಎದ್ದ. ಕಾಲಯವನನ್ನು ನೋಡಿದ ಕೂಡಲೇ ಕಾಲಯವನ ಭಸ್ಮನಾದ. ಅದರಿಂದ ಮುಚುಕುಂದ ರಾಜನಿಗೆ ಪುರುಷಾರ್ಥ ದೊರೆಯಿತು. ದೇವತೆಗಳ ವರಸಾರ್ಥಕವಾಯಿತು.

ಇಲ್ಲಿ ಕಾಲಯವನನು ಮುಚುಕುಂದ ರಾಜನನ್ನೇ ಶ್ರೀಕೃಷ್ಣ ಎಂದು ತಿಳಿದುಕೊಂಡಿದ್ದ. ಅದು ಅವನ ಅಜ್ಞಾನ ಮತ್ತು ಮಿಥ್ಯಜ್ಞಾನ ಕೂಡ. ಅದಕ್ಕಾಗಿ ಅವನಿಗೆ ಆ ಶಿಕ್ಷೆ ಆಯಿತು.

**ತಥಾಸ್ತ್ವಿತಿ ಪ್ರಭಾಷಿತಂ ಸ್ವವಾಕ್ಯಮೇವ ಕೇಶವಃ ।**
**ಋತಂ ತಿಧಾತುಮಭ್ಯ ಯಾತ್ಯ ಯೌವನಾಶ್ವ ಜಾಂತಿಕಂ ॥೧೨೯॥**

ಶ್ರೀಕೃಷ್ಣನು 'ಹಾಗೇ ಆಗಲಿ' ಎಂದು ದೇವತೆಗಳಿಗಿತ್ತ ಮಾತನ್ನು ಸತ್ಯ ಮಾಡುವುದಕ್ಕಾಗಿ ಮುಚುಕುಂದ ರಾಜನು ಮಲಗಿರುವ ಸ್ಥಳಕ್ಕೆ ಓಡಿದನು.

**ಸ ಸಂಜ್ಞಕೋಽಥ ಯಾವನೋ ಧರಾತಲಾತ್ ಸಮುತ್ಥಿ ತಃ ।**
**ನಿ ಪಾತ್ಯ ಯೋಂತಮೀಶ್ವರಂ ಸ ಪೃಷ್ಠತೋಽನಯಾತ್ ಕ್ರುಧಾ ॥೧೩೦॥**

ಸ್ವಲ್ಪ ಹೊತ್ತಿನ ನಂತರ ಕಾಲಯವನನಿಗೆ ಎಚ್ಚರ ಬಂದಿತು. ಕೂಡಲೇ ಅವನು ಮಲಗಿದವನು ಭೂಮಿಯಿಂದ ಎದ್ದು, ತನ್ನನ್ನು ಕೆಡಹಿದ ಶ್ರೀಕೃಷ್ಣನ ಬೆನ್ನುಹತ್ತಿ ಓಡಿದನು.

**ಹರಿರ್ಗುಹಾಂ ನೃಪಸ್ಯ ತು ಪ್ರವಿಶ್ಯ ಸಂವ್ಯವಸ್ಥಿತಃ ।**
**ಸ ಯಾವನಃ ಪದಾಹನನ್ನೃಪಂ ಸ ತಂ ದದರ್ಶ ಹ ॥೧೩೧॥**

ಶ್ರೀಕೃಷ್ಣನು ಮುಚುಕುಂದ ರಾಜನು ಮಲಗಿದ್ದ ಗುಹೆಯನ್ನು ಪ್ರವೇಶ ಮಾಡಿ ಕಾಣದಂತಾದನು.ಆ ಕಾಲಯವನನು ಮಲಗಿದ ಮುಚುಕುಂದ ರಾಜನನ್ನು ತನ್ನ ಕಾಲಿನಿಂದ ಒದೆದನು. ಆಗ ಮುಚುಕುಂದನು ಕಾಲಯವನನನ್ನು ಸಿಟ್ಟಿನಿಂದ ನೋಡಿದನು.

**ಸ ತಸ್ಯ ದೃಷ್ಟಿ ಮಾತ್ರತೋ ಬಭೂವ ಭಸ್ಮಸಾತ್ ಕ್ಷಣಾತ್ ।**
**ಸ ಏವ ವಿಷ್ಣುರವ್ಯಯೋ ದದಾಹ ತಂ ಹಿ ವಹ್ನಿವತ್ ॥೧೩೨॥**

ಆ ಯವನನು, ಆ ರಾಜನ ದೃಷ್ಟಿ ಮಾತ್ರದಿಂದಲೇ ಕ್ಷಣಾರ್ಧದಲ್ಲಿ ಸುಟ್ಟು ಭಸ್ಮವಾದನು. ಅವ್ಯಯನಾದ ಶ್ರೀವಿಷ್ಣುವು ಯವನನನ್ನು ಬೆಂಕಿಯಂತೆ ಸುಟ್ಟು ಹಾಕಿದನು.

**ವರಾಚ್ಛಿವಸ್ಯ ದೈವತ್ಯೈರವಧ್ಯ ದಾನವಾನ್ ಪುರಾ ।**
**ಹರೇರ್ವರಾನ್ನಿಹತ್ಯ ಸ ಪ್ರಪೇದ ಆಶ್ವಿಮಂ ವರಂ ॥೧೩೩॥**

ಮೊದಲು ಆ ದಾನವರಿಗೆ, 'ಅವಧ್ಯರಾಗುರಿ' ಎಂದು ಶಿವನಿಂದ ವರವು ಲಭಿಸಿತ್ತು. ಈಗ ದೇವರ ಅನುಗ್ರಹದಿಂದ ಅವನು ದೈತ್ಯರನ್ನು ಸಂಹರಿಸಿ ದೇವತೆಗಳು ತನಗಿತ್ತ ವರವನ್ನು ಸತ್ಯವನ್ನಾಗಿ ಮಾಡಿದ.

**ಸು ದೀರ್ಘ ಸುಪ್ತಿ ಮಾತ್ಮನಃ ಪ್ರಸುಪ್ತಿ ಭಂಗ ಕೃತಕ್ಷಯಂ ।**
**ಸ್ವದೃಷ್ಟಿಮಾತ್ರ ತಸ್ತ ತೋ ಹತಃ ಸ ಯಾವನಸ್ತದಾ ॥೧೩೪॥**

ಆ ರಾಜನು "ಅತಿ ದೀರ್ಘವಾದ ನಿದ್ರೆಯನ್ನು, ನಿದ್ರೆಯನ್ನು ಭಂಗ ಮಾಡಿದವನು ತನ್ನ ದೃಷ್ಟಿಮಾತ್ರದಿಂದ ಸಾಯಬೇಕು" ಈ ಎರಡು ವರಗಳನ್ನು ಪಡೆದಿದ್ದನು. ಅದಕ್ಕಾಗಿಯೇ ರಾಜನ ದೃಷ್ಟಿ ಬಿದ್ದ ಕೂಡಲೇ ಕಾಲಯವನನು ಭಸ್ಮವಾದನು.

**ಅತಶ್ಚ ಪುಣ್ಯಮಾಪ್ತಮಾನ್ ಸುರಪ್ರಸಾದ ತೋಽ ಕ್ಷಯಂ ।**
**ಸ ಯೌವನಾಶ್ವಜೋ ನೃಪೋ ನ ದೇವ ತೋಷಣಂ ವೃಥಾ ॥೧೩೫॥**

ನಂತರ ಆ ಮುಚುಕುಂದ ರಾಜನು ದೇವತೆಗಳ ಅನುಗ್ರಹದಿಂದ ಪುಣ್ಯವನ್ನು ಸಂಪಾದಿಸಿ, ಕೊನೆಗೆ ಅಕ್ಷಯ ಸುಖವನ್ನು (ಮುಕ್ತಿಯನ್ನು) ಪಡೆದನು. ದೇವತೆಗಳ ಸಂತೋಷ ಆಶೀರ್ವಾದ ಎಂದು ವ್ಯರ್ಥವಾಗಲಾರದು.

ವಿ. ವಿ. : ಅವರವರ ಸ್ಥಾನಮಾನಗಳನ್ನು ಅರಿತು ತಾರತಮ್ಯದ ಪ್ರಕಾರ ದೇವತೆಗಳನ್ನು ಸೇವಿಸುವುದೇ ಅವರನ್ನು ತುಷ್ಟಿಪಡಿಸುವುದು.

**ತತೋ ಹರಿಂ ನಿರೀಕ್ಷ್ಯ ಸ ಸ್ತುತಿಂ ವಿಧಾಯ ಚೋತ್ತಮಾಂ ।**
**ಹರೇರನುಜ್ಞಯಾ ತಪಶ್ಚಕಾರ ಮುಕ್ತಿಮಾಪ ಚ ॥೧೩೬॥**

ಅನಂತರ ಮುಚಕುಂದ ರಾಜನು ಶ್ರೀಹರಿಯನ್ನು ನೋಡಿ – ಉತ್ತಮವಾದ ಸ್ತೋತ್ರವನ್ನು ಮಾಡಿದನು. ಶ್ರೀಹರಿಯ ಅಪ್ಪಣೆಯಿಂದಲೇ ಪುನಃ ತಪಸ್ಸನ್ನು ಆಚರಿಸಿ ಮುಕ್ತಿಯನ್ನು ಪಡೆದನು.

ವಿ. ವಿ. : ಮುಚುಕುಂದ ರಾಜನು ಮಾಡಿದ ಸ್ತುತಿ ಭಾಗವತ ದಶಮ ಸ್ಕಂದದಲ್ಲಿ ಬಹುವಿವರವಾಗಿ ಬಂದಿದೆ. ಆದರಲ್ಲಿ ಭಗವಂತನ ಅನೇಕ ಗುಣಗಳನ್ನು, ಮಹಿಮೆಯನ್ನೂ ವರ್ಣಿಸಲಾಗಿದೆ.

**ತತೋ ಗುಹಾ ಮುಖಾದ್ಧರಿರ್ವಿನಿಃ ಸೃತೋ ಜರಾಸುತಂ ।**
**ಸಮಸ್ತ ಭೂಪ ಸಂಯುತಂ ಜಿಗಾಯ ಬಾಹುನೇಶ್ವರಃ ॥೧೩೭॥**

ಅನಂತರ ಶ್ರೀಕೃಷ್ಣನು ಆ ಗುಹೆಯಿಂದ ಹೊರಬಂದು, ಸಮಸ್ತ ರಾಜರಿಂದ ಕೂಡಿದ ಜರಾಸಂಧನೊಡನೆ ಯುದ್ಧ ಮಾಡಿ ತನ್ನ ಬಾಹುಬಲದಿಂದ ಅವನನ್ನು ಗೆದ್ದನು.

**ತಲೇನ ಮುಷ್ಟಿ ಭಿಸ್ತಥಾ ಮಹೀರುಹೈಶ್ಚ ಚೂರ್ಣಿತಾಃ ।**
**ನಿ ಪೇತುರಸ್ಯ ಸೈನಿಕಾಃ ಸ್ವಯಂ ಚ ಮೂರ್ಛಿತೋಽಪತತ್ ॥೧೩೮॥**

ಶ್ರೀಕೃಷ್ಣನ ಕೈಗಳ ಮುಷ್ಟಿ ಪೆಟ್ಟು, ಕಾಲುಗಳವದೆತ, ಗಿಡಗಳಿಂದ ಹೊಡೆದ ಪೆಟ್ಟು ಇವುಗಳಿಂದ ಜರಾಸಂಧನ ಸೈನ್ಯವೆಲ್ಲ ನಿಸ್ತೇಜವಾಗಿಬಿದ್ದಿತು. ಕೊನೆಗೆ ಜರಾಸಂಧನೂ ಮೂರ್ಛಿತನಾದನು.

**ಜ ಸಾಲ್ವ, ಪೌಂಡ್ರ ಚೇದಿ ಪಾನ್ನಿಪಾತ್ಯ ಸರ್ವಭೂಭುಜಃ ।**
**ಸ ಪ್ರಪ್ಲುವೇ ಜನಾರ್ದನಃ ಕ್ಷಣೇನ ತಾಂ ಕುಶಸ್ಥಲೀಂ ॥೧೩೯॥**

ಶ್ರೀಕೃಷ್ಣನು ಸಾಲ್ವ, ಪೌಂಡ್ರಕ ಮತ್ತು ಚೇದಿ ರಾಜನ್ನು ತನ್ನ ಭೂಭುಜ ಬಲದಿಂದ ಕೆಡವಿ; ತನ್ನಿಂದ ನಿರ್ಮಿತವಾದ ದ್ವಾರಕಾ ಪಟ್ಟಣಕ್ಕೆ ಕೂಡಲೇ ಬಂದನು.

**ಸ ಸಂಜ್ಞಕಾಃ ಸಮುತ್ಥಿತಾಸ್ತತೋ ನೃಪಾಃ ಪುನರ್ಯಯುಃ ।**
**ಜಿಗೀಷಮೋಽಥ ರುಕ್ಮಿಣೀಂ ವಿಧಾಯ ಚೇದಿಪೇ ಹರಿಂ ॥೧೪೦॥**

ಶ್ರೀಕೃಷ್ಣನು ಹೋದಮೇಲೆ ಎಲ್ಲ ರಾಜರು ಎಚ್ಚರಗೊಂಡವರಾಗಿ ಮತ್ತೆ ಒಂದೆಡೆ ಸೇರಿದರು. ಮೊದಲು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಿಸಬೇಕು. ನಂತರ ಈ ಅಪಮಾನದ ಸೇಡನ್ನು ಕೃಷ್ಣನೊಂದಿಗೆ ತೀರಿಸಬೇಕು ಎಂದು ನಿಶ್ಚಯಿಸಿಕೊಂಡರು.

**ಸಮಸ್ತ ರಾಜಮಂಡಲೇ ವಿನಿಶ್ಚಯಾದುಪಾಗತೇ ।**
**ಸ ಭೀಷ್ಮಕೇ ಚ ರುಕ್ಮಿಣೀಂ ಪ್ರದಾತು ಮುದ್ಯತೇ ಮುದಾ ॥೧೪೧॥**

**ಸಮಸ್ತ ಲೋಕ ಯೋಷಿ ತಾಂ ವರಾ ವಿದರ್ಭನಂದನಾ ।**
**ದ್ವಿಜೋತ್ತಮಂ ಹರೇ ಪದೋಃ ಸಕಾಶಮಾಶ್ವಯಾ ಪಯೆತ್ ॥೧೪೨॥**

ಸಮಸ್ತ ರಾಜರೆಲ್ಲರೂ ಕೂಡಿ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಿಸಬೇಕೆಂದು ನಿಶ್ಚಯಿಸಿಕೊಂಡು ಬಂದುದನ್ನು ಕಂಡು, ಭೀಷ್ಮಕ ಮತ್ತು ಇತರ ರಾಜರು ಕೂಡ, ವಿದರ್ಭ ರಾಜನ ಕುವರಿ, ಅತಿ ಸುಂದರಿಯಾದ ರುಕ್ಮಿಣಿಯನ್ನು ಕೊಡಲು ಸಿದ್ಧರಾದರು. ನಿಶ್ಚಯಿಸುವ ಸಮಯದಲ್ಲಿ ಆ ವಿದರ್ಭನಂದನೆಯು, ಒಬ್ಬ ದ್ವಿಜೋತ್ತಮನನ್ನು ಕರೆದು (ಒಂದು ಪತ್ರ ಬರೆದು) ಶ್ರೀಕೃಷ್ಣನ ಚರಣ ಸನ್ನಿಧಿಗೆ, ಕಳಿಸಿದಳು.

**ನಿಶಮ್ಯ ತದ್ವಿಜೋ ಹರಿಃ ಕ್ಷಣಾನ್ವಿ ದರ್ಭಕಾಸಗಾತ್ ।**
**ತಮನ್ವಯೊದ್ಧಲಾಯುಧಃ ಸಮಸ್ತ ಯಾದವೈಃ ಸಹ ॥೧೪೩॥**

ಶ್ರೀಕೃಷ್ಣನು ಆ ವಿಪ್ರನ ಮಾತನ್ನು ಕೇಳಿದ ಕೂಡಲೇ, ಕ್ಷಣ ಮಾತ್ರದಲ್ಲಿ ವಿದರ್ಭ ದೇಶಕ್ಕೆ ಹೊರಡಲು ಸಿದ್ಧನಾದನು. ಎಲ್ಲ ಯಾದವರನ್ನು ಕೂಡಿಕೊಂಡು ಬಲರಾಮನು ಕೂಡ ಶ್ರೀಕೃಷ್ಣನ ಹಿಂದೆಯೇ ನಡೆದನು.

**ವಿ. ವಿ. :** ರುಕ್ಮಿಣಿ ದೇವಿಯರ ಸೇವೆ ಸಲ್ಲಿಸಿ ಕೃತಾರ್ಥರಾದ ಆ ವಿಪ್ರರೇ ಆಕೆಯ ಅನುಗ್ರಹದಿಂದ ಮುಂದೆ ಅವರೇ ವಾದಿರಾಜರಾದರು. ಅಷ್ಟೇ ಅಲ್ಲ ಅವರು ಭಾವೀ ಸಮೀರರು ಎಂಬುದೂ ಪ್ರತೀತಿ.

**ಸಮಸ್ತ ರಾಜಮಂಡಲಂ ಪ್ರಯಾಂತಮೀಕ್ಷ್ಯ ಕೇಶವಂ ।**
**ಸುಯುತ್ತಮಾತ್ತಕಾರ್ಮುಕಂ ಬಭೂವ ಕನ್ಯಕಾವನೇ ॥೧೪೪॥**

ಎಲ್ಲ ರಾಜರ ಸಮೂಹವು ಶ್ರೀಕೃಷ್ಣನು ಬಂದದ್ದನ್ನು ನೋಡಿತು. ಕೂಡಲೇ ಕನ್ನಿಕೆಯನ್ನು ರಕ್ಷಿಸುವದಕ್ಕಾಗಿ ಸಕಲ ಬಾಣ ಬತ್ತಳಿಕೆಗಳಿಂದ, ಆ ದಂಡು ಸಿದ್ಧವಾಯಿತು.

**ಪುರಾ ಪ್ರದಾನತಃ ಸುರೇಕ್ಷಣಾಚ್ಛಲಾದ್ಬಹಿರ್ಗತಾಂ ।**
**ರಥೇ ನ್ಯವೇಶಯದ್ಧರಿಃ ಪ್ರಪಶ್ಯತಾಂ ಚ ಭೂಭೃತಾಂ ॥೧೪೫॥**

ಕನ್ಯಾ ಪ್ರದಾನ ಪೂರ್ವದಲ್ಲಿಯೇ ರುಕ್ಮಿಣೀ ದೇವಿಯವರು ಅಂಬಿಕೆಯ ದರ್ಶನಕ್ಕಾಗಿ ನಗರದ ಹೊರಭಾಗದಲ್ಲಿ ಬಂದಿದ್ದರು. ಶ್ರೀಕೃಷ್ಣನು ಎಲ್ಲ ರಾಜರು ನೋಡುತ್ತಿರುವಂತೆಯೇ ರುಕ್ಮೀಣಿಯನ್ನು ತನ್ನ ರಥದಲ್ಲಿ ಕೂಡಿಸಿಕೊಂಡನು.

**ಜರಾಸುತಾದಯೋ ರುಷಾತಮಭ್ಯಯುಃ ಶರೋತ್ತಮೈಃ ।**
**ವಿಧಾನ ತಾನ್ನಿರಾಯುಧಾನ್ ಜಗಾಮ ಕೇಶವಃ ಶನೈಃ ॥೧೪೬॥**

ಜರಾಸಂಧ ಮೊದಲ್ಗೊಂಡು ಅನೇಕ ರಾಜರು ಸಿಟ್ಟಿನಿಂದ ಮುಂದೆ ಬಂದರು. ಶ್ರೀಕೃಷ್ಣನ ಮೇಲೆ ಉತ್ತಮವಾದ ಬಾಣಗಳನ್ನು ಪ್ರಯೋಗಿಸಿದರು. ಶ್ರೀಕೃಷ್ಣನು ಜರಾಸಂಧನನ್ನು ರಥವಿಹೀನನನ್ನಾಗಿ ನಿರಾಯುಧನನ್ನಾಗಿ ಮಾಡಿ ಮೆಲ್ಲನೆ ನಡೆದನು.

**ಪುನರ್ಗೃಹೀತ ಕಾರ್ಮುಕಾನ್ ಹರಿಂ ಪ್ರಯಾತು ಮುದ್ಯಾತಾನ್ ।**
**ನ್ಯವಾರ ಯದ್ಧಲಾಯುಧೋ ಬಲಾಢ್ಯಲೋ ರ್ಜಿತಾಸ್ತ್ರಣೀಃ ॥೧೪೭॥**

ಬಲರಾಮನು ಬಿಲ್ಲು ಬತ್ತಳಿಕೆಗಳನ್ನು ತೆಗೆದುಕೊಂಡು, ಶ್ರೀಕೃಷ್ಣನಿಗೆ ಸಹಾಯಕ್ಕೆ ಬರುವಾಗ ಆತನನ್ನು ದಾರಿಯಲ್ಲಿ ತಡೆದನು.

**ತದಾ ಸಿತಃ ಶಿರೋಋಹೋ ಹರೇರ್ಹಲಾಯುಧೇ ಸ್ಥಿತಃ ।**
**ಪ್ರಕಾಶಮಾದಿ ತದ್ಬಲಂ ವಿಜೇತುಮತ್ರ ಮಾಗಧಂ ॥೧೪೮॥**

ಆಗ ಬಲರಾಮನಲ್ಲಿರತಕ್ಕ ಶುಕ್ಲಕೇಶಿ ಪರಮಾತ್ಮನ ಆವೇಶ ಪ್ರಾಪ್ತವಾಯಿತು. ಆದರಿಂದ ಬಲರಾಮನಿಗೆ (ಮಾಗಧನನ್ನು ಗೆಲ್ಲುವ) ಅತಿಶಯವಾದ ಬಲ ಪ್ರಾಪ್ತವಾಯಿತು.

**ಸ ತಸ್ಯ ಮಾಗಧೋ ರಣೇ ಗದಾಪ್ರಹಾರ ಚೂರ್ಣಿತಃ ।**
**ಪಪಾತ ಭೂತಲೇಬಲೋ ವಿಜಿತ್ಯ ತಂ ಯಯೌಪುರೀಂ ॥೧೪೯॥**

ಆ ಯುದ್ಧದಲ್ಲಿ ಬಲರಾಮನ ಗದೆಯ ಪೆಟ್ಟಿನಿಂದ ಜರಾಸಂಧನು ಚೂರ್ಣಿತನಾಗಿ ಭೂಮಿಯಲ್ಲಿ ಬಿದ್ದನು. ಬಲರಾಮನು ಅವನನ್ನು ಗೆದ್ದು ತನ್ನ ಪಟ್ಟಣಕ್ಕೆ ಬಂದನು.

**ವರೋರುವೇಷ ಸಂಯುತೋಽಥ ಚೇದಿರಾಟ್ಸಮಭ್ಯ ಯಾತ್ ।**
**ತಮಾಸಸಾದ ಸಾತ್ಯಕಿರ್ನದನ್ ಮೃಗಾಧಿಪೋ ಯಥಾ ॥೧೫೦॥**

ಮದುವೆಯ ವರನ ವೇಷದಲ್ಲಿದ್ದ ಶಿಶುಪಾಲನು ಅಲ್ಲಿಗೆ ಬಂದನು. ಆಗ ಸಾತ್ಯಕಿಯು ಸಿಂಹದಂತೆ ಗರ್ಜಿಸುತ್ತ ಅವನಿಗೆ ಎದುರಾದನು.

**ಚಿರಂ ಪ್ರಯುಧ್ಯ ತಾವುಭೌ ವರಾಸ್ತ್ರ ಶಸ್ತ್ರ ವರ್ಷಿಣೌ ।**
**ಕ್ರುಧಾ ನಿರೀಕ್ಷ್ಯ ತಸ್ಥತುಃ ಪರಸ್ಪರಂ ಸ್ಫುರತ್ತನೂ ॥೧೫೧॥**

ಅವರಿಬ್ಬರೂ ಅನೇಕ ಉತ್ತಮವಾದ ಅಸ್ತ್ರಶಸ್ತ್ರಗಳಿಂದ ಬಹು ಕಾಲದವರೆಗೆ ಹೋರಾಡಿದರು. ಪರಸ್ಪರರಲ್ಲಿ, ಒಬ್ಬರನ್ನೊಬ್ಬರು ಸಿಟ್ಟಿನಿಂದ ಮೈನಡುಕದೊಂದಿಗೆ (ಸ್ಫುರಿಸಿದ ತನುವಿನೊಂದಿಗೆ) ನೋಡಿದರು.

**ಸಮಾನ ಭಾವ ಮಕ್ಷಮೀ ಶಿನೇಃ ಸುತಾತ್ಮ ಜಃ ಶರಂ ।**
**ಅಧೋಧ್ವಬರ್ಹ ತಂ ಶರಂ ಬಲಾನ್ಮಮೋದ ವಕ್ಷಸಿ ॥೧೫೨॥**

ಸರಿಸಮಾನಾದ ಶಿಶುಪಾಲನನ್ನು ನೋಡಿ ಸಹಿಸದೆ, ಸಾತ್ಯಕಿಯು ತನ್ನ ಬಾಣ ಬತ್ತಳಿಕೆಗಳನ್ನು ಸಿದ್ಧಪಡಿಸಿದನು. ಅವೇ ಬಾಣಗಳನ್ನು ಶಿಶುಪಾಲನ ವಕ್ಷಸ್ಥಳಕ್ಕೆ ಗುರಿ ಯಿಟ್ಟು ಹೊಡೆದನು.

**ಸ ತೇನ ತಾಡಿತೋಽಪತಧ್ಭಿ ಸಂಜಕೋ ನೃಪಾತ್ಮ ಜಃ ।**
**ವಿಜಿತ್ಯ ತಂ ಸ ಸಾತ್ಯಕೀರ್ಯಯೌ ಪ್ರಹಷ್ಟ ಮಾನಸಃ ॥೧೫೩॥**

ಸಾತ್ಯಕಿಯ ಬಾಣದ ಆಘಾತದಿಂದ ಶಿಶುಪಾಲನು ಸಂಜ್ಞಹೀನನಾಗಿ ಬಿದ್ದನು. ಸಾತ್ಯಕಿಯು ಆ ರಾಜನನ್ನು ಗೆದ್ದು ಅದೇ ಸಂತೋಷದಲ್ಲಿ ತನ್ನ ಸ್ಥಾನಕ್ಕೆ ಬಂದನು.

**ಅಥಾ ಪರೇ ಚ ಯಾದವಾ ವಿಜಿತ್ಯ ತದ್ಬಲಂ ಯಯುಃ ।**
**ಪುರೈವ ರುಕ್ಮಿ ಪೂರ್ವಕಾಃ ಪ್ರಜಗ್ಮುರ ಚ್ಯುತಂ ಪ್ರತಿ ॥೧೫೪॥**

ಅನಂತರ ಯಾದವರು ಬಂದು ಶಿಶುಪಾಲನ ಸೈನ್ಯವನ್ನು ಗೆದ್ದರು. ರುಕ್ಮಿಣೀಯ ಅಣ್ಣ ರುಕ್ಮಿ, ತನ್ನವರನ್ನು ಕೂಡಿಕೊಂಡು ಶ್ರೀಕೃಷ್ಣನ ಕೂಡ ಯುದ್ಧ ಮಾಡಲು ಮೊದಲೇ ಹೊರಟಿದ್ದನು.

**ಸಹೈಕ ಲವ್ಯ ಪೂರ್ವಕೈಃ ಸಮೇತ್ಯ ಭೀಷ್ಮ ಕಾತ್ಮಜಃ ।**
**ಹರಿಂ ವವರ್ಷ ಸಾಯಕೈಃ ಸ ಸಿಂಹವನ್ನ್ಯವರ್ತತ ॥೧೫೫॥**

ಭೀಷ್ಮಕ ರಾಜನ ಮಗನಾದ ರುಕ್ಮಿಯು, ಏಕಲವ್ಯ ಮೊದಲಾದವರನ್ನು ಕೂಡಿಕೊಂಡು ಶ್ರೀಕೃಷ್ಣನ ಮೇಲೆ ಬಾಣಗಳ ಮಳೆಯನ್ನೇ ಕರೆದರು. ಆದರೆ ಶ್ರೀಕೃಷ್ಣನು ಅವರಿಗೆ ಸಿಂಹದಂತೆ ಗರ್ಜಿಸಿ ಹಿಂದಿರುಗಿನಿಂತನು.

**ಅಕ್ಷೌಹಿಣೀತ್ರಯಂ ಹರಿಸ್ತದಾ ನಿಹತ್ಯಸಾಯಕೈಃ ।**
**ಅವಾಹನಾಯುಧಂ ವ್ಯಧಾನ್ನಿಷಾದಪಂ ಶರೈ ಕ್ಷಣಾತ್ ॥೧೫೬॥**

ಶ್ರೀಕೃಷ್ಣನು ಮೂರು ಅಕ್ಷೌಹಿಣೀ ಸೈನ್ಯವನ್ನು ತನ್ನ ಬಾಣಗಳಿಂದ ಸಂಹರಿಸಿ ಕ್ಷಣಾರ್ಧದಲ್ಲಿ ಆ ಏಕಲವ್ಯನಿಗೆ ವಾಹನ, ಆಯುಧ, ಬಾಣ ಇತ್ಯಾದಿಗಳು ಯಾವವೂ ಇಲ್ಲದಂತೆ ಮಾಡಿದನು.

**ಶರಂ ಶರೀರನಾಶಕಂ ಸಮಾದ ದಾನಮೀಶ್ವರಂ ।**
**ಸ ಏಕಲವ್ಯ ಆಶು ತಂ ವಿಹಾಯ ದುದ್ರುವೇ ಭಯಾತ್ ॥೧೫೭॥**

ಶರೀರವನ್ನು ನಾಶಮಾಡತಕ್ಕ ಕ್ರೂರವಾದ ಶರಗಳನ್ನು ಶ್ರೀಕೃಷ್ಣನು ಪ್ರಯೋಗಿಸಿದಾಗ, ಆ ಏಕಲವ್ಯನು ಭಯದಿಂದ ಓಡಿಹೋದನು.

**ಧನುರ್ಭೃತಾಂ ವರೇಗತೇ ರಣಂ ವಿದಾಯ ಭೂಭೃತಃ ।**
**ಕರೂಶ ರಾಜ ಪೂರ್ವಕಾಃ ಕ್ಷಣಾತ್ಪ್ರದುದ್ರುವು ರ್ಭಯಾತೋ ॥೧೫೮॥**

ಧನುರ್ವಿದ್ಯೆಯಲ್ಲಿ ಶ್ರೇಷ್ಠನಾದ ಏಕಲವ್ಯನೇ ಓಡುತ್ತಿರುವದನ್ನು ಕಂಡು, ದಂತವಕ್ರ ಮೊದಲಾದವರೆಲ್ಲರೂ ಭಯದಿಂದ ಪಲಾಯನ ಮಾಡಿದರು.

**ಅಥಾ ಸಸಾದ ಕೇಶವಂ ರುಷಾ ಸ ಭೀಷ್ಮ ಕಾತ್ಮಜಃ ।**
**ಶರಾಂಬುಧಾರ ಆಶುತಂ ವಿವಾಹನಂ ವ್ಯಧಾದ್ಧರಿಃ ॥೧೫೯॥**

ಭೀಷ್ಮಕ ರಾಜನ ಮಗನಾದ ರುಕ್ಮಿಯು ಸಿಟ್ಟಿನಿಂದ ಬಂದು ಶ್ರೀಕೃಷ್ಣನ ಮೇಲೆ ಶರಾಂಬುಗಳ ಧಾರೆಯನ್ನೇ ಸುರಿಸಿದನು. ಶ್ರೀಕೃಷ್ಣನು ಆ ರುಕ್ಮಿಯನ್ನು ವಿರಥನನ್ನಾಗಿ ಮಾಡಿದನು.

**ಚಕರ್ತ ಕಾರ್ಮುಕಂ ಪುನಃ ಸ ಖಡ್ಗ ಚರ್ಮಭೃದ್ಧರೇಃ ।**
**ರಥಂ ಸಮಾರುಹಚ್ಛರೈಶ್ಚಕರ್ತ ಖಡ್ಗಮೀಶ್ವರಃ ॥೧೬೦॥**

ಶ್ರೀಕೃಷ್ಣನು ರುಕ್ಮಿಯ ಬಾಣಗಳನ್ನು ಪುನಃ ಕತ್ತರಿಸಿದನು. ಆದರೂ ರುಕ್ಮಿ ಖಡ್ಗ – ಚರ್ಮಗಳನ್ನು ಧರಿಸಿ ಶ್ರೀಹರಿಯ ರಥವನ್ನೇ ಏರಿದನು. ಶ್ರೀಕೃಷ್ಣನು ಆ ಖಡ್ಗ– ಚರ್ಮಗಳನ್ನು ಖಂಡಿಸಿದನು.

**ಶರೈರ್ವಿತಸ್ತಿ ಮಾತ್ರಕೈರ್ವಿಧಾಯ ತಂ ನಿರಾಯುಧಂ ।**
**ಪ್ರಿಯೋವಚಃ ಪ್ರಪಾಲಯನ್ ಜಘಾನ ನೈನ ಮೀಶ್ವರಃ ॥೧೬೧॥**

ಕೇವಲ ಕೆಲವೇ ಬಾಣಗಳಿಂದ ಶ್ರೀಕೃಷ್ಣನು ರುಕ್ಮಿಯನ್ನು ನಿರಾಯುಧನನ್ನಾಗಿ ಮಾಡಿದನು. ತನ್ನ ಪ್ರಿಯಳಾದ ರುಕ್ಮಿಣಿಯ ಮಾತನ್ನು ಪಾಲಿಸುವದಕ್ಕಾಗಿ ಶ್ರೀಕೃಷ್ಣನು ಅವನನ್ನು ಕೊಲ್ಲಲಿಲ್ಲ. (ಎಷ್ಟಾದರೂ ರುಕ್ಮಿಯು ರುಕ್ಮಿಣಿಯ ಅಣ್ಣನಲ್ಲವೇ?)

**ನಿಬಧ್ಯ ಪಂಚ ಚೂಡಿನಂ ವಿಧಾಯತಂ ವ್ಯಸರ್ಜಯತ್ ।**
**ಜಗಜ್ಜನಿತ್ರಯೋರಿದಂ ವಿಡಂಬನಂ ರಮೇಶಯೋಃ ॥೧೬೨॥**

ಶ್ರೀಕೃಷ್ಣನು, ರುಕ್ಮಿಗೆ ಅಲ್ಲಲ್ಲಿ ಐದು ಜುಟ್ಟುಗಳನ್ನಿಟ್ಟು (ಅಂದರೆ ಅರ್ಧಮರ್ಧ ಹಜಾಮತಿ ಮಾಡಿ) ಕಳಿಸಿಕೊಟ್ಟನು. ಇದರಲ್ಲಿ ರುಕ್ಮಿಣಿ ಶ್ರೀಕೃಷ್ಣರ ಸಂವಾದವು ಕೇವಲ ವಿಡಂಬನೆಯಿಂದೇ ತಿಳಿಯಬೇಕು. ಏಕೆಂದರೆ ಅವರು ಜಗತ್ತಿಗೆ ತಂದೆ–ತಾಯಿಗಳು, ಸರ್ವಜ್ಞರು.

**ವಿ. ವಿ. :** ಮನಬಂದಂತೆ ತಲೆ ಬೋಳಿಸಿ ಬಿಡುವುದೆಂದರೆ, ಮಾನವನನ್ನು ಕೊಂದಂತೆಯೇ ಸೈ. ಬಲ್ಲವರಿಗೆ ಮಾತ್ರ.

**ಸದೈಕ ಮಾನಸಾವಪಿ ಸ್ವಧರ್ಮಶಾಸಕೌ ನೃಣಾಂ ।**
**ರಮಾಹರಿಶ್ಚ ತತ್ರ ತೌ ವಿಜಹ್ರ ತುಶ್ಚರುಕ್ಮಿಣಾ ॥೧೬೩॥**

ಶ್ರೀಕೃಷ್ಣ ಮತ್ತು ರುಕ್ಮೀಣಿ, ಯಾವಾಗಲೂ ಒಂದೇ ವಿಚಾರದವರು. ಅವಿರುದ್ಧ ವಾದ ಮನವುಳ್ಳವರು. ಆದರೂ ಮಾನವರಾದವರು ಸ್ವಧರ್ಮ ಅಂದರೆ ಗೃಹಸ್ಥಾಶ್ರಮ ಧರ್ಮವನ್ನು ಹೇಗೆ ಪಾಲಿಸಬೇಕು ಎಂಬುದನ್ನು ಜಗತ್ತಿಗೆ ತಿಳಿಸುವುದಕ್ಕಾಗಿ ಹಾಗೆ ವರ್ತಿಸಿದರು. ಇದೊಂದು ಕ್ರೀಡೆ ಮಾತ್ರ.

**ಅಥಾ ಸಸಾದ ಸೌಭರಾಟ್ ಹರಿಂ ಶರಾಂಬುವರ್ಷಣಃ ।**
**ಹರಿಃ ಶರಂ ಯಮೋಪಮಂ ಮುಮೋಚ ತಸ್ಯ ವ ಕ್ಷಸಿ ॥೧೬೪॥**

ನಂತರ ಸಾಲ್ವನು ಶ್ರೀಹರಿಯೊಂದಿಗೆ ಯುದ್ಧ ಮಾಡಲು ಬಂದು ಬಾಣಗಳ ಮಳೆಗರೆದನು. ಶ್ರೀಹರಿಯು ಯಮಗೆ ಸಮಾನವಾದ ಘೋರ ಬಾಣಗಳನ್ನು ಅವನ ವಕ್ಷ ಸ್ಥಳಗಳಲ್ಲಿ ಬಿಟ್ಟನು.

**ಶರೇಣ ತೇನ ಪೀಡಿತಃ ಪಪಾತ ಮಂದ ಚೇಷ್ಟಿತಃ ।**
**ಚಿರಾತ್ಸ ಸಂಜ್ಞಕೋಽಮ ತ್ರಿನೇತ್ರ ತೋಷಣೇಚ್ಛಯೋ ॥೧೬೫॥**

ಆ ಬಾಣಗಳಿಂದ ಪೀಡಿತನಾದ ಸಾಲ್ವನು ಮಂದ ಚೇಷ್ಟಿತನಾಗಿ, ಬಹಳ ಹೊತ್ತಿನ ವರೆಗೆ ಮೂರ್ಛೆಯಿಂದಲೇ ಭೂಮಿಯಲ್ಲಿ ಬಿದ್ದನು. ನಂತರ ನಿಧಾನವಾಗಿ

ಎದ್ದು, ರುದ್ರದೇವರನ್ನು ಒಲಿಸಿಕೊಳ್ಳುವ ಇಚ್ಛೆಯಿಂದ ಪುನಃ ಅರಣ್ಯಕ್ಕೆ ಅಡವಿಗೆ ನಡೆದನು.

**ಸಮಸ್ತ ರಾಜಸನ್ನಿಧೌ ವಯಾದವೀಂ ಮಹೀಮಿಮಾಂ ।**
**ಕರಿಷ್ಯ ಇತ್ಯುದೀರ್ಯ ಸೋ ವ್ಯಧಾತ್ತ ಘೋಽತಿ ದುಶ್ಚರಂ ॥೧೬೬॥**

"ನಾನು ಈ ಭೂಮಿಯ ಮೇಲೆ ಯಾದವರನ್ನು ಇಲ್ಲದಂತೆ ಮಾಡುತ್ತೇನೆ" ಎಂದು ಆ ಸಾಲ್ವನು ಸಮಸ್ತ ರಾಜರ ಎದುರಿನಲ್ಲಿ ಪ್ರತಿಜ್ಞೆಯನ್ನು ಮಾಡಿದನು.

**ಅಥೋ ವಿವೇಶ ಕೇಶವಃ ಪುರೀಂ ಕುಶಸ್ಥಲೀಂ ಪ್ರಭುಃ ।**
**ಪ್ರಿಯೋಯುತೋಽಬ್ಜ ಜಾದಿಭಿಃ ಸಮೀಡಿತಃ ಸುರೇಶ್ವರೈಃ ॥೧೬೭॥**

ಆಗ ಕೇಶವನು ತನ್ನ ಪ್ರೀತಿಯ ಹೆಂಡತಿಯನ್ನು ಕರೆದುಕೊಂಡು ದ್ವಾರಕಾ ಪಟ್ಟಣಕ್ಕೆ ಬಂದನು. ಬ್ರಹ್ಮನೇ ಮೊದಲಾದ ದೇವತೆಗಳು ಅವರನ್ನು ಸ್ತುತಿಸಿದರು.

**ಪುರಾ ತತೋ ಹಲಾಯುಧಃ ಪ್ರಿಯೊಂ ನಿಜಾಂ ಪುರಾಪಿ ಹಿ ।**
**ಸ ವಾರುಣೀ ಸಮಾಹ್ವಯೊಮುವಾಸ ರೇವತೀಂ ಪ್ರಭುಃ ॥೧೬೮॥**

ಅದಕ್ಕೂ ಮೊದಲೇ ಬಲರಾಮನು ರೇವತಿಯಾದ ತನ್ನ ಹೆಂಡತಿಯನ್ನು ಕರೆದು ತಂದಿದ್ದನು. ಆ ರೇವತಿಯೇ ಮೂಲರೂಪದಲ್ಲಿ ವಾರುಣಿ, ಶೇಷನಿಗೆ ಹೆಂಡತಿ.

**ಪತಿಂ ಯಥಾನುರೂಪಿಣಂ ತದೀಯಮೇವ ಪೂರ್ವಕಂ ।**
**ಪಿತಾ ತದೀಯ ಐಚ್ಛತ ಪ್ರವೇತುಮಬ್ಜ ಸಂಭವಾತ್ ॥೧೬೯॥**

ರೇವತಿಯ ತಂದೆ (ಕಕುದ್ಮಿ) ಯು, ರೇವತಿಗೆ ತಕ್ಕ ವರನು ಯಾರು? ಎಂದು ತಿಳಿಯಲು ಇಚ್ಛೆಯುಳ್ಳವನಾಗಿ ಬ್ರಹ್ಮನ ಹತ್ತಿರ ಬಂದನು.

**ಸ ತತ್ಸದೋ ಗತೋ ಪರಾತ್ತದೀಯತಃ ಪ್ರಗೀತಿ ಕಾಂ ।**
**ನಿಶಮ್ಯ ನಾವಿದದ್ಗತಂ ಯುಗೋರುಕಾಲ ಪರ್ಯಯಂ ॥೧೭೦॥**

ಆಗ ಬ್ರಹ್ಮನ ಸಭೆಯಲ್ಲಿ ಗಾಯನ ನಡೆದಿತ್ತು. ರೇವತಿಯ ತಂದೆಯು ಅದನ್ನು ಕೇಳುತ್ತ ತಲೆಯನ್ನು ತಗ್ಗಿಸಿ ತದೇಕ ಚಿತ್ತದಿಂದ ಕುಳಿತೇಬಿಟ್ಟನು. ಅದರಲ್ಲಿ ಯುಗಗಳೇ ಉರುಳಿ ಹೋಗಿದ್ದವು.

**ನರಾನಯೋಗ್ಯ ಗೀತಿಕಾ ವಿಮೋಹಯೇತ್ತತೋಽನ್ಯಪಃ ।**
**ಸ ಮೂಢಬುದ್ಧಿ ರಂತತೋಽಲ್ಪ ಕಾಲ ಇತ್ಯಮನ್ಯತೆ ॥೧೭೧॥**

ಆ ಬ್ರಹ್ಮನ ಸಭೆಯಲ್ಲಿ ನಡೆದ ಗಾನ, ಮಾನವನಿಗೆ ಕೇಳಲು ಅಯೋಗ್ಯ ವಾಗಿತ್ತು. ಅಂದರೆ ಅಷ್ಟು ಅದ್ಭುತ ಮತ್ತು ಮೋಹಕವಾಗಿತ್ತು. ಆ ಮೂಢ ಬುದ್ಧಿಯುಳ್ಳ ರೇವತನು ಅದನ್ನು ಕೇಳುತ್ತ ಮಗ್ನನಾಗಿ ಸ್ವಲ್ಪವೇ ಕಾಲವು ಗತಿಸಿತು ಎಂದು ತಿಳಿದನು.

**ಸ ಮೂರ್ಛಿತಃ ಪ್ರಬೋಧಿತೋ ಅಜ್ಜಜೇನ ತಂ ತ್ವಪೃಚ್ಛತ ।**
**ಸುತಾಪತಿಂ ಬಲಂ ಚ ಸೋsಬ್ರವೀ ದ್ಯುಗಾತ್ಯಯೇಬಹೌ ॥೧೭೨॥**

ಆ ರೈವತನು ಬಹಳ ಹೊತ್ತಿನ ವರೆಗೆ ಸುಪ್ತವಾಗಿರುವುದನ್ನು ಕಂಡು ಬ್ರಹ್ಮನು ಅವನನ್ನು ಎಚ್ಚರಿಸಿದನು. ಎಚ್ಚರದ ನಂತರ ರೈವತನು ತನ್ನ ಮಗಳಿಗೆ ವರನಾರು ಎಂದು ಕೇಳಿದಾಗ, ಬಲರಾಮನು ಎಂದು ಉತ್ತರ ದೊರೆಯಿತು.

**ಸ ರೈವತೋ ಬಲಾಯ ತಾಂ ಪ್ರದಾಯ ಗಂಧ ಮಾದನಂ ।**
**ಗತೋsತ್ರ ಚೀರ್ಣಸತ್ತಪಾ ಅವಾಪ ಕೇಶವಾಂತಿಕಂ ॥೧೭೩॥**

ಆ ರೈವತನು ತನ್ನ ಮಗಳನ್ನು ಬಲರಾಮನಿಗೆ ಕೊಟ್ಟು ಮದುವೆ ಮಾಡಿ, ನಂತರ ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿ ಬಹು ಕಾಲದ ವರೆಗೆ ತಪವನ್ನಾಚರಿಸಿ, ಶರೀರವನ್ನು ತ್ಯಜಿಸಿ, ಕೇಶವನ ಹತ್ತಿರ ಅಂದರೆ ವೈಕುಂಠಕ್ಕೆ ಹೋದನು.

**ಬಲೋsಪಿ ತಾಂ ಪುರಾತನ ಪ್ರಮಾಣ ಸಮ್ಮಿತಾಂ ಪ್ರಭುಃ ।**
**ಹಲೇನ ಚಾತ್ಮನಾ ಸಮಾಂ ಚಕಾರ ಸತ್ಯವಾಂಛಿತಃ ॥೧೭೪॥**

ಯುಗ ಧರ್ಮಕ್ಕನುಸರಿ ಬಲರಾಮ ಮತ್ತು ರೇವತಿಯರ ಶರೀರಗಳ ಗಾತ್ರದಲ್ಲಿ ಬಹಳಷ್ಟು ವ್ಯತ್ಯಾಸವಾಗಿತ್ತು. ಅಂದರೆ ಬಲರಾಮನು ಕುಳ್ಳ (ಗಿಡ್ಡ)ನಾಗಿದ್ದ. ರೇವತಿಯು ಬಹಳ ಎತ್ತರವಾಗಿದ್ದಳು. ಕಾರಣ ತನ್ನ ಹಲದಿಂದ ಬಾಗಿಸಿ ರೇವತಿಯ ಶರೀರದ ಗಾತ್ರವನ್ನು ಕಿರಿದನ್ನಾಗಿ ಮಾಡಿ ತನಗೆ ಸಮ ಮಾಡಿಕೊಂಡನು.

**ತಯಾ ರತಸ್ಸುತಾವು ಭೌ ಶತೋಲ್ಮುಕಾಭಿಧಾವಧಾತ್ ।**
**ಪುರಾರ್ಯಮಾಂ ಶಕೌಸುರಾವುದಾರ ಚೇಷ್ಟಿತೋ ಬಲಃ ॥೧೭೫॥**

ಆ ಬಲರಾಮ ಮತ್ತು ರೇವತಿ ದಂಪತಿಗಳಲ್ಲಿ, 'ಶತ ಮತ್ತು ಉಲ್ಮುಕ' ಎಂಬ ಇಬ್ಬರು ಮಕ್ಕಳಾದರು. ಅವರಲ್ಲಿ ಆರ್ಯಮಾ ಎಂಬ ದೇವತೆಗಳ ಅಂಶವಿದ್ದಿತು.

**ಜನಾರ್ದನಶ್ಚ ರುಕ್ಮಿಣೀ ಕರಂ ಶುಭೇ ದಿನೇsಗ್ರಹೀತ್ ।**
**ಮಹೋತ್ಸವಸ್ತದಾಭವತ್ ಕುಶಸ್ಥಲೀ ನಿವಾಸಿನಾಂ ॥೧೭೬॥**

ತದನಂತರ ಶ್ರೀಕೃಷ್ಣನು ಒಂದು ಶುಭ ಮುಹೂರ್ತದಲ್ಲಿ ರುಕ್ಮಿಣೀ ದೇವಿಯವರ ಪಾಣಿಗ್ರಹಣವನ್ನು ಮಾಡಿಕೊಂಡನು. ಈ ವಿವಾಹ ಮಹೋತ್ಸವವು ದ್ವಾರಕಾಪುರದ ಎಲ್ಲ ನಿವಾಸಿಗಳಿಗೆ ಆನಂದವನ್ನು ಕೊಟ್ಟಿತು.

**ವಿ. ವಿ. :** ಶ್ರೀ ಶ್ರೀ ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ ಈ ವಿವಾಹವನ್ನು ಬಹಳ ಸುಂದರವಾಗಿ ವರ್ಣಿಸಿದ್ದಾರೆ. ಆ ಪುರಜನರಲ್ಲಿಯೇ ಕೆಲವರು ವಧುವಿನ ಕಡೆಗೆ ಆದರೆ, ಇನ್ನು ಕೆಲವರು ವರನ ಪರ. ಇವರು ತಮ್ಮ ಕನ್ಯೆ ಮತ್ತು ವರಗಳ ಗುಣಗಳನ್ನು ವರ್ಣಿಸುತ್ತಿರುವರು. ಅದರಲ್ಲಿ ಲಕ್ಷ್ಮೀ ನಾರಾಯಣರ ಅನೇಕ ಗುಣಗಳು ಬಹು ಚಮತ್ಕಾರಿಕವಾಗಿ ಅಳವಡಿಸಿದ್ದಾರೆ – ಅದನ್ನು ಓದಿಯೇ ಆನಂದಿಸಬೇಕು.

**ಚತುರ್ಮುಖೇನಪೂರ್ವಕಾಃ ಸುರಾವಿಯತ್ಯವಸ್ಥಿತಾಃ ।**
**ಪ್ರತುಷ್ಟುವು ಜನಾರ್ದನಂ ರಮಾಸಮೇತಮವ್ಯಯಂ ॥೧೭೭॥**

ಬ್ರಹ್ಮ ರುದ್ರಾದಿ ದೇವತೆಗಳು ಆಕಾಶದಲ್ಲಿಯೇ ನಿಂತು ರಮಾಸಮೇತನಾಗಿ ನಿಂತಿರುವ, ಅವ್ಯಯನಾದ ಜನಾರ್ದನನನ್ನು ಕಂಡು ಬಹುವಾಗಿ ಸಂತುಷ್ಟರಾಗಿ ಸ್ತೋತ್ರ ಮಾಡಿದರು. ಅಲ್ಲದೆ,

**ಮುನಿಂದ್ರ ದೇವಗಾಯಕಾದಯೋಽಪಿ ಯಾದವೈಃ ಸಹ ।**
**ವಿಚೇರುರುತ್ತಮೋತ್ಸವೇ ರಮಾರಮೇಶಯೋರಿಹಿ ॥೧೭೮॥**

ಅನೇಕ ಮುನಿಶ್ರೇಷ್ಠರು, ದೇವಗಾಯಕರು (ಗಂಧರ್ವರು) ಮೊದಲಾದವರು ಯಾದವರೊಡನೆ ಸೇರಿ, ರಮಾರಮೇಶರ ಮದುವೆಯ ಮಹೋತ್ಸವದಲ್ಲಿ ಪಾಲ್ಗೊಂಡು ಓಡಾಡಿ ಆನಂದಿಸಿದರು.

**ಸುರಾಂಶಕಾಶ್ಚ ಯೇ ನೃಪಾಃ ಸಮಾಹುತಾ ಮಹೋತ್ಸವೇ ।**
**ಸ ಪಾಂಡವಾಃ ಸಮೂಯಯುರ್ಹರಿಂ ರಮಾಸಮಾಯುತಂ ॥೧೭೯॥**

ದೇವಾಂಶ ಸಂಭೂತ ರಾಜರೆಲ್ಲರೂ (ಅಂಗಭೂತರಾಗಿ ಹುಟ್ಟಿದವರು) ಈ ಮಹೋತ್ಸವದಲ್ಲಿ ಆಹ್ವಾನಿತರಾಗಿದ್ದರು. ಅವರೆಲ್ಲರೂ ಪಾಂಡವರಿಂದ ಕೂಡಿಕೊಂಡು ರಮೆಯ ಸಹಿತನಾದ ಶ್ರೀಹರಿಯನ್ನು ಕಂಡು ಭಕ್ತಿಯಿಂದ ಪುಲಕಿತರಾದರು.

**ಸಮಸ್ತ ಲೋಕಸುಂದರೌ ಯುತೌ ರಮಾರಮೇಶ್ವರೌ ।**
**ಸಮೀಕ್ಷ್ಯ ಮೋದ ಮಾಯಯುಃ ಸಮಸ್ತ ಲೋಕ ಸಜ್ಜನಾಃ ॥೧೮೦॥**

ರಮಾ ರಮೇಶರು ಸಕಲ ಲೋಕಗಳಲ್ಲಿ ಸುಂದರರು. ಅವಿಯುಕ್ತರು. ಅಂತಹ ಲಕ್ಷ್ಮೀ ನಾರಾಯಣರನ್ನು ಕಂಡು ಸಕಲ ಸಜ್ಜನರು ಮುದದಿಂದ ತುಂದಿಲರಾದರು.

**ತಯೊ ರಮನ್ ಜನಾರ್ದನೋ ವಿಯೋಗಶೂನ್ಯಯೊ ಸದಾ ।**
**ಅಧತ್ತ ಪುತ್ರ ಮುತ್ತಮಂ ಮನೋಭವಂ ಪುರಾತನಂ ॥೧೮೧॥**

ಆ ದಂಪತಿಗಳು ಯಾವಾಗಲೂ ವಿಯೋಗ ಇಲ್ಲದವರು. ಜನಾರ್ದನನು ರಮಾದೇವಿಯರಲ್ಲಿ ರಮಿಸಿ, ಪೂರ್ವದಲ್ಲಿಯೇ ಮಗನಾದ ಮನ್ಮಥನ ಅವತಾರ ಉತ್ತಮ ಪುತ್ರನನ್ನು ಪಡೆದನು (ಅವನೇ ಪ್ರದ್ಯುಮ್ನನು).

**ಚತುಸ್ತನೋರ್ಹರೇಃ ಪ್ರಭೋಸ್ತೃತೀಯ ರೂಪಸಂಯುತಃ ।**
**ತತಸ್ತ ದಾಖ್ಯ ಯೋಽಭವತಾಸ ರುಕ್ಮಿಣೀ ಸುತೋ ಬಲೀ ॥೧೮೨॥**

ನಾರಾಯಣನಿಗೆ ಮೂಲದಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ, ಇವು ನಾಲ್ಕು. ಈ ಮಗನು ಮೂರನೆಯ ರೂಪ, ಪ್ರದ್ಯುಮ್ನನನ್ನು ಕೂಡಿದ್ದಾನೆ. ಈಗ ರುಕ್ಮಿಣೀ ಸುತನು. ಆದಕಾರಣ ಪ್ರಖ್ಯಾತನು ಮತ್ತು ಬಲಶಾಲಿಯೂ ಆಗಿದ್ದಾನೆ.

**ಪುರೈವ ಮೃತ್ಯವೈವದತ್ತ ಮೇವ ಶಂಬರಸ್ಯಹ ।**
**ಪ್ರಜಾತಮಬ್ಜ ಜಾಂಕಜಸ್ತವಾಂತ ಕೋಽಯಮಿತ್ಯಪಿ ॥೧೮೩॥**

ಬ್ರಹ್ಮನ ತೊಡೆಯಿಂದ ಹುಟ್ಟಿದ ನಾರದರು, ಪ್ರದ್ಯುಮ್ನನು ಹುಟ್ಟುವ ಪೂರ್ವದಲ್ಲಿಯೇ, ಶ್ರೀಕೃಷ್ಣ–ರುಕ್ಮಿಣೀಯಲ್ಲಿ ಹುಟ್ಟಿದ ಮಗುವೇ ನಿನಗೆ ಹೇ ಶಂಬರ ಮೃತ್ಯುವಾಗುತ್ತದೆಂದು ಹೇಳಿದ್ದರು. ಹುಟ್ಟಿದ ಮೇಲೂ ಈ ಸಮಾಚಾರವನ್ನು ತಿಳಿಸಿದರು.

**ಸ ಮಾಯಯಾ ಹರೇಃ ಸುತಂ ಪ್ರಗೃಹ್ಯ ಸೂತಿಕಾಗೃಹಾತ್ ।**
**ಅವಾಕ್ಷಿ ಪನ್ಮಹೋದಧಾ ವು ಪೇಕ್ಷಿರೋಽರಿ ಪಾಣಿನಾ ॥೧೮೪॥**

ತಾನು ಮೃತ್ಯುವಿನಿಂದ ಪಾರಾಗಬೇಕೆಂದು, ಆಶಂಬರಾಸುರನು ತನ್ನ ಮಾಯೆಯಿಂದ ಆ ಕೂಸನ್ನು ಸೂತಿಕಾಗ್ರಹದಿಂದಲೇ ಎತ್ತಿಕೊಂಡು ಹೋದನು. ಸಮುದ್ರದಲ್ಲಿ ಬಗೆದನು. ಚಕ್ರಪಾಣಿಯಾದ ಶ್ರೀಹರಿ ಇದನ್ನು ಅರಿತೂ ಅರಿಯದಿಂತಿದ್ದು, ಅರಿಯಾದ ಶಂಬರಾಸುರವನ್ನು ಉಪೇಕ್ಷಿಸಿದನು.

**ತಮಗ್ರಸಜ್ಜಲೇ ಚರಃ ಸದಾಶಹಸ್ತ ಮಾಗತಃ ।**
**ಕುಮಾರಮಸ್ಯ ತೂದರೇ ನಿರೀಕ್ಷ್ಯ ಶಂಬರೇ ದದುಃ ॥೧೮೫॥**

ಆ ಮಗುವನ್ನು ಒಂದು ಮೀನು ನುಂಗಿತು. ಆ ಮೀನ ಮೀನುಗಾರನ (ಬೆಸ್ತರವನ) ಕೈಯಲ್ಲಿ ಬಂದಿತು. ಅವನು (ಅದನ್ನು ಸೀಳಿದಾಗ) ಅದರಲ್ಲಿ ಕೂಸನ್ನು ಕಂಡನು. ಮೀನುಗಾರನು ಆ ಕೂಸನ್ನು ಶಂಬರಾಸುರನಿಗೆ ಒಪ್ಪಿಸಿದನು.

**ವಿಪಾಟ್ಯ ಮತ್ಸ್ಯ ಕೋದರಂ ಸ ಶಂಬರಃ ಕುಮಾರಕಂ ।**
**ನ್ಯವೇದ್ಯಯನ್ಮ ನೋಭವಪ್ರಿಯಾಕರೇ ಸುರೂಪಿಣಂ ॥೧೮೬॥**

ಆ ಶಂಬರಾಸುರನು ಮತ್ಸ್ಯವನ್ನು ಸೀಳಿದನು. ಅದರಲ್ಲಿ ಕೂಸನ್ನು ಕಂಡನು. ಆ ಸುಂದರವಾದ ಕೂಸನ್ನು ಮನ್ಮಥನ ಪ್ರಿಯಳಾದ ರತಿದೇವಿಯ ಕೈಯಲ್ಲಿ ಕೊಟ್ಟನು.

**ಆ ರತಿ ಇಲ್ಲಿಗೆ ಏಕೆ ಬಂದಿದ್ದಳು?**

**ಅನಂಗತಾಮುಪಾಗತೇ ಪುರಾ ಹರೇಣ ಸಾಂಗಜೇ ।**
**ವಶಂ ವಿರಿಂಚಶಾಪತೋ ಜಗಾಮ ಶಂಬರಸ್ಯ ಹಿ ॥೧೮೭॥**

ಪೂರ್ವದಲ್ಲಿ ಕಾಮನು ರುದ್ರದೇವರ ಉರಿಗಣ್ಣಿನಿಂದ ಸುಟ್ಟು ಸತ್ತನು. ಆಗ ಕಾಮನ ಹೆಂಡತಿಯಾದ ರತಿದೇವಿ,ಗಂಡ ಸತ್ತ ದುಃಖದಿಂದ ನೊಂದು ಅಡವಿಯಲ್ಲಿ ತಪಸ್ಸಿಗೆ ಕುಳಿತಿದ್ದಳು. ಅಲ್ಲಿಗೆ ಶಂಬರಾಸುರನು ವಿಹಾರಕ್ಕಾಗಿ ಬಂದಿದ್ದ. ರತಿಗೆ ಬ್ರಹ್ಮನ ಶಾಪವಿದ್ದ ಪ್ರಯುಕ್ತ ಶಂಬರನು ಅವಳನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋದನು.

**ರತಿದೇವಿಗೆ ಬ್ರಹ್ಮನ ಶಾಪದ ಕಾರಣ :**

**ಪುರಾಹಿ ಪಂಚಭರ್ತೃಕಾಂ ನಿಶಮ್ಯ ಕಂಜಜೋದಿತಾಂ ।**
**ಜಹಾಸ ಪಾರ್ಷತಾತ್ಮಜಾಂ ಶಶಾಪ ತಾಂ ತತಸ್ತ್ವ ಜಃ ॥೧೮೮॥**

ಹಿಂದೆ ಒಂದು ಸಲ ಬ್ರಹ್ಮ ದೇವರು ಮುನಿಗಳಿಗೆ ದ್ರೌಪತಿದೇವಿಯ ಚರಿತ್ರೆಯನ್ನು ಹೇಳುತ್ತಿದ್ದನು. ಆಗ ಐದು ಮಂದಿ ಗಂಡಂದಿರ ಪ್ರಸ್ತಾಪಬಂದಿತು. ರತಿಯು ಅದನ್ನು ಕೇಳಿ ನಕ್ಕಳು. ಅದಕ್ಕಾಗಿ ಬ್ರಹ್ಮನು 'ಅಸುರನಿಂದ ದೂಷಿತಳಾಗು' ಎಂದು ಶಾಪ ಕೊಟ್ಟನು. ಅದರ ಪರಿಣಾಮವಾಗಿ ಶಂಬರಾಸುರನು ಎಳೆದು ತಂದಿದ್ದನು.

**ವಿ. ವಿ. : ಇಲ್ಲಿ ಶಾಪಕ್ಕೆ ಎರಡು ಕಾರಣಗಳು.**

೧) ದ್ರೌಪದಿಯಂಥ ಸಾಧ್ವಿಗೆ ಐದುಮಂದಿ ಗಂಡಂದಿರೇ? ಎಂಬ ಕೀಳುವಿಚಾರ.

೨) ಬ್ರಹ್ಮರಂಥ ದೊಡ್ಡವರು ಹೀಗೆ ಹೇಳಬಹುದೆ? ಎಂಬ ಶಂಕೆ.

**ಭವಾಸುರೇಣ ದೂಷಿತೇತ ಸಾ ತತೋ ಹಿ ಮಾಯಯಾ ।**
**ಪಿಧಾಯ ತಾಂ ನಿಜಾಂ ತಮಂ ಜನಾಮ ಚಾನ್ಯಯಾಸುರಂ ॥೧೮೯॥**

'ನೀನು ಅಸುರನಿಂದ ದೂಷಿತಳಾಗು' ಎಂಬ ಶಾಪವನ್ನು ಪಡೆದ ಮೇಲೆ ಆ ರತಿಯು ತನ್ನ ನಿಜವಾದ ಶರೀರವನ್ನು ಆಚ್ಛಾದಿಸಿ ಮಾಯೆಯಿಂದ ಮತ್ತೊಂದು ಶರೀರವನ್ನು ಸೃಷ್ಟಿಸಿದಳು. ಆ ಅನ್ಯ ಶರೀರದಿಂದ ರತಿಯು ಅಸುರನ ಹತ್ತಿರ ಇದ್ದಳು.

**ಭೀಮಸೇನನು ಹಿಡಂಬಿಯನ್ನು ಹೇಗೆ ವರಿಸಿದನು?**

ದೇವತೆಗಳಿಗೆ ಅಸುರರ ಸಂಪರ್ಕವಿಲ್ಲ ಇದು ನಿಯಮ. ಆದರೂ

**ಗೃಹೇಽಪಿ ಸಾಸುರೇ ಸ್ಥಿತಾ ನಿಜಸ್ವರೂಪತೋಽ ಸುರಂ ।**
**ನ ಗಚ್ಛತಿ ಸ್ಮ ಸಾ ಪತಿಂ ನಿಜಂ ಸಮೀಕ್ಷ್ಯ ಹರ್ಷಿತಾ ॥೧೯೦॥**

ಆ ರತಿ ದೇವಿಯು ಅಸುರನ ಮನೆಯಲ್ಲಿದ್ದಾಗ್ಯೂ ನಿಜ ಸ್ವರೂಪದಲ್ಲಿಯೇ ಇದ್ದಳು. ಆ ರತಿಯು ತನ್ನ ನಿಜ ಪತಿಯನ್ನು ಕಂಡು ಹರ್ಷಿತಳಾದಳು. (ಕೆಸರಿನಲ್ಲಿ ಕಮಲ ಇರುವುದಿಲ್ಲವೇ ಹಾಗೆ)

**ರಸಾಯನೈಃ ಕುಮಾರಕಂ ವ್ಯವರ್ಧಯದ್ರತಿಃ ಪತಿಂ ।**
**ಸುಪೂರ್ಣ ಯೌವನೋಽಭವಚ್ಚತುರ್ಭಿರೇವ ವತ್ಸರೈಃ ॥೧೯೧॥**

ಅನೇಕ ರಸವುಳ್ಳ ಪೌಷ್ಟಿಕವಾದ ಪದಾರ್ಥಗಳನ್ನು ಆ ಕುಮಾರನಿಗಿತ್ತು, ತನ್ನ ಪತಿಯನ್ನೇ ಬೆಳೆಸಿದಳು. ಆ ರಸಾಯನಗಳ ಪ್ರಭಾವದಿಂದ ಆ ಕುವರನು ನಾಲ್ಕೇ ವರುಷಗಳಲ್ಲಿ ತರುಣಾವಸ್ಥೆಗೆ ಬಂದನು.

**ಪತಿಂ ಸುಪೂರ್ಣಯೌನಂ ನಿರೀಕ್ಷ್ಯತಾಂ ವಿಲಜ್ಜತೀಂ ।**
**ಉವಾಚ ಕಾರ್ಷ್ಣಿರಂಬತೇ ಕುಚೇಷ್ಟಿತಂ ಕಥಂ ತ್ವಿತಿ ॥೧೯೨॥**

ಪತಿಯು ಸಂಪೂರ್ಣವಾಗಿ ಯೌವನಾವಸ್ಥೆಗೆ ಬಂದುದನ್ನು ಕಂಡು ರತಿಯು ಲಜ್ಜಿತಳಾಗಿ, ವಿಕಾರ ಮನಸ್ಸಿನಿಂದ ವರ್ತಿಸಹತ್ತಿದಳು. ಆಗ ಪ್ರದ್ಯುಮ್ನನು ನಿನ್ನ ಈ ಕುತ್ಸಿತ ಆಚರಣೆಗಳಿಗೆ ಕಾರಣವೇನೆಂದು ಕೇಳಿದನು.

**ಜಗಾದ ಸಾಖಿಲಂ ಪತೌ ತದಾಸ್ಯ ಜನ್ಮ ಜಾಗತಿಂ ।**
**ತತೋಽಗ್ರಹೀತ್ಯ ತಾಂ ಪ್ರಿಯಾಂರತಿಂ ರಮಾಪತೇಃ ಸುತಃ ॥೧೯೩॥**

ಆಗ ಆ ರತಿಯು ತಾನು ಇಲ್ಲಿಗೆ ಪತಿತಳಾಗಿ ಬಂದ ಕಾರಣವನ್ನು ಕಾಮನೇ ಪ್ರದ್ಯುಮ್ನನಾಗಿ ಶ್ರೀಕೃಷ್ಣನಲ್ಲಿ ಹುಟ್ಟಿದ ಕಾರಣವನ್ನು, ಮುಂತಾದ ಇತಿಹಾಸ ಎಲ್ಲವನ್ನು ವಿವರವಾಗಿ ತನ್ನ ಪತಿಗೆ ತಿಳಿಸಿದಳು. ಆಗ ಆ ಪ್ರದ್ಯುಮ್ನನು ರತಿಯನ್ನು ತನ್ನ ಪತ್ನಿಯನ್ನಾಗಿ ಸ್ವೀಕರಿಸಿದನು.

ಶ್ರೀಮದಾಚಾರ್ಯರು 'ಸಾಖಿಲಾಂ' ಎಂಬ ಪದಲ್ಲಿ ಎಲ್ಲ ವಿವರವನ್ನು ಅಡಗಿಸಿದ್ದಾರೆ. ಅದೇ ಅವರ ಶೈಲಿಯ ಮಹತ್ವ.

**ದದೌ ಚ ಮಂತ್ರ ಮುತ್ತ ಮಂ ಸಮಸ್ತ ಮಾಯಿನಾಶಕಂ ।**
**ಭೃ ಗೂತ್ಥ ರಾಮದೈವತಂ ಠರ್ತಿಹರರೇಃ ಸುತಾಯ ಸಾ ॥೧೯೪॥**

ಶ್ರೀಹರಿಯ ಮಗನಾದ ತನ್ನ ಪತಿಗೆ ಆ ರತಿದೇವಿಯು ಸಮಸ್ತ ಮಾಯೆಯನ್ನು ನಾಶ ಮಾಡತಕ್ಕ ಉತ್ತಮವಾದ ಮಂತ್ರವನ್ನು ಹೇಳಿದಳು. ಪರಶುರಾಮ ದೇವತಾರರಿತ್ತ ಮಂತ್ರ ನಾರದರಿಂದ ಉಪದೇಶಿಸಿದ ಮಂತ್ರಗಳನ್ನು ಕೂಡಾ ತನ್ನ ಗಂಡನಿಗೆ ಜಯ ಪ್ರಾಪ್ತವಾಗಲಿ ಎನ್ನುವ ದೃಷ್ಟಿಯಿಂದ ಹೇಳಿದಳು.

**ತತಃ ಸ್ವದಾರಧರ್ಷಕಂ ಸಾಹ್ವಯದ್ಯುಧೇ ಅಂಗಜಂ ।**
**ಸ ಶಂಬರಂ ಸ ಚೈತ್ಯ ತ ಯುಯೋಧ ಶಕ್ತಿ ತೋ ಬಲೀ ॥೧೯೫॥**

ಆ ನಂತರ ಕಾಮನು ತನ್ನ ಹೆಂಡತಿಯನ್ನು ಪಡೆಯಬೇಕೆನ್ನುವ ಉದ್ದೇಶ ದಿಂದ ಆ ಶಂಬರಾಸುರನನ್ನು ಯುದ್ಧಕ್ಕೆ ಕರೆದನು. ಆ ಬಲಶಾಲಿಯಾದ ಶಂಬರಾಸುರನು ತನ್ನ ಶಕ್ತಿಯಿಂದ ಯುದ್ಧ ಮಾಡಲು ಸಿದ್ಧನಾದನು.

**ಸ ಚರ್ಮ ಖಡ್ಗಧಾರಿಣಂ ವರಾಸ್ತ್ರ ಶಸ್ತ್ರ ಪಾದಪೈಃ ।**
**ಯದಾ ನ ಯೋದ್ಧು ಮಾಶ ಕದ್ಧರೇಃ ಸುತಂ ನದೃಶ್ಯತೇ ॥೧೯೬॥**

ಯಾವಾಗ ಆ ಶಂಬರಾಸುರನು, ಚರ್ಮ, ಖಡ್ಗ, ಅಸ್ತ್ರ – ಶಸ್ತ್ರ ಮುಂತಾದವು ಗಳಿಂದ ಶ್ರೀಹರಿಯ ಮಗನ ಕೂಡ ಯುದ್ಧ ಮಾಡಿದನೋ, ಸೋಲುವ ಪ್ರಸಂಗ ಬಂದಿತೋ, ಆಗ ಒಮ್ಮಿಂದೊಮ್ಮಿಗೆ ತನ್ನ ಮಾಯೆಯಿಂದ ಅದೃಶ್ಯನಾದನು.

**ಸಹಸ್ರ ಮಾಯ ಮುಲ್ಬಣಂ ತ್ವದೃಶ್ಯಮಂಬರಾದ್ಗಿರೀನ್ ।**
**ಸೃಜಂತಮೇತ್ಯ ವಿದ್ಯಯಾ ಜಘಾನ ಕೃಷ್ಣನಂದನಃ ॥೧೯೭॥**

ಆ ಶಂಬರಾಸುರನು, ಸಹಸ್ರಾರು ಉಲ್ಬಣವಾದ ಮಾಯೆಗಳನ್ನು ಬಲ್ಲವ ನಾಗಿದ್ದನು. ಯಾರಿಗೂ ಕಾಣದಂತಿದ್ದು ಆಕಾಶದಿಂದಲೇ ಗಿರಿ ಪರ್ವತಗಳನ್ನು ಸೃಷ್ಟಿಸಿ ಯುದ್ಧ ಮಾಡತಕ್ಕ ಶಕ್ತಿಯುಳ್ಳವನು. ಅಂತಹ ಶಂಬರಾಸುರನನ್ನು ರತಿಯು ಕೊಟ್ಟ ವಿದ್ಯೆಯ ಬಲದಿಂದ ಪ್ರದ್ಯುಮ್ನನು ಸಂಹರಿಸಲುದ್ಯುಕ್ತನು.

ವಿ. ವಿ. : ಶಂಬರಾಸುರನು ಮೃತ್ಯುವಿನಿಂದ ಪಾರಾಗಬೇಕೆಂದು ಪ್ರಯತ್ನಿಸಿದರೆ, ಮೃತ್ಯುವು ಮನೆಯಲ್ಲಿಯೇ ಬೆಳೆಯಬೇಕೇ? ಇದನ್ನೇ ದೈವಲೀಲೆ ಎನ್ನುವುದು.

**ಸ ವಿದ್ಯಯಾ ವಿನಾಶಿ ತೋರುಮಾಯ ಆಶು ಶಂಬರಃ ।**
**ನಿಕೃತ್ತ ಕಂಧರೋಽಪತದ್ವರಾಪಿ ನಾ ಮುನಾ ಕ್ಷಣಾತ್ ॥೧೯೮॥**

ಪ್ರದ್ಯುಮ್ನನ ವಿದ್ಯಾಬಲವು ಶಂಬರಾಸುರನ ಎಲ್ಲ ಮಾಯೆಯನ್ನು ನಾಶ ಮಾಡಿತು. ಆಗ ಶಂಬರಾಸುರನು ಎಲ್ಲವನ್ನು ತ್ಯಜಿಸಿದವನಾಗಿ ನತ ಕಂಧರ ನಾನಿ ತಕ್ಷಣದಲ್ಲಿ ಬಿದ್ದುಹಿಟ್ಟನು.

**ನಿಹತ್ಯ ತಂ ಹರೇಃ ಸುತಸ್ತ ಯ್ಯೆವ ವಿದ್ಯಯಾಂಬರಂ ।**
**ಸಮಾಸ್ಥಿತಃ ಸ ಭಾರ್ಯಯೋ ಸಮಂ ಕುಶಸ್ಥಲೀಂ ಯಯೌ ॥೧೯೯॥**

ಪ್ರದ್ಯುಮ್ನನು ಶಂಬರಾಸುರನನ್ನು ಕೊಂದ ನಂತರ, ತನ್ನ ಹೆಂಡತಿಯನ್ನು ಕೂಡಿಕೊಂಡು, ರತಿಯಿತ್ತ ವಿದ್ಯಾಬಲದಿಂದಲೇ ಆಕಾಶ ಮಾರ್ಗವಾಗಿ ದ್ವಾರಕಾ ಪಟ್ಟಣಕ್ಕೆ ಬಂದು ಮುಟ್ಟಿದನು.

**ಸಮಸ್ತ ವೇದಿನೋರ್ಮನಿರ್ನರಾನ್ ವಿಡಂಬ ಮಾನಯೋಃ ।**
**ರಮಾ ರಮೇಶಯೋಃ ಸುತಂ ಜಗಾದ ತಂ ಸ್ಮ ನಾರದಃ ॥೨೦೦॥**

ಸಮಸ್ತವನ್ನು ಬಲ್ಲವನಾದಾಗ್ಯೂ ಮಾನವರಂತೆ ನಟಿಸುವ ಶ್ರೀಕೃಷ್ಣ ರುಕ್ಮಿಣಿಯರಿಗೆ – 'ಇವನು ನಿಮ್ಮ ಮಗನೇ' ಎಂದು ನಾರದರು ಹೇಳಿದರು. ಅದೊಂದು ವಿಡಂಬನೆಯೇ ಸರಿ.

**ಸ ರುಕ್ಮಿಣೀ ಜನಾರ್ದನಾದಿಭಿಃ ಸರಾಮಯಾದವೈಃ ।**
**ಪಿತಾಮಹೇನ ಚಾದರಾತ್ಸು ಲಾಲಿತೋಽವಸತ್ಸುಖಂ ॥೨೦೧॥**

ಆ ಪ್ರದ್ಯುಮ್ನನು, ರುಕ್ಮಿಣಿ–ಕೃಷ್ಣರಲ್ಲಿ, ಬಲರಾಮ ಯಾದವರಲ್ಲಿ ತಾತನಾದ ವಸುದೇವ ಇವರ ಮಧ್ಯದಲ್ಲಿ ಬಹು ಪ್ರೀತಿಯಿಂದ ಲಾಲಿತನಾಗಿ ಸುಖದಿಂದ ಬೆಳೆದನು.

## ಸತ್ಯಭಾಮೆಯ ಮದುವೆಯ ಪೀಠಿಕೆ :

**ತತಃ ಪುರಾ ಸ್ಯಮಂತಕಂ ಹ್ಯವಾಪ ಸೂರ್ಯಮಂಡಲೇ ।**
**ಸ್ಥಿತಾದ್ಧರೇಃ ಸ ಸತ್ರಜಿತ್ ಸದಾತ್ರ ಕೇಶವಾರ್ಚಕಃ ॥೨೦೨॥**

ಹಿಂದೆ ಸೂರ್ಯ ಮಂಡಲದಲ್ಲಿ ಸ್ಯಮಂತಕ ಒಂದು ಮಣಿಯಿದ್ದಿತು. ಸತ್ರಾಜಿತ್ ಎಂಬ ರಾಜನು, ದೇವರ ಅರ್ಚನೆಗೆಂದು ಅದನ್ನು ಸೂರ್ಯನನ್ನು ಮೆಚ್ಚಿಸಿ ಪಡೆದುಕೊಂಡಿದ್ದನು. ಅವನು ಮಹಾದ್ವೈವ ಭಕ್ತನು ಕೂಡ.

**ಸದಾಸ್ಯ ವಿಷ್ಣು ಭಾವಿನೋಽಪ್ಯತೀವ ಲೋಭ ಮಾಂತರಂ ।**
**ಪ್ರಕಾಶಯನ್ರಮಾಪತಿ ರ್ಯಯಾಚ ಈಶ್ವರೋ ಮಣಿಂ ॥೨೦೩॥**

ಸತ್ರಾಜಿತನು ವಿಷ್ಣುಭಕ್ತನಾದಾಗ್ಯೂ ಪರಮ ಲೋಭಿಯಾಗಿದ್ದನು. ಶ್ರೀಕೃಷ್ಣನು ತನ್ನ ಭಕ್ತರ ಮೇಲೆ ಮಮತೆಯುಳ್ಳವನಾದಾಗ್ಯೂ, ಸತ್ರಾಜಿತನ ಈ ಲೋಭ ಗುಣವನ್ನು ಪ್ರಕಾಶಗೊಳಿಸುವದಕ್ಕಾಗಿ, ಆತನು ತನ್ನ ಭಕ್ತನಾದ ಸತ್ರಾಜಿತನಿಗೆ ಮಣಿಯನ್ನು ಕೇಳಿದನು.

**ಸ ತಂ ನದತ್ತವಾಂಸ್ತತೋಽನುಜೋ ನಿಬಧ್ಯ ತಂ ಮಣಿಂ ।**
**ವನಂ ಗತಃ ಪ್ರಸೇನಕೋ ಮೃಗಾಧಿಪೇನ ಪಾತಿತಃ ॥೨೦೪॥**

ಆ ಸತ್ರಾಜಿತರಾಜನು ಮಣಿಯನ್ನು ಶ್ರೀಕೃಷ್ಣನಿಗೆ ಕೊಡಲಿಲ್ಲ. ಸತ್ರಾಜಿತ ರಾಜನ ತಮ್ಮ ಪ್ರಸೇನ, ಅವನು ಆ ಮಣಿಯನ್ನು ಧರಿಸಿ ವನಕ್ಕೆ ನಡೆದನು. ಅಲ್ಲಿ ಅವನು ಸಿಂಹದಿಂದ ಹತನಾದನು.

**ತದಾ ಸ ಸತ್ರಜಿದ್ಧರಿಂ ಶಶಂಸ ಸೋದರಾಂತಕಂ ।**
**ಉಪಾಂಶು ವತ್ಸರಾನ್ ತತೋ ಹರಿಃ ಸಯಾದವೋ ಯಯೌ ॥೨೦೫॥**

ಆಗ ಆ ಸತ್ರಾಜಿತ ರಾಜನು ಶ್ರೀಕೃಷ್ಣನೇ ತನ್ನ ಸಹೋದರನ ಮೃತ್ಯುವಿಗೆ ಕಾರಣನು ಎಂದು ಅಲ್ಲಲ್ಲಿ ಮೆಲ್ಲಗೆ ಹೇಳ ಹತ್ತಿದನು. ಅದನ್ನು ಕೇಳಿದ ಶ್ರೀಕೃಷ್ಣನು ಯಾದವರ ಸಹಿತನಾಗಿ ಪ್ರಸೇನನನ್ನು ಹುಡುಕುತ್ತ ನಡೆದನು.

**ವನೇ ಸ ಸಿಂಹಸೂದಿತಂ ಪದೈಃ ಪ್ರದರ್ಶ್ಯ ವೃಷ್ಣಿನಾಂ ।**
**ಪ್ರಸೇನಮೃಕ್ಷಪಾತಿತಂ ಸ ಸಿಂಹಮಪ್ಯ ದರ್ಶಯತ್ ॥೨೦೬॥**

ಆ ವನದಲ್ಲಿ ಸಿಂಹದಿಂದ ಒಡಮೂಡಿದ ಹೆಜ್ಜೆಗಳನ್ನು ಶ್ರೀಕೃಷ್ಣನು ಯಾದವರಿಗೆ ತೋರಿಸಿದನು. ಪ್ರಸೇನರಾಜನನು ಸಿಂಹದಿಂದ ಹತನಾದದ್ದನ್ನೂ ಕಂಡರು. ಹಾಗೆ ಜಾಂಬುವಂತನಿಂದ ಕೊಲ್ಲಲ್ಪಟ್ಟ ಸಿಂಹವನ್ನೂ ತೋರಿಸಿದನು.

**ತತೋ ನಿಧಾಯ ತಾನ್ ಬಿಲಂ ಸಜಾಂಬವತ್ಪರಿಗ್ರಹಂ ।**
**ವಿವೇಶ ತತ್ರಸಂಯುಗಂ ಬಭೂವ ತೇನ ಚೇಶಿತುಃ ॥೨೦೭॥**

ಶ್ರೀಕೃಷ್ಣನು ಅವರನ್ನು (ಯಾದವರನ್ನು) ಅಲ್ಲಿಯೇ ನಿಲ್ಲಿಸಿ, ಆ ಮಣಿಯನ್ನು ತೆಗೆದುಕೊಂಡ ಜಾಂಬುವಂತನ ಗುಹೆಯನ್ನು ಪ್ರವೇಶಿಸಿದನು. ಅಲ್ಲಿ ಶ್ರೀಕೃಷ್ಣ ಮತ್ತು ಜಾಂಬವಂತರಿಗೂ ಯುದ್ಧವಾಯಿತು.

**ಯುಯೋಧ ಮಂದಮೇವ ಸ ಪ್ರಭುಃ ಸ್ವಭಕ್ತ ಇತ್ಯಜಃ ।**
**ಚಕಾರ ಚೋಗ್ರಮಂತತಃ ಪ್ರಕಾಶಯನ್ ಸ್ವಮಪ್ಯ ಹಿ ॥೨೦೮॥**

ಜಾಂಬವಂತನು ತನ್ನ ಭಕ್ತನಾದುದರಿಂದ ಜನ್ಮರಹಿತನಾದ ಶ್ರೀಕೃಷ್ಣನು ಯುದ್ಧದಲ್ಲೂ ಕೂಡ ಮೃದುವಾಗಿ ಹೊಡೆದನು. ಯುದ್ಧದ ಸಮಾಪ್ತಿಯ ಕಾಲ ಬಂದಾಗ ತನ್ನ ಸ್ವರೂಪವನ್ನು ಪ್ರಕಟಿಸಿದನು.

**ಸ ಮುಷ್ಟಿ ವಿಷ್ಟ ವಿಗ್ರಹೋ ನಿತಾಂತಮಾಪದಂ ಗತಃ ।**
**ಜಗಾಮ ಚೇತಸಾರಣಂ ರಘೂತ್ತಮಂ ನಿಜಂ ಪತಿಂ ॥೨೦೯॥**

(ಶ್ರೀಕೃಷ್ಣನು ಮೃದುವಾಗಿ ಗುದ್ದಿದರೂ) ಆ ಮುಷ್ಟಿಯ ಪೆಟ್ಟಿನಿಂದ ಜಾಂಬವಂತನು ಜರ್ಜರಿತನಾದನು. ಸಾಯುವ ಗತಿ ಒದಗಿದಾಗ ತನ್ನ ಸ್ವಾಮಿಯಾದ ರಾಮಚಂದ್ರನನ್ನು ಕಂಡು ಶರಣಾಗತನಾದನು.

**ಸ್ಮೃತಿಂ ಗತೇ ತು ರಾಘವೇ ತದಾಕೃತಿಂ ಯದೂತ್ತಮೆ ।**
**ಸಮಸ್ತ ಭೇದವರ್ಜಿತಾ ಸಮೀಕ್ಷ್ಯ ಸೋಽಯವಿತ್ಯ ಮೈತ್ ॥೨೧೦॥**

ಜಾಂಬವಂತನು ಶ್ರೀ ರಾಮಚಂದ್ರನನ್ನು ಸ್ಮರಿಸಿಕೊಂಡ ಕೂಡಲೇ ಯದೋತ್ತಮನಾದ ಶ್ರೀಕೃಷ್ಣನು ಶ್ರೀರಾಮನ ಆಕೃತಿಯನ್ನೇ ತಾಳಿದನು. ಸಮಸ್ತ ಭೇದ ವರ್ಜಿತನಾಗಿರತಕ್ಕ ಶ್ರೀ ಕೃಷ್ಣನನ್ನೇ ರಾಮನ ರೂಪದಲ್ಲಿ ಕಂಡು ಅವನು ಹೀಗೆ ಚಿಂತಿಸಿದನು.

**ತತಃ ಕ್ಷಮಾಪಯೆನ್ ಸುತಾಂ ಪ್ರದಾಯ ರೋಹಿಣೀಂ ಶುಭಾಂ ।**
**ಮಣಿಂ ಚ ತಂ ನುನಾವ ಸಪ್ರಸನ್ನ ಆಶು ಪಾದಯೋಃ ॥೨೧೧॥**

ಶ್ರೀರಾಮನೇ ಶ್ರೀಕೃಷ್ಣನು ಎಂದು ತಿಳಿದುಕೊಂಡ ಕೂಡಲೇ, ತನ್ನ ಮಗಳಾದ ಜಾಂಬವತಿಯನ್ನು ಮದುವೆ ಮಾಡಿ ಕೊಟ್ಟು, ನಂತರ ಆ ಮಣಿಯನ್ನು ಶ್ರೀಕೃಷ್ಣನ ಪಾದದಲ್ಲಿಟ್ಟು ಕ್ಷಮೆಯನ್ನು ಯಾಚಿಸಿದನು. ರಕ್ಷಣೆಗಾಗಿ ಮೊರೆಹೊಕ್ಕನು.

ವಿ. ವಿ. : ರೋಹಿಣೀ, ಜಾಂಬವತಿ ಹೇಗಾದಳು? ನಾಲ್ಕಾರು ಪುಸ್ತಕಗಳ ಶ್ಲೋಕದಲ್ಲಿ 'ರೋಹಿಣೀಂ' ಎಂದೇ ಇದೆ.

**ವಿದಾಯ ಚಕ್ರದಾರಿತಂ ಸುಜೀರ್ಣದೇಹಮಸ್ಯ ಸಃ ।**
**ಯುವಾನಮಾಶು ಕೇಶವಶ್ಚಕಾರ ವೇದನಾಂ ವಿನಾ ॥೨೧೨॥**

ಜಾಂಬವಂತನ ದೇಹ ಬಹಳಷ್ಟು ಜೀರ್ಣ ಮತ್ತು ಶಿಥಿಲವಾದದ್ದು. ಜೊತೆಯಲ್ಲಿ ಯುದ್ಧದಲ್ಲಾದ ನೋವಿನ ದುಃಖದಿಂದಲೂ ಕೂಡಿತ್ತು. ಶ್ರೀಕೃಷ್ಣನು ತನ್ನ ಚಕ್ರವನ್ನು ಆತನ ಮೇಲೆ ಆಡಿಸಿದನು. ಅದರಿಂದ ಅದು ಪೂರ್ತಿಯಾಗಿ ಪರಿವರ್ತನ ಹೊಂದಿ, ತಾರುಣ್ಯ ಮತ್ತು ಸುಖವನ್ನು ಪಡೆಯಿತು.

**ಅಂತೆಯೇ ಪರಮಾತ್ಮನು ಅಚಿಂತ್ಯನು, ಅಘಟಿತಘಟನಾ ಶಕ್ತಿಯುಳ್ಳವನು.**

**ವಿಧಾಯ ಭಕ್ತವಾಂಛಿತಂ ಪ್ರಿಯಾಸಹಾಯ ಈಶ್ವರಃ ।**
**ಪ್ರಗೃಹ್ಯತಂ ಮಹಾಮಣಿಂ ವಿನಿರ್ಯಯೌ ಗುಹಾಮುಖಾತ್ ॥೨೧೩॥**

ಶ್ರೀಕೃಷ್ಣನು ಕನ್ಯಾಮಣಿಯನ್ನೂ, ಸ್ಯಮಂತ ಮಣಿಯನ್ನು ಎರಡನ್ನೂ ಸ್ವೀಕರಿಸಿ, ಭಕ್ತನ ಇಚ್ಛೆಯನ್ನು ಪೂರ್ತಿ ಮಾಡಿದನು. ನಂತರ ಜಾಂಬವಿತಿ ಸಹಿತನಾಗಿ ಗುಹೆಯಿಂದ ಹೊರಬಂದನು.

**ಗುಹಾಂ ಪ್ರವಿಷ್ಟಮೀಶ್ವರಂ ಬಹೂನ್ನಹಸ್ಯನಿರ್ಗತಂ ।**
**ಪ್ರತೀಕ್ಷ್ಯ ಯಾದವಾಸ್ತು ಯೇ ಗತಾ ಗೃಹಂ ತು ಜಹೃಷುಃ ॥೨೧೪॥**

ಗುಹೆಯಲ್ಲಿ ಪ್ರವೇಶಿಸಿದ ಶ್ರೀಕೃಷ್ಣನು ಬಹು ಕಾಲದ ವರೆಗೆ ಬಾರದಿರಲು, ಪ್ರತೀಕ್ಷ್ಯೆ ಮಾಡಿ ಮಾಡಿ ಕೊನೆಗೆ ಯಾದವರು ಚಿಂತೆಯಿಂದ ಹಿಂದಿರುಗಿದ್ದರು. ಈಗ ಅವರು ಶ್ರೀಕೃಷ್ಣನು ಮನೆಗೆ ಬಂದದ್ದನ್ನು ಕಂಡು ಸಂತೋಷಗೊಂಡರು.

**ಸಮಸ್ತ ವೃಷ್ಣಿ ಸನ್ನಿಧೌ ಯದೂತ್ತಮಃ ಸ್ಯಮಂತಕಂ ।**
**ದದೌಚ ಸತ್ರಜಿತ್ಕರೇ ಸ ವಿಚ್ಛವಿರ್ಬಭೂವಹ ॥೨೧೫॥**

ಯದೂತ್ತಮನಾದ ಶ್ರೀಕೃಷ್ಣನು, ಆ ಸ್ಯಮಂತಕ ಮಣಿಯನ್ನು ಸತ್ರಾಜಿತ ರಾಜನ ಕರದಲ್ಲಿ ಕೊಟ್ಟನು. ಆಗ ಆ ಸತ್ರಾಜಿತನು ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟು, ಮುಖದಲ್ಲಿ ಕಾಂತಿಯಿಲ್ಲದವನಾಗಿದ್ದನು.

**ಸ ದುರ್ಯಶೋ ರಮಾ ಪಿತಾವ ಸೂಚ್ಯ ಮಿಥ್ಯಯಾ ತಪನ್ ।**
**ಸ್ವ ಪಾಪಹಾನಿ ಕಾಂಕ್ಷಯೊ ದದೌಸುತಾಂ ಜನಾರ್ದನೇ ॥೨೧೬॥**

ಆ ಸತ್ರಾಜಿತನು, ಶ್ರೀಕೃಷ್ಣನ ಮೇಲೆ ಕಳ್ಳತನದ ಅಪಕೀರ್ತಿಯ ಮಿಥ್ಯಾಪವಾದ ಹೊರಿಸಿದ್ದನು. ಅದಕ್ಕಾಗಿ ಪಶ್ಚಾತ್ತಾಪ ಪಟ್ಟು, ತನ್ನ ಪಾಪದ ಪರಿಹಾರಕ್ಕಾಗಿ ತನ್ನ ಮಗಳನ್ನೇ ಜನಾರ್ದನನಿಗೆ ಮದುವೆ ಮಾಡಿಕೊಟ್ಟನು.

**ಮಣಿಂ ಚ ತಂ ಪ್ರದಾಯ ತಂ ಸನಾಮ ಚಕ್ಷಮಾಪ ಯನ್ ।**
**ಮಣಿಂ ಪುನರ್ದದೌ ಹರಿರ್ಮುಮೋದ ಸತ್ಯಭಾಮಾ ಯಾ ॥೨೧೭॥**

ಶ್ರೀಕೃಷ್ಣನಿಗೆ, ಸತ್ರಾಜಿತ ರಾಯನು, ತನ್ನ ಮಗಳಾದ ಸತ್ಯಭಾಮೆಯನ್ನು ಕೊಟ್ಟು ಮದುವೆ ಮಾಡಿದನು. ಉಡುಗೊರೆಯಾಗಿ ಆ ಸ್ಯಮಂತಕ ಮಣಿಯನ್ನು ಕೊಟ್ಟನು. ಆದರೆ ಶ್ರೀಕೃಷ್ಣನು ಆ ಮಣಿಯನ್ನು ತಿರುಗಿ ಕೊಟ್ಟು ತಾನು ಸತ್ಯಭಾಮೆ ಯೊಡನೆ ಸುಖವಾಗಿ ಇದ್ದನು.

**ಸತ್ಯಭಾಮೆ ಯಾರು?**

**ರಮೈವ ಸಾ ಹಿ ಭೂರಿತಿ ದ್ವಿತೀಯಮೂರ್ತಿರುತ್ತಮಾ ।**
**ಬಭೂವ ಸತ್ರಜಿತ್ಸುತಾ ಸಮಸ್ತಲೋಕ ಸುಂದರೀ ॥೨೧೮॥**

(ಲಕ್ಷ್ಮೀ ದೇವಿಯರಿಗೆ, ಶ್ರೀ, ಭೂ, ದುರ್ಗಾ' ಎಂದು ಮೂರು ರೂಪಗಳು) ಅವುಗಳಲ್ಲಿ ಲಕ್ಷ್ಮೀ ದೇವಿಯರ ಎರಡನೇ ರೂಪ ಭೂದೇವಿಯೋ ಇಂದು ಸತ್ರಾಜಿತ ರಾಜನಿಗೆ ಮಗಳಾಗಿ ಹುಟ್ಟಿದ್ದಾಳೆ. ಅವಳೂ ಲಕ್ಷ್ಮೀದೇವಿಯ ಮೂರ್ತಸ್ವರೂಪಳೇ ಜೊತೆಯಲ್ಲಿ ಲೋಕ ಸುಂದರಿಯೂ ಉತ್ತಮಳೂ ಕೂಡ.

**ತತೋ ಹಿ ಸಾ ಚ ರುಕ್ಮಿಣೀ ಪ್ರಿಯೇ ಪ್ರಿಯಾಸು ತೇಽಧಿಕಂ ।**
**ಜನಾರ್ದನಸ್ಯ ತೇ ಹರೇಃ ಸದಾವಿಯೋಗಿನೀ ಯತಃ ॥೨೧೯॥**

ಸತ್ಯಭಾಮೆ ಮತ್ತು ರುಕ್ಮಿಣೀಯರು ಇಬ್ಬರೂ ಪರಮಾತ್ಮ (ಶ್ರೀಕೃಷ್ಣ) ನಿಗೆ ಅಧಿಕ ಪ್ರಿಯರಾದವರು. ಯಾವಾಗಲೂ ವಿಯೋಗವಿಲ್ಲದವರು (ಅವಿಯೋಗಿನಿ)

ಅವರಿಬ್ಬರೂ ದುಷ್ಟ ಸಂಹಾರದ ಶ್ರೀಕೃಷ್ಣನ ಕಾರ್ಯದಲ್ಲಿ ಸಹಕರಿಸಲು ಶ್ರೇಷ್ಠ ಅಂಗಭೂತ ದೇವತೆಗಳು ಅಂದರೆ ತಪ್ಪಲ್ಲ.

**ಅವಾಪ ಸಾಂಬನಾಮಕಂ ಸುತಂ ಚ ರೋಹಿಣೀ ಹರೇಃ ।**
**ಚತುರ್ಮುಖಾಂಶ ಸಂಯುತಂ ಕುಮಾರಮೇವ ಷಣ್ಮುಖಂ ॥೨೨೦॥**

ಆ ಜಾಂಬವತಿಯಲ್ಲಿ ಸಾಂಬ ಎಂಬ ಮಗನು ಶ್ರೀಹರಿಗೆ ಹುಟ್ಟಿದನು. ಅವನೇ ಹಿಂದೆ ಸ್ಕಂದನಾಗಿದ್ದನು. ಅವನಿಗೆ ಬ್ರಹ್ಮನ ಆವೇಶವೂ ಇದ್ದಿತು.

**ಇತಿ ಪ್ರಶಾಸತಿ ಪ್ರಭೌ ಜಗಜ್ಜನಾರ್ದನೇಽಖಿಲಂ ।**
**ಅಗಣ್ಯ ಸದ್ಗುಣಾರ್ಣವೇ ಕದಾಚಿದಾಯಯೌ ದ್ವಿಜಃ ॥೨೨೧॥**

ಅಗಣಿತ ಗುಣಗಳಿಗೆ ಆಗರನಾದವನು, ಸರ್ವಶಕ್ತನು, ಪ್ರಭುವು ಆದ ಶ್ರೀಕೃಷ್ಣನು ಉತ್ಕೃಷ್ಟ ರೀತಿಯಲ್ಲಿ ಸಕಲ ಜಗತ್ತನ್ನು ಪಾಲಿಸುತ್ತಿರುವಾಗ, ಒಂದುದಿನ ಒಬ್ಬ ಬ್ರಾಹ್ಮಣನು ಶ್ರೀಕೃಷ್ಣನ ಹತ್ತಿರ ಬಂದನು.

**ಜನಾರ್ದನಃ ಸ ನಾಮತೋ ರಮೇಶಪಾದಸಂಶ್ರಯಃ ।**
**ಸ ಮಾನಿತಶ್ಚ ವಿಷ್ಣುನಾ ಪ್ರಣಮ್ಯ ವಾಕ್ಯ ಮಬ್ರವೀತ್ ॥೨೨೨॥**

ಆ ಬ್ರಾಹ್ಮಣನ ಹೆಸರು ಜನಾರ್ದನ. ರಮೇಶನ ಪಾದಾರವಿಂದಗಳಲ್ಲಿ ಭಕ್ತಿಯುಳ್ಳವನು. ಬಂದ ಬ್ರಾಹ್ಮಣನನ್ನು ಶ್ರೀಕೃಷ್ಣನು ಆದರದಿಂದ ಸತ್ಕರಿಸಿದನು. ಆ ಬ್ರಾಹ್ಮಣನು ಶ್ರೀಕೃಷ್ಣನಿಗೆ ನಮಸ್ಕರಿಸಿ ಈ ರೀತಿ ನುಡಿದನು.

**ಕ್ಷಮಸ್ವ ಮೇ ವಚಃ ಪ್ರಭೋ ಬ್ರವೀಮ್ಯತೀವ ಪಾತಕಂ ।**
**ಯತಃ ಸುಪಾಪದೂತಕಸ್ತತೋ ಹಿ ತಾದೃಶಂ ವಚಃ ॥೨೨೩॥**

ಎಲೈ ಪ್ರಭುವೇ ನನ್ನನ್ನು ಕ್ಷಮಿಸು. ನಾನೊಬ್ಬ ಪಾಪಿಯ ದೂತನು. ನಾನೂ ಅವನಂತೆ ಪಾಪಿಷ್ಠನು. ಕಾರಣ ನಾನೊಂದು ಕೆಟ್ಟ ಮಾತನ್ನು ಹೇಳುತ್ತೇನೆ. ಅದನ್ನು ಕೇಳು. ನನ್ನನ್ನು ಕ್ಷಮಿಸು.

**ನ ತೇಽಸ್ತ್ಯಗೋಚರಂ ಕ್ವಚಿತ್ತಥಾಪಿ ಚಾಜ್ಞಯಾ ವದೇ ।**
**ವದೇ ಚೋದಿತೋಽಮುನಾ ದ್ವಿಜೋ ಜಗಾದ ಮಾಧವಂ ॥೨೨೪॥**

ನಿನಗೆ ತಿಳಿಯದೇ ಇರುವುದು ಯಾವುದೂ ಇಲ್ಲ. ಆದರೂ ನೀನು 'ಹೇಳು' ಎಂದು ಅಪ್ಪಣೆಯಿತ್ತರೆ ಹೇಳುತ್ತೇನೆ. ಅಂದಾಗ ಶ್ರೀಕೃಷ್ಣನು 'ಹೇಳು' ಎಂದು ಹೇಳಿದ ಮೇಲೆ, ಆ ಬ್ರಾಹ್ಮಣನು ಮಾಧವನಿಗೆ ಈ ರೀತಿ ಹೇಳಿದನು.

**ಸು ತೌಹಿ ಸಾಲ್ವಭೂಪತೇ ರ್ಬಭೂವತುಃ ಶಿವಾಶ್ರಯೌ ।**
**ಶಿವ ಪ್ರಸಾದ ಸಂಭವೌ ಪಿತುಸ್ತ್ವತೋ ಬಲೇನ ತೌ ॥೨೨೫॥**

ಸಾಲ್ವ ದೇಶದ ಅರಸನಿಗೆ, ರುದ್ರದೇವರ ವರದಿಂದ ಇಬ್ಬರು ಮಕ್ಕಳು ಹುಟ್ಟಿದ್ದಾರೆ. ನಿನಗಿಂತಲೂ ನಿನ್ನ ಮಕ್ಕಳು ಬಲಶಾಲಿಗಳಾಗಲಿ ಎಂದು ರುದ್ರದೇವರು ತಂದೆಗೆ ವರವನ್ನಿತ್ತಿದ್ದಾನೆ.

**ಅಜೇಯತಾಮವಧ್ಯ ತಾಂ ಶಿವಾದ್ವರಂ ಸಮಾಪತುಃ ।**
**ಜರಾಸುತಸ್ಯ ಶಿಷ್ಯಕಾ ತಪೋ ಬಲೇನ ಕೇವಲಂ ॥೨೨೬॥**

**ಮಹೋದರಂ ಚ ಕುಂಡಧಾರಿಣಂ ಚ ಭೂತಕಾವುಭೌ ।**
**ತಥಾಜಿತಾವ ವಧ್ಯಕೌ ದಿದೇಶ ಶಂಕರಸ್ತಯೋಃ ॥೨೨೭॥**

ಆ ಇಬ್ಬರು ಮಕ್ಕಳು ಅಜೇಯರು ಮತ್ತು ಅವಧ್ಯರು. ಹೀಗೆಂದು ಶಿವನ ವರವಿದೆ. ಅವರು ಜರಾಸಂಧನ ಶಿಷ್ಯರೂ ಕೂಡ. ಅವರು ಶಿವನನ್ನು ಕುರಿತು ಬಹಳಷ್ಟು ತಪಸ್ಸು ಮಾಡಿದರು. ಅದರಿಂದ ಸಂತುಷ್ಟನಾದ ಶಿವನು 'ಮಹೋದರ ಮತ್ತು ಕುಂಡಧಾರಿ' ಎಂಬ ಭೂತಗಳನ್ನು ಅವರ ವಶಕ್ಕೆ ಕೊಟ್ಟಿದ್ದಾನೆ.

**ತಯೋಃ ಸಹಾಯ ಏವ ತೌ ವರಾಚ್ಛಿವಸ್ಯ ಭೂತರೌ ।**
**ಅಜೇಯತಾಮವಾಪತುರ್ನ ಚಾನ್ಯಥಾ ಮರಾವಪಿ ॥೨೨೮॥**

ಆ ಇಬ್ಬರು ದೇವಯೋನಿಯಲ್ಲಿ ಬಂದ ಕಾರಣ ಸ್ವಾಭಾವಿಕವಾಗಿಯೇ ಮರಣ ರಹಿತರು. ಅದರ ಮೇಲೆ ಶಿವನ ವರದಿಂದ ಬಂದ ಭೂತದ ಸಹಾಯವೂ ಇದೆ.

**ಅಜೇಯ ತಾಮವಧ್ಯತಾಮವಾಪ್ಯ ತಾವು ಭೌ ಶಿವಾತ್ ।**
**ಪಿತುಶ್ಚ ರಾಜಸೂಯತಾಂ ಸಮಿಚ್ಛತೌ ಮಹೋದ್ಧತೌ ॥೨೨೯॥**

ಆ ಇಬ್ಬರು (ಹಂಸ ಡಿಭಿಕರು) ಅವಧ್ಯರೂ ಅಜೇಯರು ಆದ ಪ್ರಯುಕ್ತ ಮಹೋನ್ನತವಾದ ರಾಜಸೂಯ ಯಾಗವನ್ನು ತಮ್ಮ ತಂದೆಯಿಂದ ಮಾಡಿಸಿ – ಆತನನ್ನು ಸಂತುಷ್ಟಪಡಿಸಬೇಕೆಂದು ಇಚ್ಛಿಸುತ್ತಿದ್ದಾರೆ.

**ಜರಾಸುತೋ ಗುರುತ್ವತೋ ವಿರೋಧ್ಧುಮತ್ರ ನೇಚ್ಛತಿ ।**
**ನೃಪಾಂಸ್ತು ದೇವ ಪಕ್ಷಿಣೋ ವಿಜಿತ್ಯ ಕರ್ತು ಮಿಚ್ಛತಃ ॥೨೩೦॥**

ಅವರಿಬ್ಬರೂ ಶಿಷ್ಯರಾದ ಕಾರಣ, ಗುರುವಿನ ಔದಾರ್ಯವನ್ನು ವಹಿಸಿ ಜರಾಸಂಧನು ಅವರೊಡನೆ ವೈರತ್ವವನ್ನು ಇಚ್ಛಿಸುವುದಿಲ್ಲ. ಅಂದರೆ (ಅವನು ರಾಜಸೂಯಕ್ಕೆ ಅಪ್ಪಣೆಯಿತ್ತಂತೆ ಆಗಿದೆ) ಈಗ ಅವರು ಯಾವ ಯಾವ ರಾಜರು ದೈವ ಸಂಭೂತರಾಗಿದ್ದಾರೋ ಅವರೆಲ್ಲರನ್ನು ಗೆದ್ದು ಯಾಗವನ್ನು ಮಾಡಲು ಇಚ್ಛಿಸುತ್ತಿದ್ದಾರೆ.

**ಸ್ವಯಂ ಹಿ ರಾಜಸೂಯತಾಂ ಜರಾಸುತೋ ನ ಮನ್ಯತೇ ।**
**ಯ ತೋ ಹಿ ವೈಷ್ಣವಂ ಕ್ರತುಂ ತಮಾಹು ರೀಶ ವೈದಿಕಾಃ ॥೨೩೧॥**

ಜರಾಸಂಧನಿಗೆ ರಾಜಸೂಯ ಯಾಗದಲ್ಲಿ ಸ್ವಯಂ ಮನ್ನಣೆ ಮತ್ತು ವಿಶ್ವಾಸವಿಲ್ಲ. ಏಕೆಂದರೆ ಆ ಯಾಗವನ್ನು ಮಾಡುವವರೆಲ್ಲರೂ ವೈದಿಕರು, ಮತ್ತು ವಿಷ್ಣುವೇ ಸರ್ವೋತ್ತಮನೆಂದು ನಂಬುವವರು. ಇದು ಜರಾಸಂಧನ ಸ್ವಭಾವಕ್ಕೆ ವಿರುದ್ಧವಾದುದು.

**ಇಮೌ ಪಿತುರ್ಯಶೋರ್ಥಿನೌ ಪರಾಭವಾಯ ತೇ ತಥಾ ।**
**ಸಮಿಚ್ಛತೋಽಚ್ಯುತ ಕ್ರತುಂ ಭವಂತ ಮೂ ಚತುಶ್ಚ ತೌ ॥೨೩೨॥**

ಆ ಹಂಸ ಡಿಭಿಕರಿಗೆ ತಂದೆಗೆ ಕೀರ್ತಿಯನ್ನು ತರಬೇಕೆಂತಲೂ, ನಿನ್ನನ್ನು ತಿರಸ್ಕರಿಸಬೇಕೆಂತಲೂ ಇಚ್ಛೆಯಿದೆ. ಅಂತೆಯೇ ಅವರು ವಿಷ್ಣು ಸರ್ವೋತ್ತಮ ಯಾಗವನ್ನು ಮಾಡುತ್ತಿದ್ದಾರೆ. ಅವರು ಈ ರೀತಿ ಹೇಳಿದ್ದಾರೆ. ಅದನ್ನು ಕೇಳು.

ವಿ. ವಿ. : ಇಲ್ಲಿ ಹಂಸ ಡಿಭಿಕರಿಗೆ ವಿಷ್ಣುವೇ ಬೇರೆ. ಶ್ರೀಕೃಷ್ಣನೇ ಬೇರೆ ಎಂಬ ಅಂಶವು ದೃಢವಾದದ್ದನ್ನು ಸೂಚಿಸುತ್ತದೆ.

**ಸಮುದ್ರ ಸಂಶ್ರಯೋ ಭವಾನ್ ಬಹೂನ್ ಪ್ರಗೃಹ್ಯ ಲಾವಣಾನ್ ।**
**ಸುಭಾರ ಕಾನು ಹ್ಯೆಹಿ ನಾವಿತಿ ಕ್ಷಮಸ್ವ ಮೇ ವಚಃ ॥೨೩೩॥**

"ನೀನು ಸಮುದ್ರದ ಹತ್ತಿರ ಇರುವವನು . ಅದಕ್ಕಾಗಿ ಯಜ್ಞಕ್ಕೆ ಬೇಕಾಗುವಷ್ಟು ಉಪ್ಪನ್ನು ಅನೇಕ ಭಾರಗಳಷ್ಟು ಹೇರಿಕೊಂಡು ನನಗೆ ಒಪ್ಪಿಸು" ಎಂದು ಅವರು ಹೇಳಿದ್ದಾರೆ.

ವಿ. ವಿ. : ಇಲ್ಲಿ ಈ ಕೆಲವು ವಿಚಾರಗಳನ್ನು ನಾವು ಅರಿಯಬಹುದು:

೧) ಶ್ರೀಕೃಷ್ಣನೂ ಕೂಡ ಒಬ್ಬ ಸಾಮಾನ್ಯ ಮಾನವನು ಎಂದು ಅವರು ತಿಳಿದಿದ್ದರು.

೨) ಉಪ್ಪು, ಅಡಿಗೆಯ ಎಲ್ಲ ಸಾಹಿತ್ಯದಲ್ಲಿ ಬಹಳ ಕ್ಷುಲ್ಲಕ ಪದಾರ್ಥ ಅಂತೆಯೇ ಅವರು ಅದನ್ನು ತರಲು ಶ್ರೀಕೃಷ್ಣನಿಗೆ ಹೇಳಿದ್ದು. 'ಉಪ್ಪಿಗಿಂತ ರುಚಿಯಿಲ್ಲ; ತಾಯಿಗಿಂತ ಬಂಧುವಿಲ್ಲ' ಎಂಬುದನ್ನು ಅವರು ಅರಿಯರು.

೩) ಸಮುದ್ರದಲ್ಲಿ ಇರುವುದು ಕೇವಲ ಉಪ್ಪು ನೀರು ಮಾತ್ರ ಎಂದಿಷ್ಟೇ ಅವರು ತಿಳಿದದ್ದು. ಅದರಲ್ಲಿ ಅನರ್ಘ್ಯವಾದ ರತ್ನಗಳೂ ಇವೆಯೆಂಬುದನ್ನು ಅವರು ಅರಿಯರು. ಏಕೆಂದರೆ ಅದರ ಆಳಕ್ಕೆ ಹೋದವರೂ ಅಲ್ಲ; ವಿಚಾರಿಸಿದವರೂ ಅಲ್ಲ.

೪) ಶ್ರೀಕೃಷ್ಣ, ಸಾಮಾನ್ಯ ಪ್ರಜೆ. ನಾವು ರಾಜರು. ನಮಗೆ ಆತನು ಕಪ್ಪವನ್ನು ತಂದು ಕೊಡಲೇಬೇಕು.

**ಉದೀರ್ಯ ತಂ ನನಾಮ ಸಃ ಪ್ರಜಾಹಸನ್ ಸ್ವಯಾದವಾಃ ।**
**ಹರಿಸ್ತು ಸಾತ್ಯಕಿಂ ವಚೋ ಜಗಾದ ಮೇಘನಿಃ ಸ್ವನಃ ॥೨೩೪॥**

ಆ ವಿಪ್ರನು ಈ ರೀತಿಯಾಗಿ ಹೇಳಿ – ಮಹಾಮಹಿಮನಾದ ಶ್ರೀಕೃಷ್ಣನಿಗೆ ನಮಸ್ಕರಿಸಿದನು. ಆ ಬ್ರಾಹ್ಮಣನ ಮಾತನ್ನು ಕೇಳಿದ ಯಾದವರೆಲ್ಲರೂ ನಕ್ಕರು. ಆಗ ಶ್ರೀಹರಿಯು ತನ್ನ ಗಂಭೀರವಾದ ಧ್ವನಿಯಲ್ಲಿ ಸಾತ್ಯಕಿಗೆ ಹೀಗೆ ಹೇಳಿದನು.

**ಪ್ರಯಾಹಿ ಸಾತ್ಯಕೇ ವಚೋ ಬ್ರವೀಹಿ ಮೇ ನೃಪಾಧಮೌ ।**
**ಸಮೇತ್ಯ ವಾಂ ವರಾಯುಧೈಃ ಕರಂ ದದಾಮ್ಯ ಸಂಶಯಂ ॥೨೩೫॥**

ಎಲೋ ಸಾತ್ಯಕಿಯೇ ನೀನು ಹೋಗಿ, ಆ ನೃಪಾಧಮರಿಗೆ (ಕೀಳು ಮಟ್ಟದ ರಾಜರಿಗೆ ನಾನು ಹೀಗೆ ಹೇಳಿದೆ, 'ನಾವೆಲ್ಲರೂ ಸಮಸ್ತ ಆಯುಧದೊಂದಿಗೆ ಸುಸಜ್ಜಿತರಾಗಿ

ಯುದ್ಧದಲ್ಲಿಯೇ ನಿಮಗೆ ಕರವನ್ನು ಒಪ್ಪಿಸುತ್ತೇವೆ'' ಎಂದು ಹೇಳು ಎಂದು ಗಡುಚಾತ ಧ್ವನಿಯಲ್ಲಿ ನುಡಿದನು. ಅಲ್ಲದೇ,

**ಉಪೈತಮಾಶು ಸಂಯುಗಾರ್ಥಿನೌ ಚ ಪುಷ್ಕರಂ ಪ್ರತಿ ।**
**ಇತೀರಿತಃ ಶಿನೇ ಸುತೌ ಜಗಾಮ ವಿಪ್ರ ಸರಿಯುತಃ ॥೨೩೬॥**

"ನೀವಿಬ್ಬರೂ ಯುದ್ಧಾರ್ಥಿಗಳಾಗಿ ಪುಷ್ಕರ ಕ್ಷೇತ್ರಕ್ಕೆ ಬನ್ನಿರಿ'' ಹೀಗೆಂದು ಹೇಳಿದ ಮಾತುಗಳನ್ನು ಕೇಳಿ ಸಾತ್ಯಕಿಯು ವಿಪ್ರನ ಜೊತೆಯಲ್ಲಿಯೇ ನಡೆದನು.

**ಉಪೇತ್ಯ ತೌ ಹರೇರ್ವಚೋ ಜಗಾದ ಸಾತ್ಯಕಿರ್ಬಲೀ ।**
**ವಿಧಾಯ ತೌ ತೃಣೋಪಮೌ ಗಿರಾ ಜಗಾಮ ಕೇಶವಂ ॥೨೩೭॥**

ಬಲಿಷ್ಠನಾದ ಸಾತ್ಯಕಿಯು, ಹಂಸ–ಡಿಭಿಕರಿಗೆ ಶ್ರೀಕೃಷ್ಣನ ಮಾತನ್ನು ಹೇಳಿದನು ಅಷ್ಟೇ ಅಲ್ಲ ಅವರನ್ನು ತೃಣೀಕರಿಸಿ, ದ್ವಾರಾವತಿಗೆ ಬಂದು ಕೇಶವನನ್ನು ಕೂಡಿಕೊಂಡನು

**ತತಃ ಪುರೈವ ತಾವುಭೌ ದ್ವಿದಂ ಹರಸ್ವರೂಪಿಣಂ ।**
**ಸುದುಃಖವಾಸನಾಮಕಂ ಪ್ರಚಕ್ರತುಸ್ತೃಣೋಪಮಂ ॥೨೩೮॥**

ಅದಕ್ಕೂ ಮೊದಲೇ ಅಂದರೆ ಶ್ರೀಕೃಷ್ಣನಲ್ಲಿಗೆ ದೂತನನ್ನು ಕಳುಹಿಸುವ ಪೂರ್ವದಲ್ಲಿಯೇ ಆ ಇಬ್ಬರು (ಹಂಸ–ಡಿಭಿಕರು) ರುದ್ರ ಸ್ವರೂಪರಾದ ದುರ್ವಾಸರಂತ ಬ್ರಾಹ್ಮಣರನ್ನು ತೃಣಕ್ಕಿಂತಲೂ ಕಡೆಗಣಿಸಿ ಅಪಮಾನ ಮಾಡಿದ್ದರು.

**ವಿ. ವಿ. :** ಇಲ್ಲಿ ಶ್ರೀಮದಾಚಾರ್ಯರು 'ಸುದುಃಖವಾಸ' ಎಂಬ ಪದ ಬಳಸಿದ್ದಾರೆ. 'ಒಳ್ಳೆಯ ದುಃಖಗಳಿಗೆ ವಾಸಸ್ಥಾನನಾದ' ಅಂದರೆ ಇವರನ್ನು ಭಕ್ತಿಯಿಂದ ಆಶ್ರಯಿಸಿದವರಿಗೆ ಒಳ್ಳೆಯ ಸುಖ. ಉದಾ : ಕುಂತೀದೇವಿಯರ ಚರಿತೆ – ಇವರನ್ನು ಕೆಣಕಿದವರಿಗೆ ಅತಿಯಾದ ದುಃಖ – ಹಂಸ ಡಿಭಿಕರೇ ಸಾಕ್ಷಿ. ಈ ರೀತಿಯಾಗಿ ಚಮತ್ಕಾರವಾದ ಪದಗಳ ಬಳಕೆಯಿಂದ ಆನಂದತೀರ್ಥರು ದುರ್ವಾಸರ ಮಹತ್ವವನ್ನು ಹೆಚ್ಚಿಸಿದ್ದಾರೆ.

**ದುರ್ವಾಸರನ್ನು ಹೇಗೆ ಅಪಮಾನಿಸಿದರು?**

**ದಶತ್ರಿಕೈಃ ಶತೈರ್ವೃತೋ ಯತೀಶ್ವರೈಃ ಸ ಸರ್ವವಿತ್ ।**
**ವಿಪಾಟಿ ತಾತ್ಮ ಕೌಪಿನಾದಿ ಸರ್ವ ಮಾತ್ರಕೋ್ಯ ಭವತ್ ॥೨೩೯**

೩ × ೧೦ × ೧೦೦ ಅಂದರೆ ಮೂರುಸಾವಿರ ಯತೀಶ್ವರರು ಆ ದುರ್ವಾಸರ ಹತ್ತಿರಯಿದ್ದರು. ಅವರು ಮಹಾಜ್ಞಾನಿಗಳು. ಅಂತಹ ಯತಿಗಳಿಂದ ಕೂಡಿದ ದುರ್ವಾಸರ ಗುಂಪಿನವರ ಎಲ್ಲ ಕೌಪೀನಗಳನ್ನು ಹರಿದುಹಾಕಿದರು. ಕಮಂಡಲಗಳನ್ನು ಧ್ವಂಸ ಮಾಡಿದರು.

**ವಿ. ವಿ. :** ಇದುವರೆಗೆ ಅವರು ವಿಜಯಿಗಳಾಗಿ ಬಂದ ಅಹಂಕಾರವೇ ಕಾರಣ ಅದಕ್ಕನುಕೂಲವಾಗಿ 'ವಿನಾಶಕಾಲೇ ವಿಪರೀತ ಬುದ್ಧಿ' ಎನ್ನುವುದರ ಸಹಾಯ.

**ಇಷ್ಟಾದರೂ ದುರ್ವಾಸರು ಏಕೆ ಶಾಪ ಕೊಡಲಿಲ್ಲ?**

**ವರಾತ್ ಸ್ಮ ಸಂಭವಾದ ನೌ ನ ಶಾಪ ಶಕ್ತಿ ಮಾಸ್ಥಿತಾತ್ ।**
**ತತಃ ಸಮಸ್ತ ಭಂಜನೋ ರುಶಕ್ತಿ ಮಾಪ ಕೇಶವಂ ॥೨೪೦॥**

(ಹಿಂದೆ ನಾವು ನೋಡಿದಂತೆ) ಮಹಾರುದ್ರ ದೇವರ ವರಪ್ರಸಾದದಿಂದಲೇ ಇವರು ಹುಟ್ಟಿದವರು. ಅಲ್ಲದೇ ಅವರಿಂದಲೇ ಅಜೇಯತ್ವ ಮತ್ತು ಅವಧ್ಯತ್ವವನ್ನು ಪಡೆದವರು. ಅಂದಮೇಲೆ ಅವರು ಈಗ ಶಾಪವನ್ನು ಕೊಡಬಲ್ಲರೇ? ಅವರಿಗೆ ಅಂತಹ ಶಕ್ತಿಯಾದರೂ ಇರಬಲ್ಲುದೇ? ಅದಕ್ಕಾಗಿ ಕೊಡಲಿಲ್ಲ. ಅದಕ್ಕಾಗಿಯೇ 'ಎಲ್ಲರಿಗೂ ಮಿಗಿಲಾದ ಶಕ್ತಿಯುಳ್ಳ ಕೇಶವನ ಹತ್ತಿರ ಬಂದರು'.

**ಸ ತಾನ್ ಸಮರ್ಚ್ಯಮಾಧವಃ ಪ್ರದಾಯ ಚೋರುಮಾತ್ರಕಾಃ ।**
**ಯ ಯೌ ಚ ತೈಃ ಸಮನ್ವಿತೋ ವಧಾಯ ಸಾಲ್ವ ಪುತ್ರಯೋಃ ॥೨೪೧॥**

ಬಂದಂಥ ಯತಿಗಳೆಲ್ಲರಿಗೂ ಒಳ್ಳೆಯ ಆದರ ಸತ್ಕಾರಗಳಿಂದ ಶ್ರೀಕೃಷ್ಣನು ಪೂಜಿಸಿದನು. ಅವರಿಗೆ ಬೇಕಾದ ಒಳ್ಳೆಯ ಕೌಪೀನ–ಕಮಂಡಲ ಇತ್ಯಾದಿಗಳನ್ನು ಒದಗಿಸಿದನು. ನಂತರ ಅವರೆಲ್ಲರನ್ನೂ ಕೂಡಿಕೊಂಡೇ ಸಾಲ್ವಪುತ್ರರನ್ನು ವಧಿಸಲು ಯುದ್ಧಕ್ಕೆ ಸಿದ್ಧನಾಗಿ ಹೊರಟನು.

ಧರ್ಮವನ್ನು ರಕ್ಷಿಸುವುದು, ಅಧರ್ಮವನ್ನು ನಾಶ ಮಾಡುವುದು ಅವನ ಕರ್ತವ್ಯವಲ್ಲವೇ?

**ತಮತ್ರಿಜಂ ಹರಾತ್ಮಕಂ ಯತೋ ಹಿ ವೇದ ಮಾಗಧಃ ।**
**ತತೋಽ ತ್ಯಜತ್ ಸ್ವಶಿಷ್ಯಕೌ ನಿಶಮ್ಯ ತತ್ಪ್ರತೀಪ ಕೌ ॥೨೪೨॥**

ಜರಾಸಂಧನು ದುರ್ವಾಸ ಋಷಿಗಳನ್ನು ಚೆನ್ನಾಗಿ ಬಲ್ಲನು. ಅವರು ಅತ್ರಿ ಋಷಿಯ ಮಕ್ಕಳು. ರುದ್ರಾವೇಶವುಳ್ಳವರು, ಮಹಾಯತಿಗಳು. ಇದನ್ನು ಅವನು ಚೆನ್ನಾಗಿ ಅರಿತಿದ್ದನು. ತನ್ನ ಶಿಷ್ಯರು ಇಂಥವರನ್ನು ವಿರೋಧಿಸಿದರಲ್ಲಾ, ಎಂಬ ಉದ್ದೇಶದಿಂದ, ತನ್ನ ಶಿಷ್ಯರಾದರೂ ಅವರ ಸಹಾಯಕ್ಕೆ ಆತನು ಬರಲಿಲ್ಲ. ಉದಾಸೀನತೆಯಿಂದ ಸುಮ್ಮನಿದ್ದನು.

**ಹರೌ ತು ಪುಷ್ಕರಂ ಗತೇ ಮುನೀಶ್ವರೈಃ ಸಮನ್ವಿತೇ ।**
**ಸಮೀಯತುಶ್ಚ ತಾವುಭಾವಥಾತ್ರ ಹಂಸ ಡಾಭಿಕೌ ॥೨೪೩॥**

ಶ್ರೀಹರಿಯು ಮುನಿಗಳನ್ನು ಕೂಡಿಕೊಂಡು ತಮ್ಮ ಸೈನ್ಯದೊಂದಿಗೆ ಪುಷ್ಕರಕ್ಕೆ ಬಂದನು. ಅಷ್ಟರಲ್ಲಿ ಹಂಸ ಡಿಭಿಕರು ಕೂಡ ಅಲ್ಲಿ ಬಂದರು.

**ವಿ. ವಿ. :** ಇಲ್ಲಿ ಡಿಭಿಕ ಇದ್ದದ್ದು ಡೀಭಿಕ ಹೇಗಾಯಿತು? ಎಂಬುದಕ್ಕೆ ಕೆಲವರು ಛಂದಸ್ಸಿನ ದೃಷ್ಟಿಯಿಂದ ಕಾವ್ಯದಲ್ಲಿ ಒಂದು ಮಾತ್ರೆ ಕಡಿಮೆಯಾಗಬಾರದು ಎಂಬ ದೃಷ್ಟಿಯಿಂದ ಮಾಡಿರಬಹುದು ಎಂದು ಅಭಿಪ್ರಾಯಪಡುವುದುಂಟು. ಆದರೆ –

ಆಚಾರ್ಯರು ಅಷ್ಟು ದಡ್ಡರಲ್ಲ. ಅವರು ಅಕ್ಷರಗಳಿಗೆ ಮಾತ್ರೆಗಳಿಗೆ ಹುಡುಕಾಡುವವರಲ್ಲ ಅಕ್ಷರಾಭಿಮಾನಿ ದೇವತೆಗಳೇ ಅವರ ಸಮ್ಮುಖದಲ್ಲಿ ನಿಲ್ಲುವಾಗ ಅವರಿಗೆ ಕಾವ್ಯಕ್ಕೆ ಕೊರತೆಯೇ?

ಅಂದರೆ ಇಲ್ಲಿ ಡಿಭಿಕನು ಕೂಡ ವಿಕಾರ ಹೊಂದಿ ಡಿಭೀಕನಾದನು ಅರ್ಥಾತ್ ಅವನು ತನ್ನ ಉಳಿವನ್ನೇ ಅಳಿಸಿಕೊಂಡನು ಎಂಬುದನ್ನು ಸೂಚಿಸುವದಕ್ಕಾಗಿಯೇ ಆಚಾರ್ಯರು ಹೀಗೆ ಪ್ರಯೋಗಿಸಿದ್ದುಂಟು.

**ಸ ಬ್ರಹ್ಮದತ್ತ ನಾಮಕೋಽತ್ರ ತತ್ಪಿತಾಭ್ಯುಪಾಯಯೌ ।**
**ಸಮಾಗತೌ ಚ ಭೂತಕೌ ಶಿವಸ್ಯ ಯೌ ಪುರಸ್ಕರೌ ॥೨೪೪॥**

ಹಂಸ ಡಿಭಿಕರ ತಂದೆಯಾದ ಬ್ರಹ್ಮದತ್ತನೂ ಅಲ್ಲಿಗೆ ಬಂದನು. ಶಿವನಿಗೆ ಪ್ರಿಯವಾದ ಇತರ ಭೂತಗಳೂ ಅಲ್ಲಿಗೆ ಬಂದವು.

**ವಿಚಕ್ರನಾಮಕೋಽಸುರಃ ಪುರಾ ವಿರಿಂಚ ತೋ ವರಂ ।**
**ಅವಧ್ಯತಾಮಜೇಯತಾಮವಾಪ್ಯ ಬಾಧತೇ ಸುರಾನ್ ॥೨೪೫॥**

ಪೂರ್ವದಲ್ಲಿ ವಿಚಕ್ರನಾಮ ಅಸುರನಿದ್ದನು. ಅವನು ಬ್ರಹ್ಮನ ವರಬಲದಿಂದ ಅಜೇಯನು ಅವಧ್ಯನೂ ಆಗಿದ್ದನು. ಅದರಿಂದ ಅವನು ಅನೇಕ ದೇವತೆಗಳಿಗೆ ಪೀಡಿಸುತ್ತಿದ್ದನು.

**ಸ ಚಾಭದತ್ತಯೋಃ ಸಖಾ ಸಹಾಯ ಕಾಮ್ಯ ಯೋಗಮತ್ ।**
**ಹಿಡಿಂಬ ರಾಕ್ಷಸೋಽಪಿ ಯಃ ಪುರಾಪ ಶಂಕರಾದ್ವರಂ ॥೨೪೬॥**

**ನ ಜೇಯಸೇ ನ ವಧ್ಯಸೇ ಕುತಶ್ಚನೇತಿ ತೋಷಿತಾತ್ ।**
**ಸ ಚೈತಯೋಃ ಸಖಾಭವತ್ ಸಮಾಜಗಾಮ ತತ್ರ ಚ ॥೨೪೭॥**

ಅವರು ಈಗ ಹಂಪ ಡಿಭಿಕರಿಗೆ ಮಿತ್ರನಾಗಿ ಸಹಾಯ ಮಾಡುವ ಇಚ್ಛೆಯಿಂದ ಬಂದಿದ್ದಾರೆ ಅದಲ್ಲದೆ ಇನ್ನೊಬ್ಬನು ಹಿಡಿಂಬನೆಂಬ ರಾಕ್ಷಸನು ಅವನು ಕೂಡ ಶಂಕರನ ವರದಿಂದ ಪ್ರಬಲನಾದವನು. ಅವನು ಕೂಡ ಮಹಾರುದ್ರರನ್ನು ಸಂತೋಷಪಡಿಸಿ ಅಜೇಯ ಮತ್ತು ಅವಧ್ಯನಾಗಿದ್ದಾನೆ. ಅವನು ಸಹ ಹಂಸ ಡಿಭಿಕರಿಗೆ ಮಿತ್ರನು. ಅವನೂ ಬಂದಿದ್ದಾನೆ.

**ಅಕ್ಷೌಹಿಣೀದಶಾತ್ಮಕಂ ಬಲಂ ತಯೋರ್ಬಭೂವ ಹ ।**
**ವಿಚಕ್ರಗಂ ಷಡಾತ್ಮಕಂ ತಥೈಕಮೇವ ರಾಕ್ಷಸಂ ॥೨೪೮॥**

ಹಂಸ ಡಿಭಿಕರಿಗೆ ಹತ್ತು ಅಕ್ಷೌಹಿಣೀ ಸೈನ್ಯ. ವಿಚಕ್ರನಿಗೆ ಆರು ಅಕ್ಷೌಹಿಣೀ ಮತ್ತು ಹಿಡಿಂಬನಿಗೆ ಒಂದು ಅಕ್ಷೌಹಿಣೀ ಸಿದ್ಧವಾಗಿದೆ.

**ದ್ವಿರಷ್ಟ ಸೇನಯಾ ಯುತೌ ಸಹೈಕಯೈವ ತೌ ನೃಪೌ ।**
**ಸಮೀಯತುರ್ಯುಧೇ ಹರಿಂ ಹರಿಶ್ಚ ತೌ ಸಸಾರ ಹ ॥೨೪೯॥**

ಎರಡೆಂಟು ಅಂದರೆ ಹದಿನಾರು ಅಕ್ಷೌಹಿಣೀ ಮತ್ತುಒಂದು, ಅಂದರೆ ಒಟ್ಟು ಹದಿನೇಳು ಅಕ್ಷೌಹಿಣೀ ಸೈನ್ಯದಿಂದ ಸಜ್ಜಿತರಾಗಿ ಹಂಸ ಡಿಭಿಕರು ಶ್ರೀಕೃಷ್ಣನೊಂದಿಗೆ ಯುದ್ಧಕ್ಕೆ ಹೊರಟಿದ್ದಾರೆ. ಶ್ರೀಕೃಷ್ಣ ಅವರನ್ನು ಎದುರಿಸಲು ಬಂದಿದ್ದಾನೆ.

**ಅಥ ದ್ವಯೋರ್ದ್ವಯೋ ರಭೂದ್ರಣೋ ಭಯಾನಕೋ ಮಹಾನ್ ।**
**ಹರಿರ್ವಿಚಕ್ರ ಮೇಯಿವಾನ್ ಬಲಶ್ಚ ಹಂಸ ಮುದ್ಧತಂ ॥೨೫೦॥**

ಆಗ ಅವರಿಬ್ಬರಲ್ಲಿ ಪರಸ್ಪರ ರಣರಂಗದಲ್ಲಿ ಬಹು ಭಯಾನಕವಾಗಿ ಯುದ್ಧ ಪ್ರಾರಂಭವಾಯಿತು. ಶ್ರೀಕೃಷ್ಣನು ವಿಚಕ್ರನೊಂದಿಗೆ ಹೋರಾಡಿದನು. ಬಲರಾಮನು ಹಂಸನೆಂಬ ಅಸುರನಿಗೆ ಎದುರಾದನು.

**ತದಾಸ್ಯ ಚಾನುಜಂ ಯಯೌ ಶಿನಿಪ್ರವೀರ ಆಯುಧೀ ।**
**ಗದಶ್ಚ ನಾಮತೋಽನುಜೋ ಹರೇಃ ಸರೋಹಿಣೀ ಸುತಃ ॥೨೫೧॥**

ಹಂಸನ ತಮ್ಮನಾದ ಡಿಭಿಕನೊಂದಿಗೆ ವೀರನಾದ ಸಾತ್ಯಕೀ, ಮತ್ತು ಗದ ಕೂಡಿ ಯುದ್ಧಕ್ಕೆ ನಿಂತರು. ಈ 'ಗದ'ನು ಶ್ರೀಕೃಷ್ಣನ ತಮ್ಮನೇ, ರೋಹಿಣಿಯ ಮಗನು.

**ಪುರಾ ಸ ಚಂಡಕೋ ಗಣೋ ಹರೇರ್ನಿವೇದಿ ತಾಶನಃ ।**
**ಸಮೂಹ್ಯಯುದ್ರಣಾಯ ವೈ ತಯೋಃ ಸ ತಾತಮೇವ ಹಿ ॥೨೫೨॥**

ಆ ಚಂಡನು, ಜಯ ವಿಜಯರಂತೆ – ಶ್ರೀಹರಿಗೆ ಒಬ್ಬ ದ್ವಾರಪಾಲಕನಾಗಿದ್ದನು. ಆ ಚಂಡನು ಇಂದು ಈ ಯುದ್ಧ ಭೂಮಿಯಲ್ಲಿ ಬ್ರಹ್ಮದತ್ತನನ್ನು (ತಾತ) ಎದುರಿಸಿದ್ದಾನೆ.

**ಅಕ್ಷೌಹಿಣೀತ್ರಯಾನ್ವಿತಾಃ ಸಮಸ್ತ ಯಾದವಾಸ್ತದಾ ।**
**ತ್ರಿಲೋಚನಾನುಗೌ ಚ ತೌ ನ್ಯವಾರಯೆನ್ ಸ ರಾಕ್ಷಸೌ ॥೨೫೩॥**

ಮೂರು ಅಕ್ಷೌಹಿಣೀ ಸೈನ್ಯದಿಂದ ಸಮಸ್ತ ಯಾದವರು ಮುಕ್ಕಣ್ಣನ ಭೃತ್ಯರಾದ ಸಮಸ್ತ ಭೂತಗಳನ್ನು ಯುದ್ಧದಲ್ಲಿ ತಡೆದರು.

**ಹರಿರ್ವಿಚಕ್ರ ಮೋಜಸಾ ಮಹಾಸ್ತ್ರಶಸ್ತ್ರ ವರ್ಷಿಣಂ ।**
**ವಿವಾಹನಂ ನಿರಾಯುಧಂ ಕ್ಷಣಾಚ್ಚಕಾರ ಸಾಯಕೈಃ ॥೨೫೪॥**

ಮಹಾ ಅಸ್ತ್ರ–ಶಸ್ತ್ರಗಳಿಂದ ಮಳೆಯನ್ನೇ ಸುರಿಸುತ್ತಿರುವ ವಿಚಕ್ರನನ್ನು ಚಕ್ರಧಾರಿಯಾದ ಶ್ರೀಕೃಷ್ಣನು ಕ್ಷಣಮಾತ್ರದಲ್ಲಿ ನಿರಾಯುಧನನ್ನಾಗಿಯೂ, ನಿರಾಯುಧನನ್ನಾಗಿಯೂ ಮಾಡಿದನು.

**ಪುನಶ್ಚ ಪಾದಪಾನ್ ಗಿರೀನ್ ಪ್ರಮುಂಚತೋಽರಿಣಾರಿಹಾ ।**
**ಶಿರೋ ಜಹಾರ ದೇವತಾ ವಿನೇದುರತ್ರ ಹರ್ಷಿತಾಃ ॥೨೫೫॥**

ಪುನಃ ಆ ರಾಕ್ಷಸನು, ತನ್ನ ದೈತ್ಯ ಬಲದಿಂದ ಗಿಡಗಳನ್ನು, ಬೆಟ್ಟಗಳನ್ನು ತಂದು ಶ್ರೀಹರಿಯ ಮೇಲೆ ಎಸೆಯುತ್ತಿದ್ದನು. ಅಂತಹ ಅರಿಯಾದವನನ್ನು, ಶ್ರೀಹರಿಯು ತನ್ನ

ಸುದರ್ಶನದಿಂದ ಅವನ ಶಿರಸ್ಸನ್ನೇ ಹಾರಿಸಿದನು. ಇದನ್ನು ಕಂಡ ಎಲ್ಲ ದೇವತೆಗಳು ಹರ್ಷಿತರಾದರು.

**ಪ್ರಸೂನ ವರ್ಷಿಭಿಃ ಸ್ತುತಶ್ಚತುರ್ಮುಖಾದಿಭಿಃ ಪ್ರಭುಃ ।**
**ಸಸಾರ ತೌ ಹರಾನುಗೌ ಪ್ರಭಕ್ಷರೌ ಸ ಸಾತ್ವತಾಂ ॥೨೫೬॥**

ಬ್ರಹ್ಮಾದಿ ದೇವತೆಗಳು ಪುಷ್ಪವೃಷ್ಟಿಯನ್ನು ಮಾಡುತ್ತ ಪ್ರಭುವಾದ ಶ್ರೀಕೃಷ್ಣನನ್ನು ತುತಿಸಿದರು. ಆಗ ಸಮಸ್ತ ಯಾದವರನ್ನೇ ಭಕ್ಷಣ ಮಾಡತಕ್ಕ ಸಾಮರ್ಥ್ಯವುಳ್ಳ ಮಹಾ ರುದ್ರದೇವರ ಅನುಚರರಾದ ಭೂತಗಳೊಂದಿಗೆ ಶ್ರೀಕೃಷ್ಣನು ಎದುರಾದನು.

**ಸಮಸ್ತ ಯಾದವಾನ್ರಣೇ ವಿಧೂಯ ತೌ ಜನಾರ್ದನಂ ।**
**ಉಪೇತ್ಯ ಚಾಂಸಗೌ ಹರೇರದಂಶತಾಂ ಸುಕರ್ಣಕೌ ॥೨೫೭॥**

ಆ ಭೂತಗಳು ಸಮಸ್ತ ಯಾದವರನ್ನು ರಣರಂಗದಿಂದ ಓಡಿಸಿದವು. ಅಂಗವಿಕಲ ರಾದ ಕೆಲವು ಭೂತಗಳು ಶ್ರೀಕೃಷ್ಣನ ಸುಂದರವಾದ ಕಿವಿಗಳನ್ನು ಕಚ್ಚಹತ್ತಿದವು.

**ಸ ತೌ ಭುಜಪ್ರವೇಗತೋ ವಿಧೂಯ ಶಂಕರಾಲಯೇ ।**
**ನ್ಯಪಾತ ಯದ್ಬಲಾರ್ಣವೋಽಮಿತಸ್ಯ ಕಿಂ ತದುಚ್ಯತೇ ॥೨೫೮॥**

ಬಲಾರ್ಣವನಾದ ಶ್ರೀಕೃಷ್ಣನು ತನ್ನ ಬಾಹುಗಳನ್ನು ಕೊಡಹಿ (ಝಾಡಿಸಿ) ದಾಗ ಅವುಗಳ ವೇಗ ಮತ್ತು ರಭಸಕ್ಕೆ ಆ ಭೂತಗಳು ಶಂಕರನ ಆಲಯವಾದ ಕೈಲಾಸ ಗಿರಿಯಲ್ಲಿ ಹೋಗಿ ಬಿದ್ದವು. ಅಮಿತ ಶಕ್ತಿಯುಳ್ಳ ಶ್ರೀಕೃಷ್ಣನಿಗೆ ಈ ಕಾರ್ಯ ಮಾಡಿದ್ದು ಏನು ಆಶ್ಚರ್ಯವೇ?

**ಪ್ರಭಕ್ಷಯಂತಮೋಜಸಾ ಹಿಡಿಂಬಮುದ್ಧತಂ ಬಲಂ ।**
**ಸಹೋಗ್ರಸೇನಕೋ ಯಯೌ ಪಿತಾಹರೇಃ ಶರಾನಾ ಕ್ಷಿಪನ್ ॥೨೫೯॥**

ಬಲ ಪ್ರಯೋಗದಿಂದ ಹಿಡಿದು ಯಾದವರನ್ನು ತಿನ್ನುತ್ತಿರುವ ಹಿಡಿಂಬನನ್ನು ಕಂಡು, ಶ್ರೀಕೃಷ್ಣನ ತಂದೆಯಾದ ವಸುದೇವನ ಸಹಿತನಾಗಿ ಉಗ್ರಸೇನನು ಅಮೋಘವಾದ ಬಾಣ ಬತ್ತಳಿಕೆಗಳಿಂದ ಹಿಡಿಂಬನಿಗೆ ಎದುರಾದನು.

**ತಯೋ ರಥೌ ಸಹಾಯುಧೌ ಪ್ರಭಕ್ಷ್ಯ ರಾಕ್ಷಸೋ ಬಲೀ ।**
**ಪ್ರಗೃಹ್ಯ ತಾವ ಭಾಷತ ಪ್ರಯಾ ತಮಾಶು ಮೇ ಮುಖಂ ॥೨೬೦॥**

ಆ ಬಲಿಷ್ಠನಾದ ರಾಕ್ಷಸನು ಆ ಇಬ್ಬರ ರಥ, ಆಯುಧ ಇತ್ಯಾದಿಗಳನ್ನು ತಿಂದು, ಮುರಿದು ಹಾಳು ಮಾಡಿದನು. ಅವರಿಬ್ಬರನ್ನೂ ಹಿಡಿದು, "ನನ್ನ ಬಾಯಿಯಲ್ಲಿ ಬನ್ನಿರಿ" ಎಂದು ಮುಖದ ಸಮೀಪಕ್ಕೆ ಒಯ್ದನು.

**ತದಾ ಗದಾವರಾಯುಧಃ ಸಹೈವ ಹಂಸ ಭೂಭೃತಾ ।**
**ಪ್ರಯುದ್ಧ್ಯ ಮಾನ ಆಯಯೌ ವಿಹಾಯ ತಂ ಹಲಾಯುಧಃ ॥೨೬೧॥**

ಗದಾಯುದ್ಧದಲ್ಲಿ ಶ್ರೇಷ್ಠನಾದ ಬಲರಾಮನು, ಆಗ 'ಹಂಸ' ರಾಕ್ಷಸನ ಜೊತೆಯಲ್ಲಿ ಹೋರಾಡುತ್ತಿದ್ದನು. ಉಗ್ರಸೇನ ಮತ್ತು ವಸುದೇವರ ಸ್ಥಿತಿಯನ್ನು ಕಂಡ ಕೂಡಲೇ ಆತನು ಹಂಸನನ್ನು ಬಿಟ್ಟು ಹಿಡಿಂಬನ ಸಮೀಪಕ್ಕೆ ಬಂದನು.

**ತಮಾಗತಂ ಸಮೀಕ್ಷ್ಯ ತೌ ವಿಹಾಯ ರಾಕ್ಷಸಾಧಿಪಃ ।**
**ಉಪೇತ್ಯ ಮುಷ್ಟಿನಾ ಹನದ್ಬಲಂ ಸವಕ್ಷಸಿ ಕ್ರುಧಾ ॥೨೬೨॥**

ಬಲರಾಮನು ಬರುತ್ತಿರುವುದನ್ನು ಕಂಡು, ರಾಕ್ಷಸಾಧಿಪನಾದ ಹಿಡಿಂಬನು ಉಗ್ರಸೇನ ಮತ್ತು ವಸುದೇವರನ್ನು ಬಿಟ್ಟು, ಬಲರಾಮನೊಡನೆ ಯುದ್ಧಕ್ಕೆ ಬಂದನು. ಪರಸ್ಪರ ಮುಷ್ಟಿಯುದ್ಧ ಪ್ರಾರಂಭಿಸಿದರು. ಬಲರಾಮ ತನ್ನ ಬಲವಾದ ಮುಷ್ಟಿಯಿಂದ ರಾಕ್ಷಸನ ವಕ್ಷಸ್ಥಲಕ್ಕೆ ಸಿಟ್ಟಿನಿಂದ ಹೊಡೆದನು.

**ಉಭೌ ಹಿ ಬಾಹು ಶಾಲಿನಾವಯುಧ್ಯತಾಂ ಚ ಮುಷ್ಟಿಭಿಃ ।**
**ಚಿರಂ ಪ್ರಯುಧ್ಯ ತಂ ಬಲೋಽಗ್ರಹೀತ್ಯ ಜಂಘಯೋರ್ವಿಭುಃ ॥೨೬೩॥**

ಇಬ್ಬರೂ ಬಾಹು ಬಲವುಳ್ಳವರು. ಇಬ್ಬರೂ ಮುಷ್ಟಿಯುದ್ಧದಲ್ಲಿ ಪ್ರವೀಣರು. ಬಹಳ ಹೊತ್ತಿನ ವರೆಗೆ ಇಬ್ಬರೂ ಮುಷ್ಟಿಯುದ್ಧದಿಂದ ಹೋರಾಡಿದರು. ಕೊನೆಗೆ ಬಲರಾಮನು, ಆ ಹಿಡಿಂಬನನ್ನು ತನ್ನ ಮೊಳಕಾಲು ಮಧ್ಯೆ ಗಟ್ಟಿಯಾಗಿ ಹಿಡಿದನು.

**ಅಥೈನ ಮುದ್ಧೃತಂ ಬಲಾದ್ಬಲಃ ಸ ದೂರ ಆಕ್ಷಿಪತ್ ।**
**ಪಪಾತ ಪಾದಯೋಜನೇ ಸ ನಾಜಗಾಮ ತಂ ಪುನಃ ॥೨೬೪॥**

ಆ ಯುದ್ಧದಲ್ಲಿ ಬಲರಾಮನು, ಆ ರಾಕ್ಷಸನನ್ನು ಬಹು ಕಾಲದ ವರೆಗೆ ಈಡಾಡಿದನು. ಕೊನೆಗೆ ಅವನನ್ನು ಬಹು ದೂರದಲ್ಲಿ ಒಗೆದನು. ಅದರಿಂದ ಅವನು ಪುಷ್ಕರದ ಯುದ್ಧಭೂಮಿಯಿಂದ 'ಪಾದಯೋಜನೆ' ದೂರದಲ್ಲಿ ಬಿದ್ದನು. ಅವನು ನಾಚಿಕೆಯಿಂದ ಓಡಿ ಹೋದವನು ಪುನಃ ಬರಲೇಇಲ್ಲ.

**(ಪಾದ ಯೋಜನೆ ಅಂದರೆ ಎಷ್ಟು?)**

೨ ಮೈಲು.

**ವಿಹಾಯ ಸೈನಿಕಾಂಶ್ಚ ತೌ ನೃಪೌ ಯಯೌ ವನಾಯ ಸಃ ।**
**ನಿಹತ್ಯ ತಸ್ಯ ರಾಕ್ಷಸಾನ್ ಹಲಾಯುಧೋ ನನಾದ ಹ ॥೨೬೫॥**

ಆ ಹಿಡಿಂಬನು ತನ್ನ ಸೈನಿಕರನ್ನು, ರಾಜರಾದ ಹಂಸ – ಡಿಭಿಕರನ್ನು ಬಿಟ್ಟು ವನವನ್ನು ಸೇರಿದನು. ಬಲರಾಮನು ಅವನ ರಾಕ್ಷಸ ಸಮೂಹವನ್ನು ನಾಶಮಾಡಿ ಜಯಕಾರದ ಧ್ವನಿಗೈದನು.

**ಗದಸ್ತು ಸಾಲ್ವ ಭೂಭೃತಾ ವಯೋಗತೇನ ಯೋಧಯೆನ್ ।**
**ವಿವಾಹನಂ ನಿರಾಯುಧಂ ಚಕಾರ ಸೋಽಪ್ಯಪಾದ್ರವತ್ ॥೨೬೬॥**

'ಗದ' ಎಂಬ ಯಾದವನು ವಯೋವೃದ್ಧನಾದ ಬ್ರಹ್ಮದತ್ತನೊಡನೆ ಯುದ್ಧ ಮಾಡಿದನು. ಬ್ರಹ್ಮದತ್ತನು ರಥವನ್ನು ಕಳೆದುಕೊಂಡು, ನಿರಾಯುಧನಾಗಿ ಯುದ್ಧ ಭೂಮಿಯಿಂದ ಓಡಿಹೋದನು.

**ಸುತೇನ ತಸ್ಯ ಕನ್ಯಸಾ ಯುಯೋಧ ಸಾತ್ಯಕೀ ರಥೀ ।**
**ವರಾಸ್ತ್ರ ಶಸ್ತ್ರ ಯೋಧಿನೌ ವಿಜಹ್ರತುಶ್ಚ ತಾವು ಭೌ ॥೨೬೭॥**

ರಥಿಕನಾದ ಸಾತ್ಯಕಿಯು, ಬ್ರಹ್ಮದತ್ತನ ಮಗನಾದ ಡಿಭಿಕನೊಡನೆ ಹೋರಾಡಿದನು. ಇಬ್ಬರೂ ಶ್ರೇಷ್ಠವಾದ ಅಸ್ತ್ರ ಶಸ್ತ್ರಗಳೊಂದಿಗೆ ಪರಸ್ಪರ ಯುದ್ಧ ಮಾಡಿದರು.

**ಚಿರಂ ಪ್ರಯುಧ್ಯ ಸಾತ್ಯಕಿಃ ಸ ಹಂಸಕನ್ಯಸಾ ಬಲೀ ।**
**ಶತಂ ಸಪಂಚಕಂ ಶೇ ಚಕರ್ತ ತಸ್ಯ ಧನ್ವಿನಾಂ ॥೨೬೮॥**

ಸಾತ್ಯಕಿ ಮತ್ತು ಡಿಭಿಕರ ನಡುವೆ ಬಹಳ ಸಮಯ ಯುದ್ಧವಾಯಿತು. ಡಿಭಿಕನು ನೂರಾಐದು ಬಾಣಗಳನ್ನು ಪ್ರಯೋಗಿಸಿದರೂ ಸಾತ್ಯಕಿಯು ಅವೆಲ್ಲವುಗಳನ್ನು ಬಿಲ್ಲಿನ ಸಹಿತವಾಗಿ ತುಂಡರಿಸಿದನು.

**ಸ ಖಡ್ಗ ಚರ್ಮಭೃದ್ರಣೇಽಭ್ಯಯಾತ್ ಸುತಾತ್ಮ ಜಂ ಶನೇಃ ।**
**ಸ ಚೈನ ಮಭ್ಯಯಾತ್ತಥಾ ವರಾಸಿ ಚರ್ಮಭೃದ್ವಿಭೀಃ ॥೨೬೯॥**

ಬಾಣಗಳನ್ನು ಕಳೆದುಕೊಂಡ ಮೇಲೆ ಡಿಭಿಕನು ಚರ್ಮ, ಖಡ್ಗಗಳನ್ನು ತೆಗೆದುಕೊಂಡು ಸಾತ್ಯಕಿಯೊಂದಿಗೆ (ಶಿನಿಯ ಮಗ) ಯುದ್ಧಕ್ಕೆ ಬಂದನು. ಸಾತ್ಯಕಿಯು ಕೂಡ ಅಷ್ಟೇ ಶ್ರೇಷ್ಠವಾದ ಮತ್ತು ತೀಕ್ಷ್ಣವಾದ ಚರ್ಮ ಖಡ್ಗಗಳಿಂದ ಎದುರಾದನು.

**ದ್ವಿಷೋಡಶಪ್ರಭೇದಕಂ ವರಾಸಿಯುದ್ಧಮಶ್ರಮೌ ।**
**ಪ್ರದರ್ಶ್ಯ ನಿರ್ವಿಶೇಷ ಕಾವುಭೌ ವ್ಯವಸ್ಥಿತೌ ಚಿರಂ ॥೨೭೦॥**

ಮೂವತ್ತೆರಡು ಪ್ರಭೇದಗಳುಳ್ಳ ಖಡ್ಗ ಯುದ್ಧವನ್ನು ಇಬ್ಬರು ಯೋಧರು ಆಯಾಸವಿಲ್ಲದೆ ಪ್ರದರ್ಶಿಸಿದರು. ಆದರೂ ಯಾರೂ ಸೋಲಲಿಲ್ಲ. ಬಹು ಕಾಲನ ವರೆಗೆ ಅವರ ಯುದ್ಧವು ವ್ಯವಸ್ಥಿತವಾಗಿಯೇ ನಡೆಯಿತು.

**ಪರಸ್ಪರಾಂತರೇಷಿಣೌ ನ ಚಾಂತರಂ ವ್ಯಪಶ್ಯ ತಾಂ ।**
**ತತೋ ವಿಹಾಯ ಸಂಗರಂ ಗತೌ ನಿರರ್ಥಕಂ ತ್ವಿತಿ ॥೨೭೧॥**

ಒಬ್ಬರನ್ನೊಬ್ಬರು ಸೋಲಿಸಲು, ಅದಕ್ಕಾಗಿ ಅವಕಾಶ ಪಡೆಯಬೇಕೆಂದು ಪ್ರಯತ್ನಿಸಿದರು. ಅದು ಸಾರ್ಥಕವಾಗಲಿಲ್ಲ. ಇನ್ನು ಯುದ್ಧವು ನಿರರ್ಥಕ ಎಂದು ತಿಳಿದು ಇಬ್ಬರೂ ಅದನ್ನು ಬಿಟ್ಟುಕೊಟ್ಟರು.

**ತತಃ ಸ ಹಂಸ ಸಂಯುತೋ ಜಗಾಮಯೋದ್ಧುಮಚ್ಯುತಂ ।**
**ಕ್ಷಣೇನ ತೌ ನಿರಾಯುಧೌ ಚಕಾರ ಕೇಶವಃ ಶರೈಃ ॥೨೭೨॥**

ಅನಂತರ ಡಿಭಿಕನು ಯುದ್ಧದಲ್ಲಿ ಸಹಾಯ ಮಾಡುವುದಕ್ಕಾಗಿ ಹಂಸನ ಹತ್ತಿರ ಹೋದನು. ಹಂಸ – ಡಿಭಿಕರು ಕೂಡಿಕೊಂಡು ಅಚ್ಯುತನೊಂದಿಗೆ ಯುದ್ಧ ಮಾಡಿದರು. ಕ್ಷಣಾರ್ಧದಲ್ಲಿ ಕೇಶವನು ತನ್ನ ಬಾಣಗಳಿಂದ ಅವರನ್ನು ನಿರಾಯುಧರನ್ನಾಗಿ ಮಾಡಿದನು.

**ಹತಂ ಚ ಸೈನ್ಯ ಮೇತಯೋಶ್ಚತುರ್ಥಭಾಗ ಶೇಷಿತಂ ।**
**ಕ್ಷಣೇನ ಕೇಶವೇನ ತದ್ಭಯೊ ದಹೇಯು ತುಶ್ಚ ತೌ ॥೨೭೩॥**

ಹಂಸ ಡಿಭಿಕರ ಸೈನ್ಯ ಹತವಾಗಿ, ಕೇವಲ ಕಾಲುಭಾಗ ಮಾತ್ರ ಉಳಿಯಿತು. ಇದನ್ನು ನೋಡಿದ ಹಂಸ ಡಿಭಿಕರು ಶ್ರೀಕೃಷ್ಣನ ಭೀತಿಯಿಂದ ಕೂಡಲೇ ಓಡಿಹೋದರು.

**ಸ ಪುಷ್ಕರೇಕ್ಷಣಸ್ತದಾ ಸುರೈರ್ನುತೋಽಥ ಪುಷ್ಕರೇ ।**
**ಉವಾಸ ತಾಂ ನಿಶಾಂ ಪ್ರಭುಃ ಸಯಾದವೋಽಮಿತಪ್ರಭಃ ॥೨೭೪॥**

ಈ ಯುದ್ಧದಲ್ಲಿ ಜಯ ಸಂಪಾದಿಸಿದ್ದನ್ನು ಕಂಡು ದೇವತೆಗಳೆಲ್ಲರೂ ಶ್ರೀಕೃಷ್ಣನನ್ನು ಸ್ತುತಿಸಿದರು. ಪುಷ್ಕರಾಕ್ಷನು, ಅಮಿತವಾದ ಪ್ರಭಾವವುಳ್ಳವನು, ಯಾದವರಿಗೆ ಪ್ರಭುವಾದ ಶ್ರೀಹರಿಯು ಅಂದು ಅಲ್ಲಿ ಪುಷ್ಕರ ಕ್ಷೇತ್ರದಲ್ಲಿಯೇ ವಾಸ ಮಾಡಿದನು.

**ಪರೇ ದಿನೇ ಜನಾರ್ದನೋ ನೃಪಾತ್ಮಜೌ ಪ್ರವಿದ್ರುತೌ ।**
**ಯಮಸ್ವಸುಸ್ತವೇ ಪ್ರಭುಃ ಸಮಾಸಸಾದ ಪೃಷ್ಠತಃ ॥೨೭೫॥**

ಮಾರನೆಯ ದಿನ ಜನಾರ್ದನನು, ಓಡಿಹೋದ ರಾಜರನ್ನು ಹುಡುಕುತ್ತ ಯಮುನಾ ನದಿಯ ದಂಡೆಯನ್ನು ಹಿಡಿದು ಅವರ ಬೆನ್ನು ಹತ್ತಿದನು.

**ಸ ರೌಹಿಣೇಯ ಸಂಯುತಃ ಸಮನ್ವಿತಶ್ಚ ಸೇನಯಾ ।**
**ಸ್ವಶಿಷ್ಟ ಸೇನಯಾ ವೃತೌ ಪಲಾಯಿನಾವವಾರಯತ್ ॥೨೭೬॥**

ಬಲರಾಮನನ್ನು ಕೂಡಿಕೊಂಡು ತನ್ನ ಸೇನೆಯಿಂದ ಸಜ್ಜಿತನಾದ ಶ್ರೀಕೃಷ್ಣನು ಉಳಿದ ಅಲ್ಪ ಸೇನೆಯಿಂದ ಓಡುತ್ತಿರುವ ಹಂಸ ಡಿಭಿಕರನ್ನು ತಡೆದನು.

**ನಿವೃತ್ಯ ತೌ ಸ್ವಸೇನಯಾ ಶರೋತ್ತಮೈರ್ವವರ್ಷತುಃ ।**
**ಸು ಕೋಪಿತೌ ಸಮಸ್ತ ಶೋ ಯುದೂನವಾರ್ಯ ಪೌರುಷೌ ॥೨೭೭॥**

ಹಂಸ ಡಿಭಿಕರು ಹಿಂದೆ ಬರತಕ್ಕ ಸೈನ್ಯವನ್ನು ಎದುರಿಸಿದರು. ಪರಾಕ್ರಮಿಗಳಿಂದ ಸಿಟ್ಟಿನಿಂದ ಯಾದವರ ಸೇನೆಯ ಮೇಲೆ ಶರವರ್ಷವನ್ನು ಕರೆದರು.

**ಅಥಾ ಸಸಾದ ಹಂಸಕೋ ಹಲಾಯುಧಂ ಮಹಾಧನುಃ ।**
**ಅನಂತರೋಽಸ್ಯ ಸಾತ್ಯಕಿಂ ಗದಂ ಚ ಸರ್ವಸೈನಿಕಾನ್ ॥೨೭೮॥**

ಹಂಸನೆಂಬ ರಾಕ್ಷಸನು ಮಹಾಧನುವಾದ ಬಲರಾಮನಿಗೆ ಎದುರಾದನು. ಅವನ ತಮ್ಮನಾದ ಡಿಭಿಕನು, ಸಾತ್ಯಕಿ, ಗದ ಮತ್ತು ಸಮಸ್ತ ಸೈನ್ಯದೊಂದಿಗೆ ಯುದ್ಧ ಮಾಡಿದನು.

**ಸ ಸಾತ್ಯಕಿಂ ನಿರಾಯುಧಂ ವಿವಾಹನಂ ವಿವರ್ಮಕಂ ।**
**ವ್ಯಧಾದ್ಗದಂ ಚ ತೌ ರಣಂ ವಿಹಾಯ ಹಾಪಜಗ್ಮತುಃ ॥೨೭೯॥**

ಆ ಡಿಭಿಕನು ಸಾತ್ಯಕಿ ಹಾಗೂ ಗದ ಇಬ್ಬರನ್ನು ನಿರಾಯುಧರನ್ನಾಗಿ ಮಾಡಿದನು. ಇಬ್ಬರ ರಥಗಳು ಪುಡಿಪುಡಿಯಾದವು. ಇಬ್ಬರೂ ಕವಚಗಳನ್ನು ಕಳೆದುಕೊಂಡರು. ಕೊನೆಗೆ ಇಬ್ಬರೂ ಯುದ್ಧಭೂಮಿಯನ್ನು ಬಿಟ್ಟು ಓಡಿಹೋದರು.

**ವಿಧೂಯ ಸೈನಿಕಾಶ್ಚ ಸ ಪ್ರಗೃಹ್ಯಂ ಚಾಪಮಾತತಂ ।**
**ಹರಿಂ ಜಗಾಮ ಚೋಣ್ಣದನ್ ಮಹಾಸ್ತ್ರಶಸ್ತ್ರ ವರ್ಷಿಣಃ ॥೨೮೦॥**

ಆ ಡಿಭಿಕನು ಯಾದವ ಸೈನ್ಯವನ್ನು ಓಡಿಸಿದ ನಂತರ, ಪ್ರಬಲನಾದ ಧನುವನ್ನು ಧರಿಸಿದವನಾಗಿ ಘೋಷಣೆಗಳನ್ನು ಗೈಯುತ್ತ ಅಸ್ತ್ರ ಶಸ್ತ್ರಗಳೊಂದಿಗೆ ಶ್ರೀಕೃಷ್ಣನ ಮುಂದೆ ಬಂದನು.

**ತಮಾಶು ಕೇಶವೋಽದಿಹಾ ಸಮಸ್ತ ಸಾಧನೋಜ್ಝಿತಂ ।**
**ಕ್ಷಣಾಚ್ಚಕಾರ ಸೋಽಪ್ಯಗಾದ್ವಿಸೃಜ್ಯ ತಂ ಹಲಾಯುಧಂ ॥೨೮೧॥**

ಶತ್ರುನಾಶಕನಾದ ಶ್ರೀಹರಿ ಕ್ಷಣಾರ್ಧಲ್ಲಿ ಡಿಭಿಕನ ಸಮಸ್ತ ಸಾಧನಗಳನ್ನು ಇಲ್ಲದಂತೆ ಮಾಡಿದನು. ಆಗ ಡಿಭಿಕನು ಶ್ರೀಕೃಷ್ಣನನ್ನು ಬಿಟ್ಟು ಬಲರಾಮನಲ್ಲಿಗೆ ಓಡಿದನು.

**ಹಾಲಾಯುಧೋ ನಿರಾಯುಧಂ ವಿಧಾಯ ಹಂಸಮೋಜಸಾ ।**
**ವಿಕೃಷ್ಯ ಚಾಪಮಾಗತಂ ದದರ್ಶತಸ್ಯ ಚಾನುಜಂ ॥೨೮೨॥**

ಬಲರಾಮನು ಹಂಸನನ್ನು ನಿರಾಯುಧನನ್ನಾಗಿ ಮಾಡಿ, ಅವನ ತಮ್ಮನಾದ ಡಿಭಿಕನು ಧರ್ನುಧರನಾಗಿ ಬಂದಿರುವದನ್ನು ಕಂಡು ಅವನಿಗೆ ಎದುರಾದನು.

**ಸ ಹಂಸ ಆಶು ಕಾರ್ಮುಕಂ ಪುನಃ ಪ್ರಗೃಹ್ಯ ತಂ ಬಲಂ ।**
**ಯದಾ ಸಸಾದ ಕೇಶವೋ ನ್ಯವಾರಯತ್ತ ಮೋಜಸಾ ॥೨೮೩॥**

ಆ ಹಂಸಾಸುರನು ಪುನಃ ಕಾರ್ಮುಕವನ್ನು ಹಿಡಿದು ಬಲರಾಮನತ್ತ ಯಾವಾಗ ತಿರುಗಿದನೋ ಕೂಡಲೇ ಶ್ರೀಹರಿಯು ತನ್ನ ಸಾಮರ್ಥ್ಯದಿಂದ ಅವನನ್ನು ಮಧ್ಯದಲ್ಲಿ ತಡೆದನು.

**ಶಿನೇಃ ಸುತಾತ್ಮ ಜೋಽಪ್ಯಸೌ ವಿಹಾಯ ಹಂಸ ಕಾಮಜಂ ।**
**ರಥಾಂತರಂ ಸಮಾಸ್ಥಿತೋ ಜಗಾಮ ತಾತಮಸ್ಯ ಚ ॥೨೮೪॥**

ಶಿನಿಯ ಪೌತ್ರನಾದ ಸಾತ್ಯಕಿಯು ಹಂಸನ ತಮ್ಮನಾದ ಡಿಭಿಕನನ್ನು ಬಿಟ್ಟು, ಮತ್ತೊಂದು ರಥಧಲ್ಲಿ ಆರೂಢನಾಗಿ ಡಿಭಿಕನ ತಂದೆಯಾದ ಬ್ರಹ್ಮದತ್ತನಿಗೆ ಎದುರಾದನು.

**ವಯೋಗತಃ ಪಿತಾ ತಯೋರ್ಯುಯೋಧ ತೇನ ವೃಷ್ಣಿನಾ ।**
**ಶರಂ ಚ ಕಂಠ ಕೂಬರೇ ವ್ಯಸರ್ಜಯತ್ಸ ಸಾತ್ಯಕೇಃ ॥೨೮೫॥**

ಅವರಿಬ್ಬರ ತಂದೆಯಾದ ಬ್ರಹ್ಮದತ್ತನು, ಸಾತ್ಯಕಿಯ ಜೊತೆಯಲ್ಲಿ ಯುದ್ಧ ಮಾಡಿದನು. ಬ್ರಹ್ಮದತ್ತನು ಸಾತ್ಯಕಿಯ ಕಂಠ, ವಕ್ಷಸ್ಥಳ ಮುಂತಾದ ಮಹತ್ವದ ಸ್ಥಳಗಳಲ್ಲಿ ಬಾಣಗಳನ್ನು ಪ್ರಯೋಗಿಸಿದನು.

**ಸ ಸಾತ್ಯಕಿ, ರ್ದೃಢಾಹತೋ ಜಗಾಮ ಮೋಹಮಾಶು ಚ ।**
**ಸುಲಬ್ಧಸಂಜ್ಞ ಉತ್ಥಿತಃ ಸಮಾದಧೇಽರ್ಧ ಚಂದ್ರಕಂ ॥೨೮೬॥**

ಆ ದೃಢವಾದ ಬಾಣಗಳ ಪೆಟ್ಟಿನಿಂದ ಸಾತ್ಯಕಿಯು ಮೂರ್ಛಿತನಾದನು. ಸ್ವಲ್ಪ ಹೊತ್ತಿನ ನಂತರ ಆತನಿಗೆ ಚೆನ್ನಾಗಿ ಎಚ್ಚರವಾಯಿತು. ಕೂಡಲೇ ಎದ್ದುನಿಂತನು. ವಿಶಿಷ್ಟ ರೀತಿಯ ಅರ್ಧಚಂದ್ರಾಕಾರವಾದ ಬಾಣವನ್ನು ಆತನು ತನ್ನ ಬತ್ತಳಿಕೆಯಿಂದ ತೆಗೆದನು.

**ಸ ತೇನ ತಚ್ಛಿರೋ ಬಲೀ ಚಕರ್ತ ಶುಕ್ಲಮೂರ್ಧಜಂ ।**
**ಯದಂಬಯಾಭಿಕಾಮಿತಂ ಪುರಾಪಪಾತ ತತ್ ಕ್ಷಿತೌ ॥೨೮೭॥**

ಆ ಸಾತ್ಯಕಿಯು ತನ್ನ ಬಾಣದಿಂದ ಬಿಳಿಯ ಕೂದಲಿನಿಂದ ತುಂಬಿದ ಬ್ರಹ್ಮದತ್ತನ ಶಿರಸ್ಸನ್ನು ಛೇದಿಸಿದನು. ಪೂರ್ವದಲ್ಲಿಯೇ ಅಂಬಾದೇವಿಯು ಆ ಶಿರವನ್ನು ಅಪೇಕ್ಷಿಸಿದ್ದಳು. ಅಂತಹ ತಲೆ ಕೆಳಗೆ ಬಿದ್ದಿತು.

**ವಿ. ವಿ. :** ಹಿಂದೆ ಕಾಶಿರಾಜನ ಮಕ್ಕಳಾದ ಅಂಬ, ಅಂಬಾಲಿಕೆ, ಅವರನ್ನು ಮದುವೆಯ ಕಾಲದಲ್ಲಿ ಭೀಷ್ಮನು ಅಪಹರಿಸಿಕೊಂಡು ಬಂದಿದ್ದನು. ಆಗ ಅಂಬಾದೇವಿಯು 'ಸಾಲ್ವಕಾಮಾಹಂ' ಎಂದು ಹೇಳಿ ಭೀಷ್ಮನಿಂದ ತಪ್ಪಿಸಿಕೊಂಡು ಸಾಲ್ವನ ಹತ್ತಿರ ಬಂದಿದ್ದಳು. ಅದನ್ನು ಸಾಲ್ವನು ತಿರಸ್ಕರಿಸಿದನು. ಆದರೂ ಸಾಲ್ವನ ಮೇಲೆ ಮೋಹ ಆಕೆಗೆ ಹೋಗಿರಲಿಲ್ಲ. ಇಂದು ಆಕೆಯ ಇಚ್ಛೆ ಈ ಸಂಹಾರದಿಂದ ಪೂರ್ತಿಯಾಯಿತು ಎಂದು ಅಭಿಪ್ರಾಯ.

**ನದಂಶ್ಚ ಸಾತ್ಯಕಿ ಹರೇರ್ಜಗಾಮ ಪಾರ್ಶ್ವಮುದ್ಧತಃ ।**
**ಬಲೋಽಪಿ ಹಂಸಕಾದುಜಂ ಯುಯೋಧ ಸೇನ್ಯಯಾಯುತಂ ॥೨೮೮॥**

ಸಾತ್ಯಕಿಯು ಬಹು ದರ್ಪದಿಂದ ಸಿಂಹನಾದ ಮಾಡುತ್ತ ಶ್ರೀಕೃಷ್ಣನ ಸಮೀಪಕ್ಕೆ ಬಂದನು. ಬಲರಾಮನು ಕೂಡ ಹಂಸನ ತಮ್ಮನಾದ ಡಿಭಿಕನ ಜೊತೆಯಲ್ಲಿ ಯುದ್ಧ ಮಾಡ ಹತ್ತಿದನು.

**ಹರಿಸ್ತು ಹಂಸ ಮುಲ್ಬಣೈಃ ಶರೈಃ ಸಮರ್ದಯನ್ ಬಲಂ ।**
**ಜಘಾನ ತಸ್ಯ ಸರ್ವಶೋ ನ ಕಶ್ಚಿದತ್ರ ಶೇಷಿತಃ ॥೨೮೯॥**

ಶ್ರೀಹರಿಯು ಉಲ್ಬಣನಾದ ಆ ಹಂಸನನ್ನು ತನ್ನ ಬಾಣಗಳಿಂದ ಚೆನ್ನಾಗಿ ಮರ್ದಿಸಿದನು. (ಮೆತ್ತಗೆ ಮಾಡಿದನು) ಅಲ್ಲದೆ ತನ್ನ ಬಾಹುಬಲದಿಂದ ಹಂಸನ ಸಕಲ ಸೇನೆಯನ್ನು ನಾಶ ಮಾಡಿದನು. ಈ ಯುದ್ಧದಲ್ಲಿ ಒಬ್ಬ ಅಸುರನೂ ಉಳಿಯಲಿಲ್ಲ.

**ಸ ಏಕ ಏವ ಕೇಶವಂ ಮಹಾಸ್ತ್ರ ಮುಕ್ ಸಸಾರಹ ।**
**ನಿವಾರ್ಯತಾನಿ ಸರ್ವಶೋ ಹರಿರ್ಜತಾಸ್ತ್ರ ಮಾದದೇ ॥೨೯೦॥**

ಆ ಹಂಸಾಸುರನೊಬ್ಬನೇ ಶ್ರೀಹರಿಯನ್ನು ಎದುರಿಸಿ ಮಹತ್ತಾದ ಅಸ್ತ್ರಗಳನ್ನು ಪ್ರಯೋಗಿಸಿದನು. ಶ್ರೀಹರಿಯು ಹಂಸನ ಎಲ್ಲಾ ಅಸ್ತ್ರಗಳನ್ನು ಕತ್ತರಿಸಿ, ಕೊನೆಗೆ ತನ್ನದೇ ಆದ ವೈಷ್ಣವಾಸ್ತ್ರವನ್ನು ತೆಗೆದುಕೊಂಡನು.

**ಸ ವೈಷ್ಣವಾಸ್ತ್ರ ಮುದ್ಯತಂ ನಿರೀಕ್ಷ್ಯ ಯೋಸತೋ ಮಹೀಂ ।**
**ಗತಃ ಪರಾದ್ರವದ್ಭಯಾತ್ ಪಪಾತ ಯಾಮುನೋದಕೇ ॥೨೯೧॥**

ಆ ಹಂಸಾಸುರನು ವೈಷ್ಣವಾಸ್ತ್ರ ಸಿದ್ಧವಾದದ್ದನ್ನು ನೋಡಿ, ಗಾಬರಿಯಾಗಿ ಭಯದಿಂದ ಹಾರಿ, ಭರದಿಂದ ಓಡಿ, ಯಮುನಾ ನದಿಯ ಜಲದಲ್ಲಿ ಹೋಗಿ ಬಿದ್ದನು.

**ವರಾಸ್ತ್ರ ಪಾಣಿರೀಶ್ವರಃ ಪದಾಹನಚ್ಛಿರಸ್ಯ ಮುಂ ।**
**ಸ ಮೂರ್ಛಿತೋ ಮುಖೇಽಪತ್ಯಹಾಭುಜಂಗ ಮೆಸ್ಯಹಿ ॥೨೯೨॥**

ಶ್ರೇಷ್ಠವಾದ ಅಸ್ತ್ರವನ್ನು ಧರಿಸಿದ ಶ್ರೀಹರಿ, ಆ ಅಸುರನ ತಲೆಯ ಮೇಲೆ ಪಾದ ಪ್ರಹಾರವನ್ನು ಮಾಡಿದನು. ಆ ಪೆಟ್ಟಿನಿಂದ ಮೂರ್ಛಿತನಾಗಿ ಅವನು, ಆ ಯಮುನೆಯ ಮಡುವಿನಲ್ಲಿದ್ದ ಮಹಾಸರ್ಪದ ಬಾಯಿಯಲ್ಲಿ ಬಿದ್ದನು.

**ಸ ಧಾರ್ತರಾಷ್ಟ್ರ ಕೋದರೇ ಯಥಾ ತಮೋಽಂಧ ಮೇಯಿವಾನ್ ।**
**ತಥಾ ಸುದುಃಖ ಸಂಯುತೋ ವಸನ್ಮನೋಃ ಪರಂ ಪ್ರಿಯೋತ್ ॥೨೯೩॥**

ಆ ಅಸುರನು ಧಾರ್ತರಾಷ್ಟ್ರನೆಂಬ ಮಹಾಸರ್ಪದ ಹೊಟ್ಟೆಯಲ್ಲಿ ಬಿದ್ದನು. ಆ ಸರ್ಪದ ಹೊಟ್ಟೆಯು 'ಅಂಧಂತಮಸ್ಸಿನ' ನರಕಕ್ಕಿಂತಲೂ ಅಧಿಕ ದುಃಖಮಯವಾಗಿತ್ತು. ಅಲ್ಲಿ ಅವನು ಬಹುಕಾಲ ಇದ್ದು ನಂತರ ಮರಣವನ್ನು ಹೊಂದಿದನು.

**ತತೋಽಂಧ ಮೇವ ತತ್ತಮೋ ಹರೇರ್ದ್ವಿಡೇತಿ ನಿಶ್ಚಯಾತ್ ।**
**ತದಾಸ್ಯ ಚಾನುಜೋಽಗ್ರಜಂ ವಿಮಾರ್ಗಯನ್ ಜಲೇಪತತ್ ॥೨೯೪॥**
**ವಿಹಾಯ ರೋಹಿಣೀ ಸುತಂ ಜಲೇ ನಿಮಜ್ಯ ಮಾರ್ಗಯನ್ ।**
**ಅಪಶ್ಯ ಮಾನ ಆತ್ಮನೋ ವ್ಯಪಾಟಯಚ್ಚ ಕಾಕುದಂ ॥೨೯೫॥**

ಆ ಅಸುರನು ಮರಣಾ ನಂತರವೂ, ಕೂಡ ಹರಿಯ ದ್ವೇಷವಿದ್ದ ಪ್ರಯುಕ್ತ ಅಂಧಂತಮಸ್ಸನ್ನು ಹೊಂದುವುದೇ ನಿಶ್ಚಯ. ನಂತರ ಅವನ ತಮ್ಮನಾದ ಡಿಭಿಕನು ಕೂಡ ಬಲರಾಮನೊಡನೆ ಯುದ್ಧವನ್ನು ಬಿಟ್ಟು, ಅಣ್ಣನನ್ನು ಹುಡುಕುತ್ತ ಅವನೂ ನೀರಿನ ಮಾರ್ಗವನ್ನೇ ಹಿಡಿದನು. ಅಲ್ಲಿ ಅಣ್ಣನನ್ನು ಕಾಣದಿದ್ದಾಗ, ದುಃಖದಿಂದ ತನ್ನ ನಾಲಗೆ ಯನ್ನೇ ಕಿತ್ತಿಕೊಂಡನು.

**ವಿಹಾಯ ದೇಹಮುಲ್ಬಣಂ ತಮೋಽವತೀರ್ಯ ಚಾಗ್ರಜಂ ।**
**ಪ್ರತೀಕ್ಷ್ಯಮಾಣ ಉಲ್ಬಣಂಸಮತ್ತಿ ತತ್ಸುಖೇತರಂ ॥೨೯೬॥**

ಆ ಅಸುರನು ತನ್ನ ಕ್ರೂರವಾದ ದೇಹವನ್ನು ತ್ಯಜಿಸಿದನು. ಅಣ್ಣನ ಜೊತೆಯಲ್ಲಿಯೇ ಘೋರವಾದ, ಕಿಂಚಿತ್ತು ಸುಖವಿಲ್ಲದ ಅತಿಯಾದ ದುಃಖವನ್ನು ಅನುಭವಿಸ ಹತ್ತಿದನು.

**ತತೋ ಹರಿರ್ಬಲೈರ್ಯುತೋ ಬಲಾನ್ವಿತೋ ಮುನೀಶ್ವರೈಃ ।**
**ಸಮಂ ಕುಶಸ್ಥಲೀಂ ಯಯೌ ಸ್ತುತಃ ಕಶಂಕರಾದಿ ಭೀಃ ॥೨೯೭॥**

ಅನಂತ ಶ್ರೀಕೃಷ್ಣನು ಬಲರಾಮನ ಸಹಿತನಾಗಿ, ತಪೋಬಲದಿಂದ ಕೂಡಿದ ಋಷಿಮುನಿಗಳೊಂದಿಗೆ ದ್ವಾರಾವತಿಯಲ್ಲಿ ವಾಸಿಸಿದನು. ಅಲ್ಲಿಗೆ ಬ್ರಹ್ಮ ರುದ್ರಾದಿ ದೇವತೆಗಳು ಬಂದು ಶ್ರೀಕೃಷ್ಣನನ್ನು ಸ್ತುತಿಸಿದರು.

**ಸ್ವಕೀಯ ಪಾದ ಪಲ್ಲವಾಶ್ರಯಂ ಜನಂ ಪ್ರಹರ್ಷಯನ್ ।**
**ಉವಾಸ ನಿತ್ಯತತ್ಸುಖಾರ್ಣವೋ ರಮಾಪತಿರ್ಗೃಹೇ ॥೨೯೪॥**

ತನ್ನವರಾದ, ತನ್ನ ಏಕಾಂತ ಭಕ್ತರಾದ, ತನ್ನ ಪಾದ ಪಲ್ಲವವನ್ನು ಆಶ್ರಯ ಪಡೆದಿರುವ ಜನರನ್ನು ಹರ್ಷಿಸುತ್ತಿದ್ದನು. ನಿತ್ಯನೂ, ಸುಖಪೂರ್ಣನೂ, ಗುಣಾರ್ಣವನು ಆದ ರಮಾಪತಿಯು ತನ್ನ ಸ್ವಗೃಹದಲ್ಲಿದ್ದು ಎಲ್ಲರಿಗೂ ಆನಂದವನ್ನುಂಟು ಮಾಡುತ್ತಿದ್ದನು.

**ಇಲ್ಲಿ ಒಂದು ವಿಚಾರ :** ೧) ಶ್ರೀಮದಾಚಾರ್ಯರು ಹಂಸ ಮತ್ತು ಡಿಭಿಕರ ವಿವರ ಮತ್ತು ಅವರ ಯುದ್ಧಕ್ಕೆ ಇಷ್ಟೊಂದು ಶ್ಲೋಕಗಳನ್ನು ಏಕೆ ಬಳಸಿದ್ದಾರೆ? ೧೨೩ ರಿಂದ ೨೯೬ ಶ್ಲೋಕ ಕುರಿತು ಯೋಚಿಸುವಾಗ ಕೆಲವು ವಿಷಯಗಳನ್ನು ನಾವು ಗಮನಿಸಬಹುದು.

ಹಿಂದೆ ರಾಮಾಯಣ ಪ್ರಕರಣದಲ್ಲಿ ಯುದ್ಧಕಾಂಡವನ್ನು ಕುರಿತು ವಿವರಿಸುವಾಗ ಯುದ್ಧ ಕಾಂಡದಲ್ಲಿ ದ್ವೈತಸಿದ್ಧಾಂತದ ತತ್ತ್ವಗಳು, ಪ್ರಮೇಯಗಳು ಎಷ್ಟರಮಟ್ಟಿಗೆ ಅಡಕವಾಗಿವೆ ಎಂಬುದನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದೆ. ಅದರಂತೆ ಇಲ್ಲಿ ಹಂಸ ಡಿಭಿಕರ ಯುದ್ಧಪ್ರಸಂಗದಲ್ಲಿಯೂ ಕೂಡ ಕೆಲವು ವಿಷಯಗಳನ್ನು ನಾವುಕಾಣಬಹುದು.

೧) ಹಂಸ ಡಿಭಿಕರು ಶ್ರೀಕೃಷ್ಣನನ್ನು ಮಾನವನೆಂದು ತಪ್ಪು ತಿಳಿದುಕೊಂಡಿದ್ದರು. ಅದು ಅವರಿಗೆ ಉಂಟಾದ ಮಿಥ್ಯಾಜ್ಞಾನ. ಮಿಥ್ಯಾಜ್ಞಾನಕ್ಕೆ ಮರಣ ಮತ್ತು ಅಂಧಂತಮಸ್ಸು ನಿಶ್ಚಿತ.

೨) ಹಂಸ ಡಿಭಿಕರು ರಾಜಸೂಯ ಯಾಗ ಮಾಡಲು ಇಚ್ಛಿಸಿದರು. ಅದು ಅವರು ವಿಷ್ಣು ಭಕ್ತಿಯಿಂದ ಮಾಡಿದ್ದಲ್ಲ. ವಿಷ್ಣುವಿನ ದ್ವೇಷದಿಂದ ಕೂಡಿದ್ದು. ತಮ್ಮ ತಂದೆಗೆ ಐಹಿಕ ಕೀರ್ತಿ ದೊರೆಯಲೀ ಎನ್ನುವ ಇಚ್ಛೆಯಿಂದ ಮಾಡಿದ್ದು. ಪಾರಮಾರ್ಥಿಕ ದೃಷ್ಟಿಯಿಂದಲ್ಲ.

೩) ಜರಾಸಂಧನಿಗೆ ರಾಜಸೂಯ ಯಾಗದಲ್ಲಿ ನಿಷ್ಠೆಯಿರಲಿಲ್ಲ. ವಿಷ್ಣು ಭಕ್ತಿ ಅವನಿಗೆ ಪ್ರಿಯವಾಗಿರಲಿಲ್ಲ. ಆದರೂ ಯಜ್ಞದ ವಿಷಯವನ್ನು ಕೇಳಿಯೂ ಉಪೇಕ್ಷಿಸಿದನು. ಇದಕ್ಕೆ ಅವನ ಶಿಷ್ಯ ವಾತ್ಸಲ್ಯ ಕಾರಣ. ಅವನಿಗೆ ತನ್ನ ಪ್ರತಿಷ್ಠೆಗಿಂತಲೂ ಶಿಷ್ಯರ ಕೀರ್ತಿ ಮುಖ್ಯವಾಗಿತ್ತು.

'ತನ್ನ ಸ್ನೇಹಿತರಿಗೆ ವೈರಿಯಾದರೆ ತನಗೂ ವೈರಿಯೇ' ಎನ್ನುವ ನೀತಿಯನ್ನು ಅನುಸರಿಸಿದನು. ತನಗಂತೂ ಕೃಷ್ಣನು ಹೇಗಾದರೂ ವೈರಿಯೇ. ತನ್ನಿಂದ ಗೆಲ್ಲುವದಂತೂ ಆಗಿಲ್ಲ. ಈಗ ಈ ಹಂಸ ಡಿಭಿಕರು ಕೃಷ್ಣನನ್ನು ಗೆದ್ದರೆ, ಪರೋಕ್ಷವಾಗಿ ತನಗೂ ಜಯ ಲಭಿಸಿದಂತೆಯೇ ಎಂದು ಅವನು ಭಾವಿಸಿದ್ದನು.

೪) ಎಲ್ಲಕ್ಕೂ ಮಹತ್ವವಾದ ವಿಷಯವೆಂದರೆ, ದೇವತೆಗಳಿಗೆ ಕಕ್ಷ ಮತ್ತು ತಾರತಮ್ಯ ಇರುವಂತೆ ದೈತ್ಯರಿಗೂ ಇದೆ. ಅದನ್ನು ಅರಿತು ಆಚರಿಸದಿದ್ದರೂ ತಿಳಿಯುವುದು ಅವಶ್ಯಕ. ಅಂತೆಯೇ ಶ್ರೀಜಗನ್ನಾಥದಾಸರು ಹರಿಕಥಾಮೃತಸಾರದಲ್ಲಿ ಒಂದು ಸಂಧಿಯನ್ನೇ ಮೀಸಲಾಗಿ ಇರಿಸಿದ್ದಾರೆ. ಇಲ್ಲಿ ಶ್ರೀಮದಾಚಾರ್ಯರು ಅದನ್ನು ಸ್ಪಷ್ಟವಾಗಿ ಹೇಳದಿದ್ದರೂ

ಹಂಸ ಡಿಭಿಕ ಮತ್ತು ಯಾದವರ ಯುದ್ಧದಲ್ಲಿ ಅದನ್ನು ಸೂಚ್ಯವಾಗಿ ತಿಳಿಸಿದ್ದಾರೆ. ಉದಾಹರಣೆಗೆ ಹಂಸ, ಡಿಭಿಕ, ಹಿಡಿಂಬ ಮತ್ತಿನ್ನಿತರ ಅವರ ಅನುಚರರ ಗುಂಪು ಒಂದೆಡೆ ಶ್ರೀಕೃಷ್ಣ ಬಲರಾಮ, ಸಾತ್ಯಕಿ, ಗದ ಮತ್ತು ಯಾದವರು ಇವರ ಗುಂಪು ಮತ್ತೊಂದುಕಡೆ.

ಇವರ ಮಧ್ಯೆ ಯುದ್ಧ ನಡೆದಾಗ ಒಂದೆಡೆ ದೇವತೆಗಳು ಮತ್ತೊಂದೆಡೆ ರಾಕ್ಷಸರು ಆದರೂ ದೇವತೆಗಳಿಗೆ ರಾಕ್ಷಸರನ್ನು ಗೆಲ್ಲುವುದು ಆಗಿಲ್ಲ. ಯುದ್ಧದಲ್ಲಿ ಸೋತಿದ್ದಾರೆ. ಬಲಶಾಲಿಗಳ ಸಹಾಯ ಪಡೆದಿದ್ದಾರೆ. ಕೆಲವೊಂದು ಸಲ ಓಡಿಯೂ ಹೋಗಿದ್ದಾರೆ. ಅಂದರೆ ಇಲ್ಲಿ ಸೋತ ದೇವತೆಗಳಿಗಿಂತಲೂ ಗೆದ್ದ ರಾಕ್ಷಸರು ಅವರ ತಾರತಮ್ಯದ ದೃಷ್ಟಿಯಿಂದ ಬಲಶಾಲಿಗಳೇ ಎಂದು ಹೇಳಬಹುದು. ಕೆಲವೊಂದು ಸಲ ರಾಕ್ಷಸರು ಸೋಲುವ ಪ್ರಸಂಗ ಬಂದಾಗ ಅನ್ಯ ರಾಕ್ಷಸರು ಅವರ ಸಹಾಯಕ್ಕಾಗಿ ಬಂದದ್ದು ಉಂಟು. ಅಲ್ಲಿಯೂ ಕೂಡ ಸೈದ್ಧಾಂತಿಕ ದೃಷ್ಟಿಯಿಂದ ತಾರತಮ್ಯವನ್ನೇ ಕಾಣಬಹುದು. ಬಲರಾಮ, ಸಾತ್ಯಕಿ ಮತ್ತು ಗದ ಇವರು ಅನೇಕ ಸಲ ಯುದ್ಧದಲ್ಲಿ ವಿಫಲರಾದದ್ದುಂಟು. ಕೊನೆಯಲ್ಲಿ ಸರ್ವೋತ್ತಮನಾದ ಶ್ರೀಕೃಷ್ಣನೇ ಬಂದು ಆ ರಾಕ್ಷಸರನ್ನು ಸಂಹರಿಸಬೇಕಾಯಿತು. ಇಲ್ಲಿ ತಾರತಮ್ಯದ ದೃಷ್ಟಿಯಿಂದ ಪರಮಾತ್ಮನು ದೈತ್ಯರಲ್ಲೂ, ದೇವತೆಗಳಲ್ಲೂ ಪರಮಶ್ರೇಷ್ಠನು ಎಂಬ ನಿರ್ಣಯವಿತ್ತಂತಾಗಿದೆ.

ಅನೇಕ ಕಡೆಗಳಲ್ಲಿ ಬ್ರಹ್ಮ ರುದ್ರಾದಿಗಳ ವರಗಳನ್ನು ಮೀರುವುದು ದೇವತೆಗಳಿಗೂ ಸಾಧ್ಯವಾಗಿಲ್ಲ. ಆಗ ಶ್ರೀಹರಿಯು ಬಂದು ಅವುಗಳನ್ನು ನಿವಾರಿಸಿ, ದೇವತೆಗಳಿಗೆ ಸಹಾಯ ಮಾಡಿದ್ದಾನೆ. ಅವರನ್ನು ರಕ್ಷಿಸಿದ್ದಾನೆ.

**೫) ಶ್ರೀಹರಿಯ ಪಾದದಾಶ್ರಯದಲ್ಲಿದ್ದ ಭಕ್ತರಿಗೆ ಎಂದಿಗೂ ಕೇಡಿಲ್ಲ. ಅವರಿಗೆ ದುಃಖವಿಲ್ಲ.** ಎಂಬುದನ್ನು ನಾವು ಈ ಯುದ್ಧದ ಸನ್ನಿವೇಶದಿಂದ ಮನಗಾಣುತ್ತೇವೆ. ಜ್ಞಾನಿಗಳು ಇದಕ್ಕೂ ಹೆಚ್ಚಿನ ಅಂಶಗಳಲ್ಲಿ ಇದರಲ್ಲಿ ಕಂಡುಹಿಡಿಯಲು ಸಾಧ್ಯವಿದೆ.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ 'ಹಂಸ ಡಿಭಿಕ ವಧೋನಾಮ' ಸಪ್ತದಶೋಽಧ್ಯಾಯಃ ॥೧೭॥**

ಇಲ್ಲಿಗೆ ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರಿಂದ ರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ **'ಶ್ರೀಕೃಷ್ಣ ವಿಜಯ'** ಎಂಬ ಹದಿನೇಳನೆಯ ಅಧ್ಯಾಯ ಮುಗಿದುದು.

ಇದನ್ನು ಶಾಂಡಿಲ್ಯಗೋತ್ರೋತ್ಪನ್ನ ಶ್ರೀ ಹನುಮಂತಾರ್ಯರಸುತ ರಾಘವೇಂದ್ರ ಶರ್ಮ ಈತನು ಶ್ರೀಕೃಷ್ಣನ ದಯೆಯಿಂದ ಕನ್ನಡ ಭಾವಾನುವಾದ ಗೈದಿದ್ದಾನೆ. ದುಷ್ಟ ಸಂಹಾರಕನಾದ ಶ್ರೀಕೃಷ್ಣನು ಭಕ್ತನಲ್ಲಿದ್ದ ದುಷ್ಟ ಗುಣಗಳನ್ನು ದೂರಮಾಡಿ ಈ ಕೃತಿಯನ್ನು ಸ್ವೀಕರಿಸಿ ಸಂಪ್ರೀತನಾಗಲಿ.

ಇತಿ – ಶಂ – ಓಂ

ಶ್ರೀ ಕೃಷ್ಣಾರ್ಪಣಮಸ್ತು ಶ್ರೀ ಮಧ್ವೇಶಾರ್ಪಣಮಸ್ತು

ಚಾತುರ್ಮಾಸ್ಯ ವ್ರತ ಸಮಾಪ್ತಿ

|| ಶ್ರೀಗುರುಭ್ಯೋನಮಃ ||
|| ಪರಮ ಗುರುಭ್ಯೋ ನಮಃ ||
|| ಶ್ರೀ ವೇದವ್ಯಾಸಾಯನಮಃ ||

# ಅಧ್ಯಾಯ ಹದಿನೆಂಟು

ಹಿಂದಿನ ಅಧ್ಯಾಯದಲ್ಲಿ ಶ್ರೀಕೃಷ್ಣನ ವಿಜಯವನ್ನು ವಿವರಿಸಿದ್ದರೆ, ಈ ಅಧ್ಯಾಯದಲ್ಲಿ ಪಾಂಡವರ ವಿದ್ಯಾಭ್ಯಾಸವನ್ನು ವಿವರಿಸುತ್ತ ಭೀಮಸೇನನ ವ್ಯಕ್ತಿತ್ವ, ಮತ್ತು ಭಾಗವತ ಧರ್ಮದ ಮೇಲೆ ವಿಶೇಷ ಬೆಳಕನ್ನು ಚೆಲ್ಲಿದ್ದಾರೆ.

**ಯದಾ ರಾಮಾದವಾಪ್ತಾನಿ ದಿವ್ಯಾಸ್ತ್ರಾಣಿ ಪ್ರಹೇದಿರೇ ।**
**ದ್ರೋಣಾತ್ಕುಮಾರಾ ಸ್ತ್ರೇಷ್ವಾಸೀತ್ಸರ್ವೇಷ್ವಪ್ಯಧಿಕೋಽರ್ಜುನಃ ||೧||**

ದ್ರೋಣಾಚಾರ್ಯರು ತಾವು ಪರಶುರಾಮನಿಂದ ಸಂಪಾದಿಸಿದ ದಿವ್ಯಾಸ್ತ್ರಗಳನ್ನು ಕುರು ಪಾಂಡವರಿಗೆ ಅಭ್ಯಾಸ ಮಾಡಿಸಿದರು. ಅವರೆಲ್ಲರಲ್ಲಿ ಅರ್ಜುನನು ಶ್ರೇಷ್ಠನಾದನು.

ಇಲ್ಲಿ ಒಂದು ಪ್ರಶ್ನೆ– ಭೀಮಸೇನನು ಎಲ್ಲರಲ್ಲಿ ಶ್ರೇಷ್ಠನು ಎಂದು ಮೊದಲು ಹೇಳಿ ಆಗಿದೆ. ಇಲ್ಲಿ ಅರ್ಜುನನು ಶ್ರೇಷ್ಠನೆಂದಿದ್ದಾರೆ, ಅಂದರೆ ಭೀಮನು ಹಿಂದುಳಿದನೇ? ಎಂಬ ಶಂಕೆ? ಅದಕ್ಕೆ ಸಮಾಧಾನ.

**ನಿಜಪ್ರತಿಭಯಾ ಜಾನನ್ಸರ್ವಾಸ್ತ್ರಾಣಿ ತತೋಽಧಿಕಂ ।**
**ನಾಸ್ತ್ರಯುದ್ಧಂ ಕ್ವಚಿದ್ಭೀಮೋಮನ್ಯತೇ ಧರ್ಮಮಂಜಸಾ ||೨||**

ಭೀಮಸೇನದೇವರು ಸ್ವ ಪ್ರತಿಭೆಯಿಂದಲೇ ಸರ್ವ ಅಸ್ತ್ರಗಳನ್ನು ತಿಳಿದು ಅಧಿಕರಾಗಿದ್ದರು. ಇಲ್ಲಿ ದ್ರೋಣಾಚಾರ್ಯರಲ್ಲಿ ಅಸ್ತ್ರ ವಿದ್ಯೆಯನ್ನು ಕಲಿಯುವುದನ್ನು ಧರ್ಮವೆಂದು ಪರಿಗಣಿಸಲಿಲ್ಲ.

ಗುರುಗಳಲ್ಲಿ ಅಸ್ತ್ರ ವಿದ್ಯೆಯನ್ನು ಕಲಿತವರಲ್ಲಿ ಅರ್ಜುನನು ಮಾತ್ರ ಶ್ರೇಷ್ಠನು ಎಂದು ತಿಳಿಯಬೇಕು. ಭೀಮನ ವ್ಯಕ್ತಿತ್ವಕ್ಕೆ ಇಲ್ಲಿ ಯಾವ ಕುಂದೂ ಇಲ್ಲ. ಏಕೆಂದರೆ ಭೀಮಸೇನನು ಶುದ್ಧ ಭಾಗವತನು.

**ನಹಿ ಭಾಗವತೋ ಧರ್ಮೋದೇವತಾಭ್ಯುಪಯೋಚನಂ ।**
**ಜ್ಞಾನ ಭಕ್ತಿ ಹರೇಸ್ತ್ರುಪ್ತಿಂ ವಿನಾ ವಿಷ್ಣೋಃ ರಪಿ ಕ್ವಚಿತ್ ।**
**ನಾಕಾಂಕ್ಷ್ಯಂ ಕಿಮುತಾನ್ಯೇಭ್ಯೋಹ್ಯಸ್ತ್ರಂ ಕಾಮ್ಯ ಫಲಪ್ರದಮ್ ||೩||**

ಅನ್ಯದೇವತೆಗಳನ್ನು ಯಾಚಿಸುವುದು ಭಾಗವತ ಧರ್ಮವಲ್ಲ. ಜ್ಞಾನ, ಭಕ್ತಿ ಮತ್ತು ದೇವರ ಅನುಗ್ರಹ, ಇವುಗಳ ಹೊರತು ವಿಷ್ಣುವನ್ನು ಕಂಡರೂ ಏನನ್ನೂ

ಬೇಡಬಾರದು ಎಂದು ಶುದ್ಧ ಭಾಗವತ ಧರ್ಮ ಹೇಳುತ್ತದೆ. ಅಂದ ಮೇಲೆ ಅಸ್ತ್ರಗಳ ಕಾಮ್ಯಫಲಕ್ಕಾಗಿ ಅನ್ಯ ದೇವತೆಗಳನ್ನು ಯಾಚಿಸುವುದೇ?

ಇದು ಭೀಮಸೇನ ದೇವರಿಗೆ ಎಂದೂ ಒಪ್ಪಿಗೆಯಾಗಿರಲಿಲ್ಲ.

**ಶುದ್ಧೇ ಭಾಗವತೇ ಧರ್ಮೇ ನಿರತೋಽಯದ್ವೃಕೋ ದರಃ ।**
**ನ ಕಾಮ್ಯಕರ್ಮ ಕೃತ್ತಸ್ಮಾನ್ನಾಯಾಚದ್ದೇವ ಮಾನುಷಾನ್ ॥೪॥**

ಭೀಮಸೇನದೇವರು (ವೃಕೋದರ) ಶುದ್ಧವಾದ ಭಾಗವತ ಧರ್ಮದಲ್ಲಿರತ ರಾದವರು. ಅವರು ಕಾಮ್ಯಕರ್ಮವನ್ನು ಇಚ್ಛಿಸಲಿಲ್ಲ. ಅಂತೆಯೇ ಅವರು ಕಾಮ್ಯ ಕರ್ಮದ ಫಲಕ್ಕಾಗಿ ದೇವತೆಗಳನ್ನಾಗಲಿ, ಮಾನವರನ್ನಾಗಲಿ ಯಾಚಿಸುವುದು ಅವರಿಗೆ ಸರಿಯೆನಿಸಲಿಲ್ಲ.

ವೃಕೋದರವೆಂದರೆ = भक्तिज्ञान सवैराग्यं प्रज्ञा मेधावृति स्थितिः । योशः प्रणोन्नलं चैव वृको दयज्ञति स्मतः अतिशेहित विज्ञात वायुश्ष्यमतः स्मतः

ಮಂತ್ರಾಸ್ತ್ರಗಳ ಬಳಕೆ = ಎಂದರೆ ಕಾಮ್ಯಕರ್ಮ ಎಂದೇ ಭೀಮಸೇನ ದೇವರ ನಂಬಿಕೆ – ಏಕಚಕ್ರದಲ್ಲಿ ಭಿಕ್ಷೆ ಬೇಡಿದನಲ್ಲ? ಎಂಬ ಶಂಕೆಗೆ ಸಮಾಧಾನ.

**ನ ಹರಿಶ್ಚ ಪ್ರಾರ್ಥಿತಸ್ತೇನ ಕದಾಚಿತ್ಕಾಮ್ಯಲಿಪ್ಸಯಾ ।**
**ಭಿಕ್ಷಾಮಟಂಶ್ಚ ಹುಂಕಾರಾತ್ಕರವದ್ವೈಶ್ಯತೋಽಗ್ರಹೀತ್ ॥೫॥**

ಭೀಮಸೇನ ದೇವರು, ಕಾಮ್ಯಕರ್ಮ ಮತ್ತು ಅದರ ಫಲಕ್ಕಾಗಿ ಪರಮಾತ್ಮನನ್ನೇ ಎಂದೂ ಪ್ರಾರ್ಥಿಸಿಲ್ಲ, ಎಂದ ಮೇಲೆ ಇತರ ದೇವತೆಗಳನ್ನು ಕೇಳಬಲ್ಲರೆ!

ಪ್ರಸಂಗವಶಾತ್ ಅವರು ಭಿಕ್ಷೆಗೆ ಹೊರಟಿದ್ದಾರೆ ನಿಜ. ಆದರೆ ಅವರು ಅಲ್ಲಿಯೂ ಕೂಡ ಯಾಚಿಸಿಲ್ಲ. ಕೇವಲ ಹುಂಕಾರ ಮಾಡಿದ್ದಾರೆ. ಅದನ್ನರಿತ ಜನರು ತಾವೇ ಭಯಭಕ್ತಿಯಿಂದ ತಂದು ಅರ್ಪಿಸಿದ್ದಾರೆ. ಒಬ್ಬ ರಾಜನು ವೈಶ್ಯರಿಂದ ಕಪ್ಪ ಸ್ವೀಕರಿಸುವಂತೆ ಅದನ್ನು ಸ್ವೀಕರಿಸಿದನು. ಅಲ್ಲಿ ರಾಜಮರ್ಯಾದೆ ಇದೆಯೇ ವಿನಃ ಯಾಚಕ ವೃತ್ತಿಯಿಲ್ಲ.

**ನಾನ್ಯದೇವಾನತಾಸ್ತೇನ ವಾಸುದೇವಾನ್ನ ಪೂಜಿತಾಃ ।**
**ನ ಪ್ರತೀಪಂ ಹರೇಽಣ್ವಪಿ ಸ ಕರೋತಿ ಕಥಂಚನ ॥೬॥**

ಭೀಮಸೇನ ದೇವರು ವಾಸುದೇವನ ವ್ಯತಿರಿಕ್ತ ಇನ್ನೊಬ್ಬರಿಗೆ ನತಿಸಿದವರಲ್ಲ, ಪೂಜಿಸಿದವರಲ್ಲ, ಪರಮಾತ್ಮನ ವಿರೋಧವನ್ನು ಯಾವ ರೀತಿಯಿಂದಲೂ ಮಾಡಿದವರಲ್ಲ.

ವಿ. ವಿ. : ಇಲ್ಲಿ ಆಚಾರ್ಯರ ತಾರತಮ್ಯದ ಸಿದ್ಧಾಂತವು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

**ಅನುಹಸ್ಯಾರಿಣೋಽಯುದ್ಧೇ ನಾಭಿಯಾತಿ – ಹ್ಯುಹಸ್ಯರೀ ।**
**ನಾಹಯಾತಿಯುಧಃ ಕ್ವಾಪಿ ನಸ್ಪಚಿ ಛದ್ಮ ಚಾ ಚರೇತ್ ॥೮॥**

ಕವಚ, ಅಸ್ತ್ರ ರಹಿತನಾದ ವೈರಿಯ ಮೇಲೆ, ತಾವು ಎಂದೂ ಕವಚ ಧರಿಸಿ ಯುದ್ಧ ಮಾಡಿದವರಲ್ಲ. ಯುದ್ಧದಿಂದ ಭೀತರಾಗಿ ಎಂದು ಹಿಮ್ಮೆಟ್ಟಿದವರಲ್ಲ. ಯುದ್ಧದಲ್ಲಿ ಕಪಟ ಮತ್ತು ಮೋಸವನ್ನು ಎಂದೂ ಮಾಡಿದವರಲ್ಲ.

ಇಲ್ಲಿ ನಿಜವಾದ ಯೋಧನ ವ್ಯಕ್ತಿತ್ವ ವ್ಯಕ್ತವಾಗುತ್ತದೆ.

**ನಚೌರ್ಧ್ವ ದೈಹಿಕಾನುಜ್ಞಾಮವೈಷ್ಣವ ಕೃತೇಽಕರೋತ್ ।**
**ನಚಕೋತಿ ಸ್ವಯಂ ನೈಷಾಂ ಪ್ರಿಯಮಪ್ಯಾಚರೇ ತ್ಕ್ವಚಿತ್ ॥೯॥**

ಭೀಮಸೇನದೇವರು ಹರಿದ್ವೇಷಿಗಳ ಸಕ್ರಿಯವಾದ ಅಂತ್ಯಕ್ರಿಯೆಗೂ, ಉತ್ತರ ಕ್ರಿಯಾದಿಗಳಿಗೂ ಅಪ್ಪಣೆ ಕೊಟ್ಟವರಲ್ಲ. ಪ್ರೋತ್ಸಾಹಿಸಿದವರಲ್ಲ. ಅಷ್ಟೇ ಅಲ್ಲ ಅಂತಹ ಹರಿದ್ವೇಷಿಗಳೊಂದಿಗೆ ಸಖ್ಯವನ್ನೂ ಬೆಳೆಸಲಿಲ್ಲ.

**ಸಖ್ಯಂ ನಾವೈಷ್ಣವೈ (ಶ್ಚ)ಕ್ರೇ ಪ್ರತೀಪಂವೈಷ್ಣವೇನತು ।**
**ಪರೋಕ್ಷೇಽಪಿಹರೇರ್ನಿಂದಾಕೃತೋ ಜಿಹ್ವಾಂ ಛಿನತ್ತಿಚ ॥೧೦॥**

ಅವೈಷ್ಣವರ ಜೊತೆಯಲ್ಲಿ ಮಿತ್ರತ್ವವನ್ನು ಮಾಡಲಿಲ್ಲ. ವಿಷ್ಣು ಭಕ್ತರ ವಿರೋಧ ವನ್ನೂ ಮಾಡಿಲ್ಲ. ಪ್ರತ್ಯಕ್ಷ ಹಾಗಿರಲಿ, ಪರೋಕ್ಷದಲ್ಲೂ ಅವರು ಹರಿನಿಂದೆಯನ್ನು ಸಹಿಸಿದವರಲ್ಲ. ಪರಮಾತ್ಮನ, ಹರಿನಿಂದೆ ಮಾಡತಕ್ಕವರ ನಾಲಿಗೆಯನ್ನೇ ಕತ್ತರಿಸಿ ಬಿಡುತ್ತಿದ್ದರು.

ಹರಿನಿಂದೆ, ಗುರುನಿಂದೆ, ಪತಿನಿಂದೆ ಇವುಗಳನ್ನು ಕೇಳಬಾರದು. ಶಕ್ತನಾಗಿದ್ದರೆ ನಿಂದಕನ ನಾಲಿಗೆಯನ್ನು ಸೀಳಬೇಕು. ಇಲ್ಲದಿದ್ದರೆ, ಅದನ್ನು ಕೇಳದಂತೆ – ಕಿವಿಗಳನ್ನು ಮುಚ್ಚಿಕೊಂಡು ಅಲ್ಲಿಂದ ಎದ್ದು ಹೋಗಬೇಕು. ಇದು ಭಾಗವತ ಧರ್ಮ.

**ಪ್ರತೀಪಕಾರಿಣೋ ಹಂತಿ ವಿಷ್ಣೋರ್ವೈತಾನಪೀಘಾನತ್ ।**
**ನ ಸಂಶಯಂ ಕದಾಪ್ಯೇಷ ಧರ್ಮೇ ಜ್ಞಾನೇಪಿವಾ ಕರೋತ್ ॥೧೧॥**

ವಿಷ್ಣು ದ್ವೇಷಿಗಳನ್ನು ತಾವೇ ಹತಗೈಯುತ್ತಿದ್ದರು. ಇಲ್ಲವೇ ಯೋಗ್ಯರಾದ ಇತರರಿಂದ ಆ ಕಾರ್ಯವನ್ನು ಮಾಡಿಸುತ್ತಿದ್ದರು. ಧರ್ಮ ಮತ್ತು ಜ್ಞಾನ, ಇವುಗಳಲ್ಲಿ ಅವರಿಗೆ ಸಂಶಯವಿರಲಿಲ್ಲ ನಿರ್ದುಷ್ಟ ಜ್ಞಾನ ಉಳ್ಳವರಾಗಿದ್ದರು.

**"ಸಂಶಯಜ್ಞಾನ ಭಗವದ್ಭಕ್ತರಿಗೆ ಸಲ್ಲದು"**
**ವಿದ್ಯೋಪಜೀವನಂ ನೈವ ಚಕಾರಾಪದ್ಯಪಿ ಕ್ವಚಿತ್ ।**
**ಅತೋ ನ ಧರ್ಮ ನಹುಷೌ ಪ್ರತ್ಯುವಾಚ ಕಥಂಚನ ॥೧೨॥**

ವಿದ್ಯೆಯನ್ನು ತಮ್ಮ ಉಪಜೀವನಕ್ಕಾಗಿ ಎಂದೂ ಬಳಸಿದವರಲ್ಲ. ಆಪತ್ಕಾಲದಲ್ಲೂ ಆ ವಿಚಾರ ಅವರಿಗೆ ಬಂದಿಲ್ಲ. ಅಂತೆಯೇ ಅವರಿಗೆ ಬದುಕು, ಸಾವುಗಳ ಪ್ರಸಂಗಬಂದಾಗ (ಉಳಿವು ಅಳಿವಿನ ಸಮಯದಲ್ಲಿ) ಬಕರೂಪನಾದ ಯಮನಿಗೂ, ಸರ್ಪರೂಪನಾದ ನಹುಷನಿಗೂ, ಅವರ ಪ್ರಶ್ನೆಗಳಿಗೆ ಉತ್ತರ ಕೊಟ್ಟು ತಾವು ಬದುಕಲು ಪ್ರಯತ್ನಿಸಲಿಲ್ಲ.

ಮೇಲಿನ ಶ್ಲೋಕದಲ್ಲಿ ಯಕ್ಷಪ್ರಶ್ನೆ ಮತ್ತು ನಹುಷನ ಚರಿತ್ರೆಗಳ ಬಗೆಗೆ ಒಂದೊಂದು ಶಬ್ದವನ್ನೇ ಬಳಸಿ, ಓದುಗರ ಕುತೂಹಲವನ್ನು ಕೆರಳಿಸಿದ್ದಾರೆ. ಅವುಗಳನ್ನು ಅರಿಯಲೆಂದೇ ಆಚಾರ್ಯರ ಸದಭಿಪ್ರಾಯ. ಇದು ಆಚಾರ್ಯರ ಶೈಲಿಯ ವೈಶಿಷ್ಟ್ಯ.

ವಿ. ವಿ. : ಮೇಲಿನ ಶ್ಲೋಕ ೫ ರಿಂದ ೧೨ ರ ವರೆಗೆ ಅಪ್ಪಟವಾದ ಭಾಗವತ ಧರ್ಮಗಳು, ಭೀಮಸೇನದೇವರಿಗೆ ಅವುಗಳಲ್ಲಿರುವ ನಿಷ್ಠೆಯನ್ನು ವ್ಯಕ್ತಪಡಿಸಲಾಗಿದೆ.

ಭೀಮಸೇನದೇವರು ಅಸ್ತ್ರ ವಿದ್ಯೆಯನ್ನು ಧರ್ಮವನ್ನಾಗಿ ತಿಳಿಯುವುದಿಲ್ಲ. ಅಲ್ಲದೆ ಅದು ಕಾಮ್ಯ ಫಲದಿಂದಕೂಡಿದ್ದು ಎಂದು ಹೇಳಿದ್ದಾರೆ. ಆದರೆ ಅವರು ಅಶ್ವತ್ಥಾಮ ಮತ್ತು ಅಲಂಬುಸರೊಡನೆ ಯುದ್ಧ ಮಾಡಿದರಲ್ಲ! ಅದಕ್ಕೆ ಕಾರಣವೇನು? ಎಂಬುದು ಒಬ್ಬರ ಪ್ರಶ್ನೆ ಅದಕ್ಕೆ ಆಚಾರ್ಯರ ಉತ್ತರ ಸಿದ್ಧವಾಗಿದೆ.

**ಆಜ್ಞೆಯೈವಹರೇರ್ದ್ರೌಣೇರಸ್ತ್ರಾಣ್ಯಸ್ತ್ರೈರ ಶಾಮಯತ್ ।**
**ಅದೃಶೋಽಲಂಬುಸೋ ಭಗ್ನೋ ನಾನ್ಯತ್ರತು ಕಥಂಚನ ॥೧೩॥**

ಶ್ರೀಹರಿಯ ಆಜ್ಞೆಯಿಂದಲೇ ಎಂದು ಸ್ಪಷ್ಟೀಕರಿಸಿದ್ದಾರೆ. ಶ್ರೀಹರಿಯ ಆಜ್ಞೆಯಿಂದಲೇ, ದ್ರೋಣರಲ್ಲಿ ಕಲಿತ ದ್ರೋಣಪುತ್ರರ ಅಸ್ತ್ರಗಳನ್ನು ಅಸ್ತ್ರಗಳಿಂದಲೇ ಪರಾಭವ ಗೊಳಿಸಿದ್ದಾರೆ. ಅದೇರೀತಿಯಾಗಿ ಅದೃಶ್ಯನಾಗಿ ಮಾಯೆಯಿಂದ ಹೋರಾಡುವ ಅಲಂಬುಸನ ಅಸ್ತ್ರಗಳನ್ನು ಪರಿಹರಿಸಿದ್ದಾರೆ. ಈ ಎರಡು ಪ್ರಸಂಗಗಳನ್ನು ಬಿಟ್ಟು ಅವರು ಮತ್ತೆಲ್ಲಿಯೂ ಅಸ್ತ್ರಗಳನ್ನು ಬಳಸಿಲ್ಲ. ಇಲ್ಲಿ ಭೀಮಸೇನದೇವರಿಗೆ ಪರಮಾತ್ಮನ ಆಜ್ಞೆ ಮುಖ್ಯ. ಅದನ್ನು ಉಲ್ಲಂಘಿಸುವಂತಿಲ್ಲ.

**ಕಾರಣವಿಲ್ಲದೇ ಶ್ರೀಹರಿಯು ಆಜ್ಞೆಯನ್ನಿತ್ತನೇ?** ಇಲ್ಲ, ಸಮಾಧಾನ.

**ಸಹ್ಯಸ್ತ್ರಯುದ್ಧೇ ಸದೃಕೋದ್ರೌಣೇ ರಸ್ತ್ಯರ್ಜುನಾದೃತೇ ।**
**ಸರ್ವವಿತ್ವಂತತೋಭೀಮೇ ಪ್ರದರ್ಶಯಿತು ಮೀಶ್ವರಃ**
**ಅದಾದಾಜ್ಞಾ ಮಸ್ತ್ರಯುದ್ಧೇ ತಥೈವಾಲಂಬುಸಂ ಪ್ರತಿ ॥೧೪॥**

ದ್ರೋಣರಲ್ಲಿ ಕಲಿತ ಶಿಷ್ಯರಲ್ಲಿ, ಅರ್ಜುನ ಮತ್ತು ಅಶ್ವತ್ಥಾಮರು ಅಸ್ತ್ರ ವಿದ್ಯೆಯಲ್ಲಿ ಬಹು ಪ್ರಸಿದ್ಧರಾಗಿದ್ದರು. (ಭೀಮಸೇನದೇವರು ದ್ರೋಣರಲ್ಲಿ ಅಸ್ತ್ರ ವಿದ್ಯೆ ಕಲಿಯಲಿಲ್ಲ ಎಂದು ಹಿಂದೆ ಬಂದಿದೆ) ಆದರೂ ಭೀಮಸೇನರು ಸರ್ವಜ್ಞರು, ಎಲ್ಲ ವಿದ್ಯೆಗಳನ್ನು ಬಲ್ಲವರು ಎಂದು ಜಗತ್ತಿಗೆ ತೋರಿಸುವುದಕ್ಕಾಗಿ ಶ್ರೀಹರಿಯು ಅಸ್ತ್ರ ವಿದ್ಯೆಯನ್ನು ಉಪಯೋಗಿಸಲು ಆಜ್ಞೆ ಮಾಡಿದ್ದರು.

**"ಭಕ್ತರ ಕೀರ್ತಿಯೇ ಭಗವಂತನಿಗೆ ಪ್ರೀತಿ"** ಎಂಬುದು ಎದ್ದು ಕಾಣುತ್ತದೆ.

**ಪ್ರತ್ಯಕ್ಷೇ ಭೂತದೇವೇಷುಂ ಬಂಧು ಜ್ಯೇಷ್ಠೇಷುವಾನತಿಂ ।**
**ಮಾರ್ಯಾದಾ ಸ್ಥಿತಯೇಽಶಾ ಸದ್ಭಗವಾನ್ಪುರುಷೋತ್ತಮಃ ॥೧೫॥**

ಪ್ರತ್ಯಕ್ಷ ಪರಮಾತ್ಮನೇ, ತಾನೇ ಮೂಲರೂಪದಿಂದ ಬಂದರೂ, ಇದುರಿನಲ್ಲಿ ಬಂದ ಇತರ ದೇವತೆಗಳಿಗೂ, ಹಿರಿಯರಾದ ಕುಂತಿ, ಧರ್ಮ ಮೊದಲಾದವರು

ನಮಸ್ಕರಿಸಿ ತೋರಿಸಿದ್ದಾರೆ. (ಲೋಕದಲ್ಲಿ ದೇವತೆಗಳಿಗೆ, ಹಿರಿಯರಿಗೆ ನಮಸ್ಕರಿಸುವ ಪದ್ಧತಿ ತಿಳಿಯಲೆಂಬುದೇ ಆತನ ಉದ್ದೇಶ) ಅಂತಹ ಪ್ರಸಂಗ ಭೀಮಸೇನ ದೇವರಿಗೆ ಒದಗಿದಾಗಲೂ ಆಯಾ ವ್ಯಕ್ತಿಗಳ ಅಂತರ್ಗತನಾದ ಪರಮಾತ್ಮನಿಗೆ ವಂದಿಸಿದ್ದಾನೆ.

ಅಸ್ತ್ರಗಳನ್ನು ಬಳಸಿದಾಗ, ಆಯಾ ಅಸ್ತ್ರಗಳ ದೇವತೆಗಳಿಗೆ ನಮಸ್ಕರಿಸಿದಂತೆ ಆಗಲಿಲ್ಲವೇ? ಎಂಬ ಶಂಕೆಗೆ ಭಿಕ್ಷೆಯ ಪ್ರಸಂಗದಲ್ಲಿ ಉತ್ತರ ಕೊಟ್ಟಾಗಿದೆ. ಇಲ್ಲಿಯೂ ಅಷ್ಟೇ. ಭೀಮಸೇನದೇವರು ಮನಸ್ಸು ಮಾಡುವುದೇ ತಡ ಆಯಾ ಅಭಿಮಾನಿ ದೇವತೆಗಳು ಅಪ್ಪಣೆಗಾಗಿ ಕೈಕಟ್ಟಿಕೊಂಡು ನಿಂತರು. ಅವುಗಳಿಗೆ ಆಜ್ಞೆಯಿತ್ತು, ಅಧಿಕಾರವಾಣಿಯಿಂದ ಕಾರ್ಯ ಮಾಡಿಸಿದ್ದಾರೆ, ಪ್ರಾರ್ಥನೆಯಿಂದಲ್ಲ.

**ತತ್ರಾಪಿ ವಿಷ್ಣುಮೇವಾಸೌ ನಮೇನ್ನಾನ್ಯಂ ಕಥಂಚನ ।**
**ಆಜ್ಞಯೈವಾಸ್ತ್ರ ದೇವಾಂಶ್ಚ ಪ್ರೇರಯಾಮಾಸ ನಾರ್ಥನಾತ್ ॥೧೬॥**

ಪ್ರತ್ಯಕ್ಷ ಬಂದ ದೇವತೆಗಳಲ್ಲೂ, ಹಿರಿಯರಿಗೆ ಮಾತ್ರ ಅವರಲ್ಲಿ ಅಂತರ್ಗತನಾದ ಶ್ರೀ ಹರಿಗೆಯೇ ನಮಿಸಿದ್ದಾನೆ. ಇತರ ದೇವತೆಗಳಿಗೆ ಅಲ್ಲ. ಅನ್ಯರಿಗೆ ಎಂದೂ ಅವರು ಬಾಗಿದವರಲ್ಲ. ಅಸ್ತ್ರಾಭಿಮಾನಿ ದೇವತೆಗಳಿಗೂ ಕೂಡ ಅವರು ಪ್ರಾರ್ಥಿಸಿಲ್ಲ. ಭೃತ್ಯರಿಂದ ಕಾರ್ಯ ಮಾಡಿಸುವಂತೆ ಅಪ್ಪಣೆಯಿತ್ತು ಕಾರ್ಯ ಮಾಡಿಸಿದ್ದಾರೆ.

**ಅನ್ವೇನಮೇವ ತದ್ಧರ್ಮೇ ಕೃಷ್ಣೈಕಾ ಸಂಸ್ಥಿತಾಸದಾ ।**
**ಧೃತರಾಷ್ಟ್ರಾದಪಿವರಂ ತತೋನಾತ್ಮಾರ್ಥ ಮಗ್ರಹೀತ್ ॥೧೭॥**

ಭೀಮಸೇನ ದೇವರ ಧರ್ಮವನ್ನೇ ಅನುಸರಿಸಿದ ಆತನ ಪತ್ನಿ 'ಕೃಷ್ಣಾ' ದ್ರೌಪದಿ ದೇವಿಯವರು ಕೂಡ ಶ್ರೀಕೃಷ್ಣನ ಧರ್ಮಾಚರಣೆಯಲ್ಲಿ ಸದಾ ನಿರತರಾಗಿರುತ್ತಿದ್ದರು. ಅವರು ಕೂಡ, ಯಾರನ್ನೂ, ಏನನ್ನೂ ಎಂದೂ ಬೇಡಿದವರಲ್ಲ. ಅಂತೆಯೇ ಮಾವನಾದ ಧೃತರಾಷ್ಟ್ರನು ಎರಡು ವರಗಳನ್ನು ಕೇಳು ಎಂದಾಗ, ತಮಗಾಗಿ ಒಂದನ್ನೂ ಸ್ವೀಕರಿಸಲಿಲ್ಲ.

ವಿ. ವಿ. : ಮಾವನಿಂದ ಸೊಸೆಯು ತನಗಾಗಿ ವರ ಪಡೆಯಬಹುದೆಂದು ಶಾಸ್ತ್ರ ಸಮ್ಮತವಿದ್ದರೂ, ಅದನ್ನು ಅವರು ತ್ಯಜಿಸಿದ್ದಾರೆ. ಅಂತೆಯೇ ಭೀಮಸೇನದೇವರಿಗೆ ತಕ್ಕ ಪತ್ನಿಯಾಗಿ ಮೆರೆದಿದ್ದಾರೆ.

**ನಾ ಶಪದ್ಧಾರ್ತರಾಷ್ಟ್ರಾಂಶ್ಚ ಮಹಾಪದ್ಯಪಿ ನಾತತಃ ।**
**ನಾವಾಚಾ ಮನಸಾ ವಾಪಿ ಪ್ರತೀಪಂ ಕೇಶವೇಽಚರತ್ ॥೧೮॥**

**ಅನ್ಯೇ ಭಾಗವತತ್ವೇಽಪಿ ಭಿನ್ನಧರ್ಮಾಃ ಕ್ವಚಿತ್ಕ್ವಚಿತ್ ॥೧೯॥**

ಪತಿದೇವರ ಧರ್ಮವನ್ನೇ ಅನುಸರಿಸಿದ ದ್ರೌಪದಿ ದೇವಿಯರು, ತಾವು ಶಾಪ ಕೊಡಲು ಸಮರ್ಥರಾಗಿದ್ದರೂ ಕೂಡ, ಮಹಾ ಆಪತ್ಕಾಲದಲ್ಲೂ ಧೃತರಾಷ್ಟ್ರನ ಮಕ್ಕಳಿಗೆ ಶಾಪ ಕೊಡಲಿಲ್ಲ.ಕಾಯೇನ, ವಾಚಾ, ಮನಸಾ ಅವರು ಎಂದು ಶ್ರೀಹರಿಯ ವಿರೋಧವನ್ನು ಮಾಡಿಲ್ಲ. ಚಿಂತಿಸಿಯೂ ಇಲ್ಲ.

ಇತರರು, ಭಾಗವತ ತತ್ವಗಳಲ್ಲಿ ನಂಬಿಕೆಯುಳ್ಳವರು, ಭಗವದ್ಭಕ್ತರು ಕೂಡ, ಭಾಗವತ ಧರ್ಮದ ವಿರುದ್ಧ ಆಚರಿಸಿದ್ದಾರೆ. ಅಂತೆಯೇ ಅವರನ್ನು 'ಭಿನ್ನ ಭಕ್ತರು' ಎಂದು ಕರೆಯಲಾಗುತ್ತದೆ.

**ಭಿನ್ನ ಭಕ್ತರ ಉದಾಹರಣೆಗಳು.**

**ಸ್ಯಮಂತಕಾರ್ಥೇ ರಾಮೋಽಪಿ ಕೃಷ್ಣಸ್ಯ ವಿಮನಾ ಭವತ್ ।**
**ಅವಮೇನೇಽರ್ಜುನಃ ಕೃಷ್ಣಂ ವಿಪ್ರಸ್ಯ ಶಿಶುರಕ್ಷಣೇ ॥೨೦॥**

ಬಲರಾಮ ಮತ್ತು ಅರ್ಜುನ, ಶ್ರೀಕೃಷ್ಣನಿಗೆ ಬಹು ಪ್ರಿಯರಾದವರು. ಅಲ್ಲದೆ ಶ್ರೇಷ್ಠ ಭಗವದ್ಭಕ್ತರು. ಅಂಥವರು ಕೂಡ, ಬಲರಾಮನು ಸ್ಯಮಂತಮಣಿಗಾಗಿ ಶ್ರೀಕೃಷ್ಣನೊಂದಿಗೆ ವಿಮನಸ್ಕನಾದನು. ಬ್ರಾಹ್ಮಣನ ಮಗುವನ್ನು ರಕ್ಷಿಸುವ ಪ್ರಸಂಗದಲ್ಲಿ ಅರ್ಜುನನು, ಶ್ರೀಕೃಷ್ಣನ ಮಹಿಮೆಯನ್ನು ಮರೆತನು. ಒಂದು ರೀತಿಯ ಅಗೌರವ ತೋರಿದನು.

ಇನ್ನು –

**ಪ್ರದ್ಯುಮ್ನ ಉದ್ಧವಃ ಸಾಂಬೋಽನಿರುದ್ಧಾದ್ಯಾಶ್ಚ ಸರ್ವಶಃ ।**
**ಹರೇರಿಷ್ಟಂ ಸುಭದ್ರಾಯಾಃ ಫಲ್ಗುನೇ ದಾನಮಂಜಸಾ ॥**
**ಜ್ಞಾತ್ವಾಪಿರುರುಧುಃ ಸಮ್ಯಕ್ಸಾತ್ಯಕಿಃ ಕೃಷ್ಣ ಸಮ್ಮಿತಮ್ ॥೨೧॥**

**ಕದಾಚಿನ್ಮನ್ಯತೇ ಪಾರ್ಥಂ ಧರ್ಮಜೋಽಪಿ ನರಂಹರಿಂ ।**
**ಮತ್ವಾಬಿಭೇಜ್ಜರಾ ಸಂಧವಧೇ ಕೃಷ್ಣ ಮುದೀರಿತುಂ ॥೨೨॥**

ಪ್ರದ್ಯುಮ್ನ, ಉದ್ಧವ, ಸಾಂಬ, ಅನಿರುದ್ಧ ಮೊದಲಾದವರು ಶ್ರೀಕೃಷ್ಣನ ಇಚ್ಛೆಗೆ ವಿರುದ್ಧವಾಗಿ ನಡೆದಿದ್ದಾರೆ. ಶ್ರೀಕೃಷ್ಣನು, ಸುಭದ್ರೆಯನ್ನು ಅರ್ಜುನನಿಗೆ ಕೊಡಲು ಇಚ್ಛೆಯುಳ್ಳವನಾಗಿದ್ದಾನೆ ಎಂಬುದನ್ನು ಚೆನ್ನಾಗಿ ತಿಳಿದು ಕೂಡ ವಿರೋಧಿಸಿದರು. ಸಾತ್ಯಕಿ ಜ್ಞಾನಿಯಾಗಿದ್ದರೂ, ಅರ್ಜುನನನ್ನು ಶ್ರೀಕೃಷ್ಣನಿಗೆ 'ಸಮ' ಎಂದು ತಿಳಿದಿದ್ದಾನೆ. ಧರ್ಮರಾಜನಾದರೋ ಶ್ರೀಕೃಷ್ಣನನ್ನು ನರನೆಂದೇ ಭಾವಿಸಿ, ಇವರಿಂದ ಜರಾಸಂಧನ ವಧೆ ಸಾಧ್ಯವೇ ಎಂದು ಶಂಕಿಸಿದನು, ಹೆದರಿದನು.

**ಬಂಧನಂ ಶಂಕಮಾನೋಽಪಿ ಕೃಷ್ಣಸ್ಯ ವಿದುರೋಽಪಿತು ।**
**ಕೌರವೇಯ ಸಭಾಮಧ್ಯೇ ನಾಮತಾರ ಮರೋಚಯತ್ ॥೨೩॥**

ಭಕ್ತಶ್ರೇಷ್ಠನಾದ ವಿದುರನು ಕೂಡ, ಕೌರವರ ಸಭೆಯಲ್ಲಿ ಶ್ರೀಕೃಷ್ಣನನ್ನು ಬಂಧಿಸಬಹುದೇನೋ ಎಂದು ಅನುಮಾನಿಸಿದನು. ಅದಕ್ಕಾಗಿ ಶ್ರೀಕೃಷ್ಣನು ಬರುವುದನ್ನು ಕೇಳಿ ಅವನು ಸಂತೋಷಪಡಲಿಲ್ಲ.

**ನಕುಲಃ ಕರದಾನಾಯ ಪ್ರೇಕ್ಷಯಾಮಾ ಸಕೇಶವೇ ।**
**ಅವಮೇನೇ ಹರೇರ್ಬುದ್ಧಿಂ ಸಹದೇವಃ ಕುಲಕ್ಷಯಾತ್ ॥೨೪॥**

ನಕುಲನು, ಕರದ ವಸೂಲಿಗಾಗಿ, ಶ್ರೀಕೃಷ್ಣನಲ್ಲಿಗೆ ದೂತನನ್ನು ಕಳಿಸಿದನು. (ಅಂದರೆ ತಾನು ಶ್ರೀಕೃಷ್ಣನಿಗಿಂತ ದೊಡ್ಡವನು ಎಂದು ನಕುಲನ ತಿಳುವಳಿಕೆ) ಶ್ರೀಕೃಷ್ಣನ

ಬುದ್ಧಿಯಿಂದಲೇ ವಿಚಾರಗಳಿಂದಲೇ ನಮ್ಮ ಕುಲದ ನಾಶವಾಯಿತು ಎಂಬುದು ಸಹದೇವನ ವಿಚಾರ.

**ದೇವಕೀ ವಸುದೇವಾದ್ಯಾಃ ಮೇನಿರೇ ಮಾನುಷಂ ಹರಿಂ ।**
**ಭೀಷ್ಮಸ್ತು ಭಾರ್ಗವಂ ರಾಮ ಮವಮೇನೇ ಯುಯೋಧಚ ॥೨೫॥**

ವಸುದೇವ ದೇವಕಿ ಮೊದಲ್ಗೊಂಡು ಎಲ್ಲರೂ ಶ್ರೀಕೃಷ್ಣನನ್ನು ಮಾನವನೆಂದೇ ತಿಳಿದರು. ಭೀಷ್ಮರಂಥವರು ಭಾರ್ಗವರಾಮನನ್ನು (ಪರಶುರಾಮನನ್ನು) ನಿಂದಿಸಿದರು. ಯುದ್ಧವನ್ನೂ ಮಾಡಿದರು.

**ದ್ರೋಣಕರ್ಣದ್ರೌಣಿ ಕೃಪಾಃ ಕೃಷ್ಣಾಭಾವೇ ಮನೋದಧುಃ ।**
**ದೇವಾಃ ಶಿವಾದ್ಯಾ ಅಪಿತು ವಿರೋಧಂ ಚಕ್ರಿರೇ ಕ್ವಚಿತ್ ॥೨೬॥**

ದ್ರೋಣ, ಕರ್ಣ, ಅಶ್ವತ್ಥಾಮ, ಕೃಪಾಚಾರ್ಯ ಮೊದಲಾದವರು ಯುದ್ಧದಲ್ಲಿ ಕೃಷ್ಣನನ್ನು ಇಲ್ಲದಂತೆ ಮಾಡಬೇಕು ಎಂದು ಯೋಚಿಸಿದರು. ಮಹರುದ್ರದೇವರು ಮತ್ತು ಇತರ ದೇವತೆಗಳು ಕೂಡ ಶ್ರೀಕೃಷ್ಣನ ವಿರೋಧವನ್ನು ವ್ಯಕ್ತ ಮಾಡಿದ್ದಾರೆ.

**ಋಷಿ ಮಾನುಷಗಂಧರ್ವಾ ವಕ್ತವ್ಯಾಃ ಕಿಮತಃ ಪರಂ ।**
**ಜನ್ಮ ಜನ್ಮಾಂತರೇಽ ಜ್ಞಾನಾದವಜಾನಂತಿಯತ್ಸದಾ ॥೨೭॥**

ಋಷಿ ಮುನಿಗಳು, ನರಗಂಧರ್ವರು, ಮಾನವರು ಇವರೆಲ್ಲರೂ, ಜನ್ಮ ಜನ್ಮಗಳಲ್ಲೂ ಅಜ್ಞಾನದಿಂದ ಆವರಿಸಿದವರು. ಅಂಥವರು ಕದಾಚಿತ್ ತಿರಸ್ಕರಿಸಿದರೆ, ಅದೇನು ಅಚ್ಚರಿಯೇ? ಇವರೆಲ್ಲರೂ ಭಿನ್ನ ಧರ್ಮರೆಂದು ಬೇರೆ ಹೇಳಬೇಕೆ?

**ತಸ್ಮಾದೇಕೋ ವಾಯುರೇವ ಧರ್ಮೇಭಾಗವತೆ ಸ್ಥಿತಃ ।**
**ಲಕ್ಷ್ಮೀಃ ಸರಸ್ವತೀಚೇತಿ ಪರಶುಕ್ಲತ್ರಯಂ ಶ್ರುತಂ ॥೨೮॥**

ಆದ್ದರಿಂದ ವಾಯುದೇವರೊಬ್ಬರೇ ಯಾವಾಗಲೂ ಭಾಗವತ ಧರ್ಮದಲ್ಲಿ ನಿರತರಾಗಿರತಕ್ಕವರು. ಸರಸ್ವತಿ ಮತ್ತು ಶ್ರೀಃ ಅಂದರೆ ಭಾರತೀಯರು. ಈ ಮೂರು ಜನರನ್ನು 'ಪರಶುಕ್ಲತ್ರಯರು' ಎಂದು ಕರೆಯಲಾಗಿದೆ. ಅಂದರೆ ಈ ಮೂರುಜನ ಪರಮಾತ್ಮನನ ಬಗೆಗೆ ಶುದ್ಧವಾದ ಭಕ್ತಿಯುಳ್ಳವರು.

ಹರಿಕಥಾಮೃತಸಾರ :

ಅಭಿನ್ನ ಭಕ್ತರು ಎನಿಸು ತಿಹರು ಸು ।
ವರ್ಣಶೇಷಾದ್ಯಯರರೆಲ್ಲಾ ।
ಭಿನ್ನಭಕ್ತರು ನಾಲ್ವರೆನಿಪರು ಭಾರತಿ ಪ್ರಾಣ ॥
ಸೊನ್ನೊಡಲ ವಾಗ್ದೇವಿಯರು ಪಣೆ
ಗಣ್ಣ ಮೊದಲಾದವರೊಳಗೆ ತ
ತ್ತನ್ನಿಯಾಮಕರಾಗಿ ವ್ಯಾಪಾರವನೆ ಮಾಡುವರು ॥

ಸಂಧಿ ೨೪ – ೧೪

**ಸರ್ವಮೇತಚ್ಚ ಕಥಿತಂ ತತ್ರ ತತ್ರಾಮಿತಾತ್ಮನಾ ।**
**ವ್ಯಾಸೇನೈವ ಪುರಾಣೇಷು ಭಾರತೇಚ ಸ್ವಸಂವಿದಾ ॥೨೯॥**

ಈ ಮಾತನ್ನು ಪರಮ ಶ್ರೇಷ್ಠಜ್ಞಾನಿಗಳಾದ ವ್ಯಾಸರೇ ಅನೇಕ ಪುರಾಣಗಳಲ್ಲಿ, ಭಾರತದಲ್ಲಿಯೂ ಅಲ್ಲಲ್ಲಿ ಹೇಳಿದ್ದಾರೆ.

ಮೇಲಿನ ಅನೇಕ ಶ್ಲೋಕಗಳಲ್ಲಿ ಭಿನ್ನಭಕ್ತರ ವಿವರ ಕೊಡಲಾಗಿದೆ. ಜೊತೆಯಲ್ಲಿ ಅಭಿನ್ನ ಭಕ್ತರು ನಾಲ್ಕೇ ಜನರು, ಪರಮ ಶುದ್ಧ ಭಾಗವತರು ಎಂದು ದೃಢಪಡಿಸ ಲಾಗಿದೆ. ಮೇಲಿನ ಅನೇಕ ಉದಾಹರಣೆಗಳಿಂದ ಅರ್ಜುನನು ಭೀಮಸೇನರಿಗಿಂತ ಶ್ರೇಷ್ಠನಲ್ಲ ಎಂದು ಸ್ಥಿರಪಟ್ಟಿತು.

ಈ ಶೈಲಿಯಲ್ಲಿ ಇನ್ನೊಂದು ವೈಶಿಷ್ಟ್ಯವನು ಕಾಣಬಹುದು. ಕೆಲವೇ ಶ್ಲೋಕಗಳಲ್ಲಿ ಇಡೀ ಭಾರತದ ಚಿತ್ರವನ್ನು ಕಣ್ಣಮುಂದೆ ತಂದು ನಿಲ್ಲಿಸಿದ್ದಾರೆ. ಒಂದೊಂದು ಶಬ್ದದಿಂದ ಒಂದೊಂದು ಘಟನೆ, ಅಂದಿನ ಸನ್ನಿವೇಶ ಮತ್ತು ಪರಿಣಾಮ ದೃಗ್ಗೋಚರವಾಗುತ್ತದೆ. ಅರಿಯದೇ ಇದ್ದವರಿಗೆ ಅರಿತುಕೊಳ್ಳುವ ಕುತೂಹಲ ಬೆಳೆಯುತ್ತದೆ. ಅಂತೆಯೇ ಅವರು ಸಿಂಧುವನ್ನು ಬಿಂದುವಿನಲ್ಲಿ ತೋರಬಲ್ಲರು ಎಂಬ ಖ್ಯಾತಿಯನ್ನು ಪಡೆದಿದ್ದಾರೆ.

ಹಿಂದಿನ ಘಟನೆ ಮುಂದುವರೆಯುತ್ತದೆ.

**ಯದಾ ತೇ ಸರ್ವಶಸ್ತ್ರಾಸ್ತ್ರ ವೇದಿನೋ ರಾಜಪುತ್ರ ಕಾಃ ।**
**ಬಭೂವು ರಂಗ ಮಧ್ಯೇತಾನ್ ಭಾರದ್ವಾಜೋ ವ್ಯದರ್ಶಯತ್ ॥೩೦॥**

ಎಲ್ಲ ರಾಜಕುಮಾರರು ಸರ್ವಶಸ್ತ್ರಾಸ್ತ್ರ ಕಲಿತ ನಂತರ ಅವರು ಕಲಿತ ವಿದ್ಯೆಯನ್ನು ಒಂದು ರಂಗಸ್ಥಳದಲ್ಲಿ ಪ್ರದರ್ಶಿಸಿದರು.

ದ್ರೋಣಾಚಾರ್ಯರು ಪ್ರಾರಂಭದಲ್ಲಿ,

**ರಕ್ತಚಂದನ ಸತ್ಪುಷ್ಪ ವಸ್ತ್ರಶಸ್ತ್ರ ಗುಡೋದನ್ನೈಃ ।**
**ಸಂಪೂಜ್ಯ ಭಾರ್ಗವಂ ರಾಮಮನುಆಜ್ಞೆ ಕುಮಾರಕಾನ್ ॥೩೧॥**

ಕೆಂಪು ಚಂದನ, ಒಳ್ಳೆಯ ಪುಷ್ಪಗಳಿಂದ ಅಸ್ತ್ರ ಶಸ್ತ್ರಗಳಿಗೆ ಪೂಜಿಸಿ, ಪರಮಾನ್ನ ದಿಂದ ನೈವೇದ್ಯಗೈದು, ಗುರುಗಳಾದ ಭಾರ್ಗವರಾಮನನ್ನು ಮನದಲ್ಲಿ ಭಕ್ತಿಯಿಂದ ಪೂಜಿಸಿ, ರಾಜಕುಮಾರರಿಗೆ ಆಜ್ಞೆಯಿತ್ತರು.

**ತೇ ಭೀಷ್ಮ ದ್ರೋಣ ವಿದುರ ಗಾಂಧಾರೀ ಧೃತರಾಷ್ಟ್ರಕಾನ್ ।**
**ಸರಾಜಮಂಡಲಾನ್ನತ್ವಾ ಕುಂತೀಂ ಚಾದರ್ಶಯಂ ಛ್ರಮಮ್ ॥೩೨॥**

ಆ ರಾಜಕುಮಾರರು, ಭೀಷ್ಮ, ದ್ರೋಣ, ವಿದುರ, ಗಾಂಧಾರೀ, ಧೃತರಾಷ್ಟ್ರ ಮತ್ತು ಕುಂತಿ ಮುಂತಾದ ರಾಜಸಮೂಹಕ್ಕೆ ನಮಿಸಿ, ತಮ್ಮ ಪರಿಶ್ರಮವನ್ನು ಪ್ರದರ್ಶಿಸಿದರು.

**ಸರ್ವೈಃ ಪ್ರದರ್ಶಿತೇಽಸ್ತ್ರೇ ತು ದ್ರೋಣಾದಾತ್ತಮಹಾಸ್ತ್ರವಿತ್ ।**
**ದ್ರೌಣಿರಸ್ತ್ರಾಣ್ಯ ಮೇಯಾನಿ ದರ್ಶಯಾಮಾಸ ಚಾಧಿಕಂ ॥೩೩॥**

ಎಲ್ಲರಿಂದ ಅಸ್ತ್ರ ವಿದ್ಯೆ ಪ್ರದರ್ಶನವಾದ ನಂತರ, ದ್ರೋಣಾಚಾರ್ಯರಿಂದ ವಿಶಿಷ್ಟವಾದ, ಇನ್ನೊಬ್ಬರಿಗೆ ತಿಳಿಯಲು ಅಸಾಧ್ಯವಾದ ಅಸ್ತ್ರವನ್ನು ಪಡೆದ ಅಶ್ವತ್ಥಾಮರು ಬಂದು, ಎಲ್ಲರಿಗಿಂತಲೂ ಅಧಿಕ ಅಸ್ತ್ರವಿದ್ಯೆಯನ್ನು ಪ್ರದರ್ಶಿಸಿದರು.

**ತತೋಽತ್ಯತಿತರಾಂ ಪಾರ್ಥೋ ದಿವ್ಯಾಸ್ತ್ರಾಣಿ ವ್ಯದರ್ಶಯತ್ ।**
**ಅವಿಧ್ಯನ್ಮಾಶಕೇಪಾದೇ ಪಕ್ಷಿಣಃ ಪಕ್ಷ್ಮ ಏವಚ ॥೩೪॥**

ಆಗ ಅಶ್ವತ್ಥಾಮರಿಗೂ ಅಧಿಕವಾದ ವಿದ್ಯೆಯನ್ನು ತೋರಲು, ಪಾರ್ಥನು ಅಲ್ಲಿಗೆ ಬಂದನು. ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ತೋರಿಸಿದನು. ನೊಣದ ಪಾದಕ್ಕೂ, ಹಕ್ಕಿಯ ಕಣ್ಣನ್ನು ರಕ್ಷಿಸಲು ಸಮರ್ಥವಾದ ಕಣ್ಣಿನ ರೆಪ್ಪೆಯಲ್ಲೂ ಬಾಣ ಹೊಡೆದನು.

**ಏವ ಮಾದೀನಿ ಚಿತ್ರಾಣಿ ಬಹುನ್ಯೇಷ ವ್ಯದರ್ಶಯತ್ ।**
**ತದೈವ ಕರ್ಣ ಆಗತ್ಯ ರಾಮೋಪಾತ್ತಾಸ್ತ್ರ ಸಂಪದಂ ।**
**ದರ್ಶಯನ್ನಧಿಕಃ ಪಾರ್ಥಾದಭೂದ್ರಾಜನ್ಯ ಸಂಸದಿ ॥೩೫॥**

ಈ ರೀತಿಯಾಗಿ ಅರ್ಜುನನು ಬಿಲ್ಲು ವಿದ್ಯೆಯಲ್ಲಿ ವಿಚಿತ್ರವಾದ ಕರಕುಶಲವನ್ನು ತೋರಿದನು. ಅದೇ ಕಾಲಕ್ಕೆ ಕರ್ಣನೂ ಅಲ್ಲಿಗೆ ಬಂದನು. ತಾನು ಪರಶುರಾಮರಿಂದ ಪಡೆದ ಅಸ್ತ್ರ ಸಂಪತ್ತನ್ನು ತೋರಿದನು. ಆ ರಾಜಕುಮಾರರ ಮಧ್ಯದಲ್ಲಿ ಅರ್ಜುನನಿಗಿಂತಲೂ ಅಧಿಕ (ಮಿಗಿಲು) ಎಂದೆನಿಸಿಕೊಂಡನು.

**ಕುಂತೀ ನಿಜಸುತಂ ಜ್ಞಾತ್ವಾ ಲಜ್ಜಯಾ ನಾವದತ್ಕೃತಂ ।**
**ಪಾರ್ಥೋಽ ಸಹಂಸ್ತಂ ಯುದ್ಧಾಯೈ ವಾಹ್ವಯೊ ಮಾಸ ಸಂಸದಿ ॥೩೬॥**

ಕುಂತಿಯು ಅವನನ್ನು ತನ್ನ ಮಗನೆಂದು ತಿಳಿದಳು. ಆದರೂ ಲಜ್ಜೆಯಿಂದ ಏನನ್ನೂ ಹೇಳದಾದಳು. ಅರ್ಜುನನು ಕರ್ಣನ ಹೆಚ್ಚಳವನ್ನು ಸಹಿಸದೆ ಅವನನ್ನು ಯುದ್ಧಕ್ಕಾಗಿ ಕರೆದನು.

**ರಣಾಯಾಕ್ಷತ್ರಿಯಾಹ್ವಾನಂ ಜಾನನ್ ಧರ್ಮಪ್ರತೀಪಕಂ ।**
**ಭೀಮೋನಿವಾರ್ಯ ಬೀಭತ್ಸುಂ ಕರ್ಣಾಯಾದಾತ್ಪ್ರತೋದಕಮ್ ॥೩೭॥**

'ಕ್ಷತ್ರಿಯನು, ಅಕ್ಷತ್ರಿಯನನ್ನು ಯುದ್ಧಕ್ಕೆ ಕರೆಯಬಾರದು'' ಇದು ಅಂದಿನ ನಿಯಮ. ಅರ್ಜುನ ಕ್ಷತ್ರಿಯ, ಕರ್ಣ ಅಕ್ಷತ್ರಿಯ, ಎಂದು ಭೀಮನು ತಿಳಿದದ್ದು.

ಅಕ್ಷತ್ರಿಯನನ್ನು ಯುದ್ಧಕ್ಕೆ ಕರೆದರೆ ಅದು ಧರ್ಮ ವಿರೋಧವೆಂದು ಭೀಮಸೇನರು ತಿಳಿಸಿದ್ದರು. ಕಾರಣ ಅವರು ಮಧ್ಯೆ ಬಂದು ತಡೆದರು. ಅಷ್ಟೇ ಅಲ್ಲ, ಕರ್ಣನಿಗೆ, ಕುದುರೆಗೆ ಹೊಡೆಯುವ ಒಂದು ಚಾಬೂಕನ್ನು ತಂದುಕೊಟ್ಟರು.

**ವಿ. ವಿ. :** ಇಲ್ಲಿ ಭೀಮಸೇನ ದೇವರು ಮಧ್ಯೆ ಪ್ರವೇಶಿಸಲು ಈ ಎರಡು ಕಾರಣಗಳನ್ನು ಕೊಡಬಹುದು.

೧) ಇಬ್ಬರ ಮಧ್ಯ ಯುದ್ಧವಾಗಬಾರದು ೨) "ಪರಶುರಾಮರ ವರದಿಂದ ಸ್ಪರ್ಧೆಯಿಲ್ಲದಾಗ ಕರ್ಣನಿಗೆ ಜಯ ನಿಶ್ಚಿತ" ಇದನ್ನು ಭೀಮಸೇನರು ಅರಿತಿದ್ದರು. ತಮ್ಮನಿಗೆ ಅಪಜಯವಾಗದಿರಲಿ ಎಂದು.

ಭೀಮಸೇನದೇವರು ಸರ್ವಜ್ಞರಲ್ಲವೇ? ಕರ್ಣನು ಯಾರೆಂಬುದನ್ನು ಅವರು ಅರಿತಿರಲಿಲ್ಲವೇ? ಅವರು ಹೀಗೆ ಏಕೆ ಮಾಡಿದರು.

ನಿಜ, ಭೀಮರು ಸರ್ವಜ್ಞರೇ. ಅವರಿಗೆ ಅವತಾರದಲ್ಲೂ ಅಜ್ಞಾನವಿಲ್ಲ. ಆದರೂ ಭಗವಂತನ ಆಜ್ಞೆಯಿಂದ ಮರ್ತ್ಯಲೋಕಕ್ಕೆ ಬಂದು, ಮಾನವನಂತೆ ನಟಿಸಬೇಕಾಗಿದೆ. ಅವರು ಈಶ ಸಂಕಲ್ಪವನ್ನು ಬಲ್ಲವರಾಗಿದ್ದರು. ಅಂತೆಯೇ ಅವರು ತಮ್ಮ ಪಾತ್ರವನ್ನು ಚೆನ್ನಾಗಿ ನಟಿಸಿದ್ದಾರೆ.

**ಅಕ್ಷತ್ರ ಸಂಸ್ಕಾರಯುತೋ ಜಾತೋಽಪಿ ಕ್ಷತ್ರಿಯೇ ಕುಲೇ ।**
**ನಕ್ಷತ್ರಿಯೋಽಹಿ ಭವತಿ ಯಥಾ ವ್ರಾತ್ಯೋ ದ್ವಿಜೋತ್ತಮಃ ॥೩೮॥**

"ಉಪನಯನಾದಿ ಸಂಸ್ಕಾರಗಳಿಲ್ಲದ ಬ್ರಾಹ್ಮಣನು ಕೇವಲ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಾತ್ರದಿಂದ ಅವನು ಬ್ರಾಹ್ಮಣೋತ್ತಮನಾಗಲಾರ. ಹಾಗೆಯೇ ಕ್ಷತ್ರಿಯ ಸಂಸ್ಕಾರಗಳಿಲ್ಲದ ಈ ಕರ್ಣನು, ಕ್ಷತ್ರಿಯ ಕುಲದಲ್ಲಿ ಹುಟ್ಟಿದ್ದರೂ ಕ್ಷತ್ರಿಯನಾಗಲಾರ" ಎಂಬುದು ಅಂದಿನ ಧರ್ಮ.

ವ್ರಾತ್ಯ – ಯುಕ್ತ ಸಂಸ್ಕಾರಗಳಿಲ್ಲದ ಬ್ರಾಹ್ಮಣ.

**ನಿರುತ್ತರೇಕೃತೇ ಕರ್ಣೇ ಭೀಮ್ನೈನೈವ ಸುಯೋಧನಃ ।**
**ಅಭ್ಯಷೇಚಯದಂಗೇಷು ರಾಜಾನಂ ಪಿತ್ರನುಜ್ಞಯೊ ॥೩೯॥**

**ಧೃತರಾಷ್ಟ್ರ ಪಕ್ಷಪಾತಾತ್ಪುತ್ರಸ್ಯಾನು ವಶೋಽಭವತ್ ॥೪೦॥**

ಭೀಮರ ಈ ಕೃತಿಯಿಂದ ಕರ್ಣನು ನಿರುತ್ತರನಾದನು. ಆಗ ದುರ್ಯೋಧನನು ತಂದೆಯ ಅಪ್ಪಣೆಯನ್ನು ಪಡೆದು, ಕರ್ಣನಿಗೆ ಅಂಗದೇಶದ ರಾಜನನ್ನಾಗಿ ಮಾಡಿದನು.

(ಧೃತರಾಷ್ಟ್ರನು ತಡೆಯಬೇಕಾಗಿತ್ತು. ಏಕೆಂದರೆ ಇದೊಂದು ರಾಜ್ಯದ ಪ್ರಶ್ನೆ. ಆ ಪ್ರದೇಶ ಎಲ್ಲರಿಗೂ ಸೇರಿದ್ದು. ಮೇಲಾಗಿ ಭೀಮನು ಗೆದ್ದು ತಂದದ್ದು) ಆದರೂ ಧೃತರಾಷ್ಟ್ರನು ಮಕ್ಕಳ ಮೋಹಕ್ಕೆ ಒಳಗಾಗಿದ್ದ ಕಾರಣ ತಡೆಯಲಿಲ್ಲ. ಬದಲಾಗಿ ಅಪ್ಪಣೆಯನ್ನೂ ಕೊಟ್ಟಿದ್ದಾನೆ.

**ವಿ. ವಿ. :** ಇಲ್ಲಿ ಒಂದು ಸೂಕ್ಷ್ಮ ವಿಚಾರ. ರಾಜ್ಯ ದೊರೆಯುವುದರಿಂದ ಕರ್ಣನು ರಾಜನಾಗಿದ್ದಾನೆ. ಆದರೂ ಅವನಿಗೆ ಹಿಂದಿನ ಸಂಸ್ಕಾರಗಳಿಲ್ಲ.

**ಅಭಿಷಿಕ್ತೇ ತದಾಕರ್ಣೇ ಹ್ಯಾಯಾದಧಿರಥಃ ಪಿತಾ ।**
**ಸರ್ವರಾಜ ಸದೋ ಮಧ್ಯೇ ವವಂದೇತಂ ವೃಷಾ ತದಾ ॥**
**ತುತುಷುಃ ಕರ್ಮಣಾತಸ್ಯ ಸಂತಃ ಸರ್ವೇ ಸಮಾಗತಾಃ ॥೪೧॥**

ಕರ್ಣನಿಗೆ ಪಟ್ಟಾಭಿಷೇಕ ಆಗುತ್ತಿರುವಾಗ, ತಂದೆಯಾದ ಅಧಿರಥನು ಅಲ್ಲಿಗೆ ಬಂದನು. ತಂದೆಯು ಬಂದದ್ದನ್ನು ಕಂಡ ಕರ್ಣನು, ಸಮಸ್ತ ರಾಜರ ಮಧ್ಯದಲ್ಲಿ ತಂದೆಗೆ ನಮಸ್ಕರಿಸಿದನು. ಕರ್ಣನ ಈ ಕೃತಿಯಿಂದ ಸಜ್ಜನರು ಸಂತುಷ್ಟಗೊಂಡರು.

"ಊರಿಗೆ ಅರಸನಾದರೂ, ತಂದೆಗೆ ಮಗನೇ ಅಲ್ಲವೇ!" ಕರ್ಣನ ಈ ಕೃತಿಯನ್ನು ಇಂದಿನ ಯುವಕರು ನೆನಪಿನಲ್ಲಿಡುವುದು ಯುಕ್ತ.

**ಭೀಮ ದುರ್ಯೋಧನೌ ತತ್ರ ಶಿಕ್ಷಾ ಸಂದರ್ಶನಚ್ಛಲಾತ್ ।**
**ಸಮಾದಾಯ ಗದೇಗುರ್ವೀ ಸಂರಂಭಾ ದಭ್ಯುದೀಯತುಃ ॥೪೨॥**

ನಂತರ ಆ ರಂಗಸ್ಥಳದಲ್ಲಿ ಭೀಮ ಮತ್ತು ದುರ್ಯೋಧನರು, ತಮ್ಮ ಗದಾಯುದ್ಧವನ್ನು (ಗದಾ ಕೌಶಲವನ್ನು) ಪ್ರದರ್ಶಿಸುವ ನೆಪದಿಂದ ದೊಡ್ಡ ದೊಡ್ಡ ಗದೆಗಳನ್ನು ಹಿಡಿದು ಕೋಪದಿಂದ ಬಂದು ಅಭಿಮುಖವಾಗಿನಿಂತರು.

**ವಿ. ವಿ. :** ಇಲ್ಲಿ ಅವರಿಬ್ಬರ ವಿದ್ಯೆಯ ಪ್ರದರ್ಶನೆಗೆ ಅವಕಾಶವಿರಲಿಲ್ಲ. ಅವರಿಬ್ಬರೂ ಈ ವಿದ್ಯೆಯನ್ನು ದ್ರೋಣಾಚಾರ್ಯರಲ್ಲಿ ಕಲಿತಿರಲಿಲ್ಲ. ಅಂತೆಯೇ ಆಚಾರ್ಯರು **'ಛಲಾತ್'** 'ನೆಪ' ಎಂಬ ಪದವನ್ನು ಬಳಸಿದ್ದಾರೆ. ಅಷ್ಟೇ ಅಲ್ಲ ಮುಂದೆ, 'ಗುರ್ವಿ' 'ದೊಡ್ಡದಾದ' ಎಂಬ ಪದವು ಗದೆಗಳಿಗಾಗಿ ಬಂದಿದೆ. **'ಸಂರಂಭಾತ್'** 'ಕೋಪದಿಂದ' ಎಂಬ ಪದವೂ ಉಪಯೋಗವಾಗಿದೆ.

ಈ ಪದಗಳನ್ನು ನೋಡಿದಾಗ ಭೀಮ ದುರ್ಯೋಧನರು ಕೇವಲ ವಿದ್ಯೆ ಪ್ರದರ್ಶನಕ್ಕಾಗಿ ಬಂದಿರಲಿಲ್ಲ. ಅದರ ಹಿನ್ನೆಲೆಯೇ ಬೇರೆಯಾಗಿತ್ತು ಎಂದು ಸ್ಪಷ್ಟವಾಗುತ್ತದೆ. ಮುಂದೆ ನೋಡಿ,

**ದೇವಾಸುರ ಮನುಷ್ಯಾದಿ ಜಗದೇತಚ್ಚರಾಚರಂ ।**
**ಸರ್ವಂತದಾ ದ್ವಿಧಾಭೂತಂ ಭೀಮದುರ್ಯೋಧನಾಶ್ರಯಾತ್ ॥೪೩॥**

ದೇವತೆಗಳು, ಅಸುರರು, ಮನುಷ್ಯರು, ಇವರಲ್ಲದೆ ಜಗತ್ತಿನಲ್ಲಿರುವ ಇತರ ಚರಾಚರಗಳು ಎರಡು ಭಾಗವಾಗಿ ವಿಂಗಡಿಸಲ್ಪಟ್ಟವು. ಕೆಲವರು ಭೀಮನ ಕಡೆಗೆ ಆದರೆ, ಕೆಲವರು ದುರ್ಯೋಧನನ ಕಡೆಗೆ.

**ದೇವಾ ದೇವಾನುಕೂಲಾಶ್ಚ ಭೀಮಮೇವ ಸಮಾಶ್ರಿತಾಃ ।**
**ಅಸುರಾ, ಅಸುರಾಶ್ಚೈವ ದುರ್ಯೋಧನ ಸಮಾಶ್ರಯೋಃ ॥೪೪॥**

ದೇವತೆಗಳು, ದೈವೀಸ್ವಭಾವದ ಭೀಮಸೇನನನ್ನು ಆಶ್ರಯಿಸಿದರೆ, ಅಸುರರು, ಅಸುರೀ ಸ್ವಭಾವದ ದುರ್ಯೋಧನನನ್ನು ಆಶ್ರಯಿಸಿದರು.

**ದ್ವಿಧಾ ಭೂತಾ ಮಾನುಷಾಶ್ಚ ದೇವಾಸುರ ವಿಭೇದತಃ ।**
**ಜಯ ಭೀಮ ಮಹಾಬಾಹೋ ಜಯ ದುರ್ಯೋಧನೇತಿಚ ॥೪೫॥**

ಮೇಲಿನ ಶ್ಲೋಕದಲ್ಲಿ ಸುರ–ಅಸುರರಲ್ಲಿ ಎರಡು ಭಾಗಗಳಾಗಿದ್ದರೆ, ಈ ಶ್ಲೋಕದಲ್ಲಿ ಮನುಷ್ಯರಲ್ಲೂ ಎರಡು ಗುಂಪುಗಳಾಗಿವೆ. ಸಜ್ಜನರು ಭೀಮಸೇನನಿಗೆ ಜಯವಾಗಲೆಂದು ಬಯಸಿದರೆ, ಇತರರು ದುರ್ಯೋಧನನನ್ನು ಬೆಂಬಲಿಸಿದರು.

ಹುಂಕಾರಾಂಶ್ಚೈವ ಘಾಟ್ಕಾರಾಂಶ್ಚಕ್ರುರ್ದೇವಾಸುರಾ ಅಪಿ ।
ದೃಷ್ಟ್ವಾ ಜಗತ್ಸು ಸಂರಬ್ಧಂ ದ್ರೋಣೋಽಥ ದ್ವಿಜಸತ್ತಮಃ ॥೪೭॥

ನೇದಂ ಜಗದ್ವಿನಶ್ಯೇತ ಭೀಮ ದುರ್ಯೋಧನಾಶ್ರಯಾತ್ ।
ಇತಿ ಪುತ್ರೇಣ ತೌ ವೀರೌ ನ್ಯವಾರಯದರಿಂದಮೌ ॥೪೮॥

ಸ್ವಕೀಯಾಯಾಂ ಸ್ವಕೀಯಾಯಾಂ ಯೋಗ್ಯತಾಯಾಂ ನತು ಕ್ವಚಿತ್ ।
ಯುವಯೋಃ ಸಮ ಇತ್ಯುಕ್ತ್ವಾ ದ್ರೌಣಿರೇತೌ ನ್ಯವಾರಯೇತ್ ॥೪೯॥

ಭೀಮ–ದುರ್ಯೋಧನರು ಯುದ್ಧ ಮಾಡಲು ಹುಂಕಾರ ಮಾಡುತ್ತ ಸಿದ್ಧರಾಗಿರಲು, ಅವರವರ ಬೆಂಬಲಕ್ಕೆ ನಿಂತ ಸುರಾಸುರರು, ಮಾನವರು ಕೂಡ ಹುಂಕಾರ ಮಾಡಹತ್ತಿದರು. ಕೇಕೆ ಹಾಕಹತ್ತಿದರು. ಕರತಾಡನ ಮಾಡಹತ್ತಿದರು. ಇಡೀ ಜಗತ್ತೇ ಕೋಪಗೊಂಡಂತೆ ಕಂಡಿತು. ಇದರಿಂದ ಜಗತ್ತೇ ನಾಶವಾಗಬಹುದೇನೋ ಎಂದು ದ್ವಿಜಸತ್ತಮರಾದ ದ್ರೋಣಾಚಾರ್ಯರು ಕಂಡರು. ಆಗ ಅವರು ಮಗನಾದ ಅಶ್ವತ್ಥಾಮನನ್ನು ಕರೆದು, "ನೀವಿಬ್ಬರು ನಿಮ್ಮ ನಿಮ್ಮ ಸ್ಥಳದಲ್ಲಿ ಪ್ರಬಲರೇ! ನಿಮ್ಮನ್ನು ಮೀರಿಸುವವರು ಯಾರೂ ಇಲ್ಲ, ನೀವಿಬ್ಬರು ವೀರರೇ! ಯುದ್ಧ ನಿಲ್ಲಲಿ" ಎಂದು ಹೇಳಿ ಕಳಿಸಿದರು. ದ್ರೋಣರ ಆಜ್ಞೆಯ ಮೇರೆಗೆ ಅವರು (ಭೀಮ–ದುರ್ಯೋಧನರು) ತಮ್ಮ ಯುದ್ಧವನ್ನು ನಿಲ್ಲಿಸಿದರು.

ದ್ರೋಣಾಜ್ಞಯಾ ವಾರಿತೌ ತೌ ಯಯತುಃ ಸ್ವಂಸ್ವಮಾಲಯಂ ।
ಸುರಾಸುರಾನ್ಸ್ಸಂರಬ್ಧಾನ್ ಕಾಲೇನ ದ್ರಷ್ಟ ಥೇತಿಚ ॥೪೯॥

ಬ್ರಹ್ಮಾ ನಿವಾರ್ಯ ಸಸುರೋಯಯೌ ಸೇ ಶಃ ಸ್ವಯಮಾಲಯಂ ॥೫೦॥

ದ್ರೋಣಾಚಾರ್ಯರ ಆಜ್ಞೆಯಿಂದ ಆ ಇಬ್ಬರು ವೀರರು ಯುದ್ಧವನ್ನು ನಿಲ್ಲಿಸಿ, ತಮ್ಮ ತಮ್ಮ ಮನೆಗಳಿಗೆ ಹೋದರು. ಆದರೂ

ಅಂತರಿಕ್ಷದಲ್ಲಿ ಸುರಾಸುರರ ಕೋಪಾಟೋಪಗಳು ಹಾಗೆಯೇ ಉಳಿದಿದ್ದವು. ಇದನ್ನು ಕಂಡು, ಬ್ರಹ್ಮದೇವರು ಬಂದು, ಕಾಲಬಂದಾಗ ಮುಂದೆ, ಪ್ರತ್ಯಕ್ಷ ಜಯಾಪಜಯಗಳನ್ನು ನೋಡುವಿರಿ ಎಂದು ಹೇಳಿ ಸಮಾಧಾನ ಮಾಡಿ, ದೇವತೆಗಳನ್ನು ಕೂಡಿಕೊಂಡು ರುದ್ರದೇವರ ಸಹಿತನಾಗಿ ತನ್ನ ಆಲಯವಾದ ಸತ್ಯ ಲೋಕಕ್ಕೆ ತೆರಳಿದನು. ಇತ್ತ,

ಕರ್ಣಂ ಹಸ್ತೇ ಪ್ರಗೃಹ್ಯೈವ ಧಾರ್ತರಾಷ್ಟ್ರೋ ಗೃಹಂಯಯೌ ।
ಪಾರ್ಥಂ ಹಸ್ತೇ ಪ್ರಗೃಹ್ಯೈವ ಭೀಮಃ ಪ್ರಾಯಾತ್ಸ್ವಮಾಲಯಮ್॥೫೧॥

ಕರ್ಣನ ಕೈಯನ್ನು ಹಿಡಿದುಕೊಂಡು ದುರ್ಯೋಧನನು ಮನೆಗೆ ಹೋದರೆ, ಅರ್ಜುನನು ಭೀಮನ ಕೈಯನ್ನು ಹಿಡಿದುಕೊಂಡು ತಮ್ಮ ಮನೆಗೆ ಹೋದನು.

ಪಾರ್ಥೇನ ಕರ್ಣೋ ಹಂತವ್ಯ ಇತ್ಯಾಸೀದ್ಭೀಮ ನಿಶ್ಚಯಃ ।
ವೈಪರೀತ್ಯೇನ ತಸ್ಯಾಸೀದ್ದುರ್ಯೋಧನ ವಿನಿಶ್ಚಯಃ ॥೫೨॥

ತದರ್ಥಂ ನೀತಿಮತುಲಾಂ ಚಕ್ರತುಸ್ತಾವು ಭಾವಪಿ ||೫೩||

'ಅರ್ಜುನನಿಂದ ಕರ್ಣನು ಕೊಲ್ಲಲ್ಪಡಬೇಕು' ಎಂದು ಭೀಮನು ನಿಶ್ಚಯಿಸಿದನು. ಅದಕ್ಕೆ ವಿಪರೀತವಾಗಿ ಅಂದರೆ ಕರ್ಣನೇ ಅರ್ಜುನನನ್ನು ಕೊಲ್ಲಬೇಕು ಎಂದು ದುರ್ಯೋಧನನು ನಿಶ್ಚಯಿಸಿದನು. ಅಂದರೆ ಕರ್ಣಾರ್ಜುನರ ನಾಶಕ್ಕಾಗಿ, ಭೀಮ ದುರ್ಯೋಧನರಿಬ್ಬರೂ ಅತುಲವಾದ ನೀತಿಯನ್ನು ನಿಶ್ಚಯಿಸಿದರು.

ತಥೋತ್ಕರ್ಷೇ ಫಲ್ಗುನಸ್ಯ ಯಶಸೋ ವಿಜಯಸ್ಯಚ ।
ಉದ್ಯೋಗ ಆಸೀದ್ಭೀಮಸ್ಯ ಧಾರ್ತರಾಷ್ಟ್ರಸ್ಯ ಚಾನ್ಯಥಾ ||೪೪||

ಅದಕ್ಕಾಗಿಯೇ ಅರ್ಜುನನ ಕೀರ್ತಿ ಮತ್ತು ವಿಜಯಕ್ಕಾಗಿ ಭೀಮನು ಬಹಳಷ್ಟು ಪ್ರಯತ್ನ ನಡೆಸಿದನು. ಅದೇ ರೀತಿಯಲ್ಲಿ ಅದರ ವಿರುದ್ಧವಾಗಿ ಕರ್ಣನ ಯಶಸ್ಸು ಮತ್ತು ಜಯಕ್ಕಾಗಿ ದುರ್ಯೋಧನನ ಪ್ರಯತ್ನವಿದ್ದಿತು.

ಭೀಮಾರ್ಥಂ ಕೇಶವೋಽನ್ಯೇಚ ದೇವಾಃ ಫಲ್ಗುನ ಪಕ್ಷಿಣಃ ।
ಆಸನ್ಯಥೈವ ರಾಮಾದ್ಯಾಃ ಸಂಗ್ರಹೇಣ ಹನೂಮತಃ ||೫೫||

ಸುರಾಃ ಸುಗ್ರೀವ ಪಕ್ಷಸ್ಥಾಃ ಪೂರ್ವಮಾಸನ್ತಥೈವ ಹಿ ।
ತದರ್ಥಮೇವ ಭೀಮಸ್ಯ ಹ್ಯನುಜತ್ವಂ ಸುರೇಶ್ವರಃ ||೫೬||

ಆಪ ಪೂರ್ವಾನುತಾಪೇನ ಭೀಮಸ್ತಥಾ ಕರೋತ್ ।
ದುರ್ಯೋಧನಾರ್ಥಂ ಕರ್ಣಸ್ಯ ಪಕ್ಷಿಣೋ ದೈತ್ಯ ದಾನವಾಃ
ಆಸುಃ ಸರ್ವೇ ಗ್ಲಹಾವೇತಾವಾಸತುಃ ಕರ್ಣ ಫಲ್ಗುನೌ ||೫೭||

ಭೀಮಸೇನದೇವರಲ್ಲಿದ್ದ ಅನುಗ್ರಹದಿಂದ, ಶ್ರೀಕೃಷ್ಣನು ಮತ್ತು ಇತರ ದೇವತೆಗಳು ಅರ್ಜುನನ ಪಕ್ಷವನ್ನು ವಹಿಸಿದರು. ಹಿಂದೆ ರಾಮಾವತಾರದಲ್ಲಿ ಹನುಮಂತನ ಅನುಗ್ರಹ ಸಂಪಾದಿಸಿದ ಸುಗ್ರೀವನಿಗೆ, ಶ್ರೀರಾಮನ ಅನುಗ್ರಹವು ದೊರೆಯಿತು.

ಹಿಂದೆ ವಾಲಿಯಾದ ದೇವೇಂದ್ರನೇ ಅನುತಾಪದಿಂದ ಇಂದು ಭೀಮಸೇನ ದೇವರ ಅನುಗ್ರಹ ಪಡೆಯಲು, ಭೀಮನ ತಮ್ಮನಾಗಿ ಹುಟ್ಟಿದ್ದಾನೆ.

ಹಿಂದೆ ಹನುಮಂತನು, ಸುಗ್ರೀವನನ್ನು ರಕ್ಷಿಸಿದಂತೆ, ಇಂದು ಭೀಮನು ಅರ್ಜುನನನ್ನು ರಕ್ಷಿಸುತ್ತಿದ್ದಾನೆ. **"ಹನುಮನು ಒಲಿದರೆ, ಹರಿತಾನೊಲಿವ"**

ದುರ್ಯೋಧನನ ಪ್ರೀತಿಗಾಗಿ ಎಲ್ಲ ದೈತ್ಯರು ಮತ್ತು ದಾನವರು ಕರ್ಣನ ಪಕ್ಷ ವನ್ನು ಅನುಸರಿಸಿದರು. ಅಂತೂ ಕರ್ಣಾರ್ಜುನರು ದ್ಯೂತದಲ್ಲಿರುವ ವಸ್ತುಗಳಂತಾದರು.

ಅಥಪ್ಯಷ್ಟೋಽದಕ್ಷಿಣಾರ್ಥಂ ದ್ರೋಣ ಆಹಕುಮಾರಕಾನ್ ।
ಬಧ್ವಾ ಪಾಂಚಾಲ ರಾಜಾನಂ ದತ್ತೇತ್ಯೋಽಚುಸ್ತಥೇತಿ ತೇ ||೫೮||

ವಿದ್ಯಾಪ್ರದರ್ಶನ ಮುಗಿದ ನಂತರ, ಗುರುದಕ್ಷಣೆಗಾಗಿ ಕೇಳಿದಾಗ, ದ್ರೋಣಾ ಚಾರ್ಯರು, ಪಾಂಚಾಲಾಧಿಪತಿಯನ್ನು ಕಟ್ಟಿ ತಂದುಕೊಡಿರಿ, ಎಂದು ಆ ರಾಜಕುಮಾರರಿಗೆ ಆಜ್ಞಾಪಿಸಿದರು. ಆಗ ಅವರು ಹಾಗೆಯೇ ಆಗಲಿ ಎಂದು ಹೇಳಿದರು.

ತೇ ಧಾರ್ತರಾಷ್ಟ್ರಾ: ಕರ್ಣೇನ ಸಹಿತಾ: ಪಾಂಡವಾ ಅಪಿ ।
ಯಯುರ್ದ್ರೋಣೇನ ಸಹಿತಾ: ಪಾಂಚಾಲ ನಗರಂ ಪ್ರತಿ ॥೫೯॥

ಆಗ ಆ ಕೌರವರು ಕರ್ಣನನ್ನು ಕೂಡಿಕೊಂಡು, ಪಾಂಡವರ ಸಹಿತನಾಗಿ, ದ್ರೋಣನೊಂದಿಗೆ ಪಾಂಚಾಲನಗರದ ಕಡೆಗೆ ನಡೆದರು.

ಅಥಾಹಭೀಮ: ಸಾಮರ್ಥ್ಯ ವಿವೇಕಾಭೀಪ್ಸಯಾ ಗುರುಂ ।
ಗರ್ವಏಷ ಕುಮಾರಾಣಾಮನಿವಾರ್ಯೋ ದ್ವಿಜೋತ್ತಮ ॥೬೦॥

ಗಚ್ಛಂ ತ್ವೇ ತೇಽಗ್ರತೋಽನ್ಯೇಷಾಂ ವಶಗೋ ದ್ರುಪದೋಭವೇತ್ ।
ನಿವೃತ್ತೇಷ್ವ ಕೃತಾರ್ಥೇಷು ವಯಂಬದ್ಧ್ವಾರಿಪುಂ ತವ ॥೬೧॥

ಆನಯಾ ಮೇಽಸಂದೇಹ ಇತಿತಸ್ಥೌ ಸಹೋದರ: ॥೬೨॥

ಸ್ವಲ್ಪ ದೂರ ಹೋದ ನಂತರ, ಭೀಮಸೇನನು, ತಮ್ಮ ಮತ್ತು ಕೌರವರ ಸಾಮರ್ಥ್ಯವನ್ನು ಜಗತ್ತಿಗೆ ತೋರಿಸುವುದಕ್ಕಾಗಿ, ಗುರುಗಳನ್ನು ಕುರಿತು, "ಹೇ ವಿಪ್ರ ಶ್ರೇಷ್ಠರೇ!, ಆ ಕೌರವರಿಗೆ ಅಹಂಕಾರ ಬಹಳವಿದೆ, ಅದನ್ನು ನಿವಾರಿಸಲೇಬೇಕು. ಕಾರಣ ಅವರು ಮುಂದೆ ಹೋಗಲಿ – ಅವರಿಗೆ ದ್ರುಪದರಾಜನು ವಶನಾಗುವುದಿಲ್ಲ. ಅವರು ತಮ್ಮ ಕಾರ್ಯ ಮಾಡದೆ ಸೋತು ಹಿಂದಿರುಗುತ್ತಾರೆ. ಆಗ ನಾವು ಹೋಗಿ ನಿಮ್ಮ ವೈರಿಯನ್ನು ಹಿಡಿದು ತಂದು ಒಪ್ಪಿಸುತ್ತೇವೆ. ಇದಕ್ಕೆ ಸಂದೇಹ ಬೇಡ" ಎಂದು ಹೇಳಿ, ತನ್ನ ತಮ್ಮಂದಿರನ್ನು ಕೂಡಿಕೊಂಡು ನಿಂತುಬಿಟ್ಟನು.

ಸದ್ರೋಣಕೇಷು ಪಾರ್ಥೇಷು ಸ್ಥಿತೇಷ್ವನ್ಯೇ ಸಸೂತಜಾ: ।
ಯಯುರಾತ್ತ ಪ್ರಹರಣಾ: ಪಾಂಚಾಲಾಂತ: ಪುರಂದ್ರುತಮ್ ॥೬೩॥

ದ್ರೋಣರು, ಪಾರ್ಥನಿಂದ ಕೂಡಿದ ಪಾಂಡವರು ನಿಂತಿರುವುದನ್ನು ಕರ್ಣನು ಗಮನಿಸಿದನು. ಆದರೂ ದುರ್ಯೋಧನಗಳ ಸಹಿತನಾಗಿ, ಶಸ್ತ್ರಾಸ್ತ್ರ ಸಜ್ಜಿತನಾಗಿ ಪಾಂಚಾಲ ನಗರ ಪ್ರವೇಶಕ್ಕಾಗಿ ವೇಗದಿಂದ ನಡೆದರು.

ಕುಮಾರಾನ್ ಗ್ರಹಣೇ ಪುಂಸಾ ನುಪಯಾತಾನುದೀಕ್ಷ್ಯ ಸ: ।
ಅಕ್ಷೌಹಿಣೀ ತ್ರಿತಯಯುಕ್ ನಿ:ಸೃತೋ ದ್ರುಪದೋ ಗೃಹಾತ್ ॥೬೪॥

ರಾಜಕುಮಾರರು, ತನ್ನನ್ನು ಹಿಡಿದುಕೊಂಡು ಹೋಗಲು ಬಂದಿರುವದನ್ನು ದ್ರುಪದನು ನೋಡಿದನು. ತಾನು ಕೂಡ ಮೂರು ಅಕ್ಷೌಹಿಣಿ ಸೈನ್ಯದೊಂದಿಗೆ ಎದುರಾದನು.

ತೇ ಶರೈರಭಿವರ್ಷಂತ: ಪರಿವಾರ್ಯ ಕುಮಾರಕಾನ್ ।
ಆರ್ದಯಾಮಾಸುರುದ್ವೃತ್ತಾಂಸ್ತ್ರಿಯೋ ಬಾಲಾಶ್ಚ ಸರ್ವಶ: ॥೬೫॥

ಪಾಂಚಾಲನಗರದ ಸ್ತ್ರೀಯರು, ಬಾಲಕರು ಕೂಡ, ಉದ್ಧತರಾಗಿ ಬಂದ ಆ ಕುಮಾರರನ್ನು ಸುತ್ತಲೂ ಆವರಿಸಿದರು. ಬಾಣಗಳ ಮಳೆಯನ್ನು ಸುರಿಸಿ ಅವರನ್ನು ಪೀಡಿಸಿದರು.

**ಹರ್ಮ್ಯಸಂಸ್ಥಾಃ ಸ್ತ್ರೀಯೋಬಾಲಾಗ್ರಾವಭಿರ್ಮುಸಲ್ಯೈರಪಿ ।**
**ಅತ್ಯರ್ಥ ಮರ್ದಯಾಮಾಸುಃ ಕುಮಾರಾನ್ಸು ಸುಖೈದಿತಾನ್ ॥೬೬॥**

ಉಪ್ಪರಿಗೆಗಳಲ್ಲಿ ನಿಂತ ಸ್ತ್ರೀಯರು, ಬಾಲಕರು, ಕಲ್ಲುಗಳನ್ನು ಒಗೆದರು, ಒನಕೆಗಳಿಂದಲೂ ಥಳಿಸಿ, ಸುಖವಾಗಿ ಬೆಳೆದ ಆ ರಾಜಕುಮಾರರಿಗೆ ಬಹು ಪರಿಯಿಂದ ಪೀಡಿಸಿದರು.

ಇದಕ್ಕೆ ಕಾರಣ –

**ದ್ರುಪದಸ್ಯವರ್‍ಹ್ಯಸ್ತಿ ಸೂರ್ಯದತ್ತಸ್ತಪೋಬಲಾತ್ ।**
**ಆಯೋಜನಾತ್ಪುರಮುವ ನತ್ವಾಂ ಜೇಷ್ಯತಿಕಶ್ಚನ ॥೬೭॥**

**ಇತಿ ತೇನ ವರೇಣೈವ ಸುಖ ಸಂವರ್ಧಿತಾಶ್ಚ ತೇ ।**
**ಭಗ್ನಾಃ ಕುಮಾರಾ ಆವೃತ್ಯದುದ್ರುವುರ್ಯತ್ರ ಪಾಂಡವಾಃ ॥೬೮॥**

"ನಿನ್ನ ಪಟ್ಟಣದ ಯೋಜನ ಒಳಗೆ, ನಿನ್ನನ್ನು ಯಾರೂ ಗೆಲ್ಲಲಾರದು" ಹೀಗೆಂದು ದ್ರುಪದ ರಾಜನು ತಪಸ್ಸಿನಿಂದ ಸೂರ್ಯನನ್ನು ಮೆಚ್ಚಿಸಿ ವರ ಪಡೆದಿದ್ದನು. (ಆ ವರವೇ ಅವನಿಗೂ, ಅವನ ನಗರಕ್ಕೂ ರಕ್ಷಾ ಕವಚವಾಗಿತ್ತು.) ಆದ್ದರಿಂದ ಆ ರಾಜಕುಮಾರರು ಚೆನ್ನಾಗಿ ಪೆಟ್ಟು ತಿಂದು, ಸೋತು, ಪಾಂಡವರಿದ್ದಲ್ಲಿಗೆ ಕೂಡಿಬಂದರು.

**ಸ್ತ್ರೀ ಬಾಲವೃದ್ಧ ಸಹಿತೈ ಪಾಂಚಾಲ್ಯೈರಪ್ಯನುದ್ರುತಾಃ ।**
**ಭೀಮಾರ್ಜುನೇತಿ ವಾಶಂತೋ ಯಯುರ್ಯತ್ರಸ್ಥ ಪಾಂಡವಾಃ ॥೬೯॥**

ಪಾಂಚಾಲದ ಸ್ತ್ರೀಯರು, ಬಾಲಕರು, ವೃದ್ಧರು ಆ ರಾಜಕುಮಾರರನ್ನು ಹಿಂಬಾಲಿಸಿಯೇ ಇದ್ದರು. ಆ ಕುಮಾರರು ಗಾಬರಿಯಿಂದ ಹೇ ಭೀಮಾ ಹೇ ಅರ್ಜುನಾ, ಎಂದು ಕೂಗುತ್ತಲೇ ಪಾಂಡವರಿದ್ದಲ್ಲಿಗೆ ಬಂದರು.

**ತಾನ್ ಪ್ರಭಗ್ನಾನ್ಸಮಾಲೋಕ್ಯ ಭೀಮಃ ಪ್ರಹರತಾಂ ವರಃ ।**
**ಆರು ರೋಹ ರಥಂ ವೀರಃ ಪುರ ಆತ್ತ ಶರಾಸನಃ ॥೭೦॥**

ಹಿಡಿದ ಕಾರ್ಯವನ್ನು ಪೂರ್ಣಗೊಳಿಸುವ ಸಾಮರ್ಥ್ಯವುಳ್ಳ ವೀರರಲ್ಲಿ ಶ್ರೇಷ್ಠನಾದ ಭೀಮಸೇನನು, ಪರಾಜಯ ಹೊಂದಿ ಹಿಂದಿರುಗಿದ ರಾಜಕುಮಾರರನ್ನು ನೋಡಿದನು. ತಾನು ಆಯುಧಗಳಿಂದ ಸಜ್ಜಾಗಿ ರಥವನ್ನೇರಿ ನಿಂತನು.

**ತಮನ್ವಯಾದಿಂದ್ರ ಸೂನುರ್ಯಮೌ ತಸ್ಯೈವ ಚಕ್ರಯೋಃ ।**
**ಯುಧಿಷ್ಠಿರಸ್ತು ದ್ರೋಣೇನ ಸಹಿತ ಸ್ಥೌ ನಿರೀಕ್ಷಕಃ ॥೭೧॥**

ಭೀಮನನ್ನು ಅನುಸರಿಸಿ ಅರ್ಜುನನು, ಆತನನ್ನನುಸರಿಸಿ ನಕುಲ ಸಹದೇವರು ತಮ್ಮ ತಮ್ಮ ರಥಗಳಲ್ಲಿ ಸಿದ್ಧರಾದರು. ಧರ್ಮರಾಜ ಮತ್ತು ದ್ರೋಣರು ಅಲ್ಲಿಯೇ ನಿರೀಕ್ಷಿತರಾಗಿ ನಿಂತರು.

**ಆಯಾಂತಮಗ್ರತೋ ದೃಷ್ಟ್ವಾ ಭೀಮಾತ್ತ ಶರಾಸನಂ ।**
**ದುದ್ರುವುಃ ಸರ್ವಪಾಂಚಾಲಾ ವಿವಿಶುಃ ಪುರಮೇವಚ ॥೬೨॥**

ಮುಂಚೂಣಿಯಲ್ಲಿ ಅಸ್ತ್ರಧಾರಿಯಾಗಿ ಬರುತ್ತಿರುವ ಭೀಮನನ್ನು ಕಂಡು ಪಾಂಚಾಲರು ಓಡಿ, ತಮ್ಮ ಪುರವನ್ನು ಪ್ರವೇಶಿಸಿದರು.

**ದ್ರುಪದಸ್ತ್ವಭ್ಯಯಾದ್ಭೀಮಂ ಸಪುತ್ರಃ ಸಹಸೇನಯಾ ।**
**ಚಕ್ರ ರಕ್ಷಾವತಸ್ಯಾಸ್ತಾಂ ಯುಧಾಮನ್ಯೂತ್ತಮೇಜ ಸೌ ॥೬೩॥**

ದ್ರುಪದರಾಜನು ತನ್ನ ಮಕ್ಕಳು ಮತ್ತು ಸೈನ್ಯಸಹಿತನಾಗಿ ಭೀಮನಿಗೆ ಎದುರಾದನು. ಯುಧಾಮನ್ಯು ಮತ್ತು ಉತ್ತಮೇಜಸ ಎಂಬ ಇಬ್ಬರು ಮಕ್ಕಳು ರಥದ ರಕ್ಷಕರಾಗಿದ್ದರು.

**ಯುಧಾಮನ್ಯು ಮತ್ತು ಉತ್ತಮೋಜಸರ ಪೂರ್ವ ವೃತ್ತಾಂತ**

**ಧಾತ್ರರ್ಯಮಾವೇಶಯುತೌ ವಿಶ್ವಾವಸು ಪರಾವಸೂ ।**
**ಸುತೌ ತಸ್ಯ ಮಹಾವೀರ್ಯೌಸತ್ಯಜಿತ್ಪೃಷ್ಠತೋಽಭವತ್ ॥೬೪॥**

ಇವರು ಪೂರ್ವದಲ್ಲಿ ವಿಶ್ವಾವಸು, ಪರಾವಸು ಎಂಬ ಗಂಧರ್ವರು. ಧಾತಾ ಮತ್ತು ಆರ್ಯಮಾ ಎಂಬ ಆದಿತ್ಯರ ಸನ್ನಿಧಾನವುಳ್ಳವರು. ಮಹಾವೀರರು ಮತ್ತು ಪರಾಕ್ರಮಿಗಳು. ಇಂದು ದ್ರುಪದ ರಾಜನಿಗೆ ಮಕ್ಕಳಾಗಿ ಹುಟ್ಟಿದ್ದಾರೆ. ಸತ್ಯಜಿತ ಎಂಬುವ ಮಗ ರಥದ ರಕ್ಷಕರಾಗಿ ಹಿಂಬದಿಯಲ್ಲಿ ನಿಂತಿದ್ದಾರೆ.

**ಸ ಮಿತ್ರಾಂಶಯುತೋ ವೀರಶ್ಚಿತ್ರಸೇನೋ ಮಹಾರಥಃ ।**
**ಅಗ್ರತಸ್ತು ಶಿಖಂಡ್ಯಾಗಾದ್ರಥೋದಾರಃ ಶರಾನ್ ಕ್ಷಿಪನ್ ॥೬೫॥**

ಸತ್ಯಜಿತು, ಮಿತ್ರನೆಂಬ ಆದಿತ್ಯನ ಅಂಶದಿಂದ ಕೂಡಿದವನು. ಅಂತರ ಗಾಮಿಯೂ ಅಹುದು. ಚಿತ್ರಸೇನ, ಪೂರ್ವದಲ್ಲಿ ಅದೇ ಹೆಸರಿನ ಗಂಧರ್ವನು. ಅವನು ಶ್ರೇಷ್ಠ ರಥಿಕನು. ಶಿಖಂಡಿಯು ಮುಂಭಾಗದಲ್ಲಿ ಬಾಣಗಳನ್ನು ಧರಿಸಿ ಸಿದ್ಧನಾಗಿದ್ದಾನೆ।

**ಜನಮೇಜಯ ಸ್ತಮನ್ವೇವ ಪೂರ್ವಂ ಚಿತ್ರರಥೋಽಹಿಯಃ ।**
**ತ್ವಷ್ಟು ರಾವೇಶ ಸಂಯುಕ್ತಃ ಸಶರಾನಭ್ಯ ವರ್ಷತ ॥೬೬॥**

ಜನಮೇಜಯನು, ಹಿಂದೆ ಚಿತ್ರರಥ ಎಂಬ ಗಂಧರ್ವನು ತ್ವಷ್ಟಾ ಎಂಬ ಆದಿತ್ಯನ ಆವೇಶದಿಂದ ಕೂಡಿದ್ದಾನೆ. ಅವನೂ ದ್ರುಪದ ರಾಜನ ಮಗನೇ. ಜನಮೇಜಯನು ಕೂಡ ಶಿಖಂಡಿಯನ್ನು ಅನುಸರಿಸಿ ಬಾಣಗಳ ವರ್ಷವನ್ನೇ ಕರೆಯುತ್ತಿದ್ದಾನೆ.

**ತಾವುಭೌ ವಿರಥೌ ಕೃತ್ವಾ ವಿಚಾಪೌಚ ವಿವರ್ಮಕೌ ।**
**ಭೀಮೋ ಜಘಾನ ತಾಂ ಸೇನಾಂ ಸವಾಜಿರಥಕುಂಜರಾಮ್ ॥೬೭॥**

ಭೀಮನು (ಜನಮೇಜಯ ಮತ್ತು ಶಿಖಂಡಿ) ಇಬ್ಬರನ್ನೂ ರಥ ವಿಹೀನರನ್ನಾಗಿ ಮಾಡಿದನು. ಅವರ ಬಾಣಗಳನ್ನು ಕತ್ತರಿಸಿದನು. ಕವಚವನ್ನು ಕೀಳಿದನು (ಕಿತ್ತೆಸೆದನು) ದ್ರುಪದ ರಾಜನ ರಥ, ಆನೆ, ಕುದುರೆಗಳಿಂದ ಕೂಡಿದ ಸೈನ್ಯವನ್ನು ನಾಶಮಾಡಿದನು.

ಅಥೈನಂ ಶರವರ್ಷೇಣ ಯುಧಾಮನ್ಯೂತ್ತ ಮೌಜಸೌ ।
ಭೀಮಯತು ಸ್ತೌವಿರಥೌ ಚಕ್ರೇ ಭೀಮೋ ನಿರಾಯುಧೌ ॥೭೮॥

ಇದನ್ನು ಕಂಡ ಯುಧಾಮನ್ಯು ಮತ್ತು ಉತ್ತಮೋಜಸ, ಇಬ್ಬರು ಬಂದು ಭೀಮನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು. ಭೀಮನೊಬ್ಬನೇ ಅವರಿಬ್ಬರ ರಥಗಳನ್ನು ಕತ್ತರಿಸಿದನು. ನಿರಾಯುಧರನ್ನಾಗಿಯೇ ಮಾಡಿದನು.

ಹಸ್ತಪ್ರಾಪ್ತಂ ಪಾಂಚಾಲಂ ನಾಗ್ರಹೀತ್ವ ವೃಕೋದರಃ ।
ಗುರ್ವರ್ಥಮರ್ಜುನಸ್ಯೋರ್ವೀಂ ಪ್ರತಿಜ್ಞಾಂ ಕರ್ತುಮಪ್ಯತಾಮ್ ॥೭೯॥

ಮಾನ ಭಂಗಾಯ ಕರ್ಣಸ್ಯ ಪಾರ್ಥಮೇವಸ್ಯಯೋಜಯೇತ್ ।
ಸ ಶರಾನ್ ಕ್ಷಿಪತಸ್ತಸ್ಯ ಪಾಂಚಾಲಸ್ಯಾರ್ಜುನೋ ದ್ರುತಂ
ಪುಪ್ಲುವೇ ಸ್ಯಂದನೇಚಾಪಂ ಭಿತ್ವಾತಂ ಚಾಗ್ರಹೀತ್ಕ್ಷಣಾತ್ ॥೮೦॥

ಕೈಗೆ ಸಿಕ್ಕ ಪಾಂಚಾಲ ರಾಜನನ್ನು ಭೀಮನು ಹಿಡಿಯಲಿಲ್ಲ. ಏಕೆ? ಗುರುಗಳ ಪ್ರಯೋಜನಕ್ಕಾಗಿ, ಅರ್ಜುನನು ಮಾಡಿದ ಶ್ರೇಷ್ಠ ಪ್ರತಿಜ್ಞೆಯನ್ನು ಪೂರ್ತಿಗೊಳಿಸಬೇಕಾಗಿದೆ. ಅಹಂಕಾರಿಯಾದ ಕರ್ಣನ ಮಾನಭಂಗವನ್ನು ಪಾರ್ಥನಿಂದಲೇ ಮಾಡಿಸಬೇಕಾಗಿದೆ. (ಅದಕ್ಕಾಗಿ ಭೀಮನು ಮೌನನಾಗಿದ್ದನು). ಅರ್ಜುನನು, ಬಾಣಗಳ ಪ್ರಯೋಗದಲ್ಲಿ ತೊಡಗಿದ ಪಾಂಚಾಲ ರಾಜನ ರಥದ ಮೇಲೆ ಶೀಘ್ರದಲ್ಲಿ ಹಾರಿದನು. ಆತನ ಬಿಲ್ಲು ಬಾಣಗಳನ್ನು ಕತ್ತರಿಸಿ, ಕ್ಷಣಾರ್ಧದಲ್ಲಿ ಆತನನ್ನು ಹಿಡಿದನು.

ಸಿಂಹೋ ಮೃಗಮಿವಾದಾಯ ಸ್ವರಥಂ ಚಾಭಿ ಪೇದಿವಾನ್ ।
ಅಥ ಪ್ರಕುಪಿತಂ ಸೈನ್ಯಂ ಫಲ್ಗುನಂ ಪರ್ಯವಾರಯತ್ ॥೮೧॥

ಸಿಂಹವು ಮೃಗವನ್ನು ಹಿಡಿದು ತರುವಂತೆ, ಅರ್ಜುನನು ದ್ರುಪದನನ್ನು ಹಿಡಿದು ತಂದು ತನ್ನ ರಥಕ್ಕೆ ಕಟ್ಟಿದನು. ಆ ಸನ್ನಿವೇಶದಲ್ಲಿ ಕುಪಿತಗೊಂಡ ಸೈನ್ಯವು ಅರ್ಜುನನಿಗೆ ಮುತ್ತಿಗೆ ಹಾಕಿತು.

ಜಘಾನ ಭೀಮಸ್ತರಸಾ ತತ್ಸೈನ್ಯಂ ಶರ ವೃಷ್ಟಿಭಿಃ ।
ಅಥ ಸತ್ಯಜದಭ್ಯಾಗಾತ್ಪಾರ್ಥಂ ಮುಂಚನ್ ಶರಾನ್ಬಹೂನ್ ॥೮೨॥

ಭೀಮನು, ದ್ರುಪದ ರಾಜನ ಸೈನ್ಯವನ್ನು ಶರವೃಷ್ಟಿಯಿಂದ ನಾಶ ಮಾಡಿದನು. ಆಗ ಸತ್ಯಜಿತ್ ಎಂಬವನು ಬಂದು ಅರ್ಜುನನಿಗೆ ಎದುರಾದನು.

ತಮರ್ಜುನಃ ಕ್ಷಣೇನೈವ ಚಕ್ರೇ ವಿರಥ ಕಾರ್ಮುಕಂ ।
ಘ್ನಂತಂ ಭೀಮಂ ಪುನಃ ಸೈನ್ಯಮರ್ಜುನಃ ಪ್ರಾಹಮಾ ಭವಾನ್ ॥೮೩॥

ಸೇನಾ ಮರ್ಹಂತಿ ರಾಜ್ಞೋಸ್ಯ ವೀರಹಂತುಮಶೇಷತಃ ।
ಸಂಬಂಧ ಯೋಗ್ಯಸ್ತಾ ತಸ್ಯ ಸಖಾಽಯಂ ನಃ ಸುಧಾರ್ಮಿಕಃ ॥೮೪॥

**ನೇಷ್ಯಾಮ ಏನಮೇಪಾತೋ ಗುರೋರ್ವಚನ ಗೌರವಾತ್ ।**
**ಸ್ನೇಹಪಾಶಂ ತತಶ್ಚಕ್ರೇ ಬೀಭತ್ಸೌ ದ್ರುಪದೋऽಧಿಕಮ್ ॥೮೫॥**

ಅರ್ಜುನನು ಕ್ಷಣಾರ್ಧದಲ್ಲಿ ಸತ್ಯಜಿತನ ಬಾಣಗಳನ್ನು ಕತ್ತರಿಸಿ ಸೋಲಿಸಿದನು. ಪರಾಕ್ರಮಿಯಾದ ಭೀಮನು, ದ್ರುಪದನ ಸೈನ್ಯವನ್ನು ನಾಶ ಮಾಡುತ್ತಿರುವುದನ್ನು ಅರ್ಜುನನು ನೋಡಿದನು. ಕೂಡಲೇ ಬಂದು, ಹೇ ವೀರನಾದ ಅಣ್ಣಾ! ಈ ಸೈನ್ಯ ಕೊಲ್ಲಲು ಅರ್ಹವಲ್ಲ. ದ್ರುಪದನು ಧಾರ್ಮಿಕನು, ತಂದೆಯಾದ ಪಾಂಡುರಾಜನಿಗೆ ಸಖನು. ಸಂಬಂಧಕ್ಕೆ ಯೋಗ್ಯನಾದವನು. ಗುರುಗಳ ಮಾತಿನಲ್ಲಿ ಗೌರವವಿಟ್ಟು ಈ ದ್ರುಪದನನ್ನೇ ಕರೆದುಕೊಂಡು ಹೋಗೋಣ! ಎಂದನು. ಅರ್ಜುನನ ಈ ಮಾತುಗಳನ್ನು ಕೇಳಿದ ದ್ರುಪದನಿಗೆ, ಅವನಲ್ಲಿ ಆದರ ಗೌರವಗಳು ಹೆಚ್ಚಾದವು. ಅವನು ಸ್ನೇಹಪಾಶದಲ್ಲಿ ಬಂಧಿಸಲ್ಪಟ್ಟನು.

**ತತಃ ಸೇನಾಂ ವಿಹಾಯ್ಯೆವ ಭೀಮೋಬೀಭತ್ಸುಮನ್ವಹಾತ್ ।**
**ಮುಕ್ತಾ ಕಥಂಚಿತ್ ಭೀಮಾಸ್ಯಾತ್ಸಾಸೇನಾ ದುದ್ರುವೇ ಭಯಾತ್ ॥೮೬॥**

ಅರ್ಜುನನ ಮಾತುಗಳನ್ನು ಕೇಳಿದ ಭೀಮನು, ಸೈನ್ಯವನ್ನು ಬಿಟ್ಟನು. ಅರ್ಜುನನನ್ನು ಅನುಸರಿಸಿದನು. ಭೀಮನ ಕೈಯಿಂದ, ಕಷ್ಟದಿಂದ ಪಾರಾದ ಸೈನ್ಯವು ಹೆದರಿ ಓಡಿಹೋಯಿತು.

**ವಿ. ವಿ. :** ಇಲ್ಲಿ ಒಂದು ವಿಚಾರ. ಪಾಂಡವರು ಕೌರವರು ಕೂಡಿಯೇ ದ್ರುಪದನನ್ನು ಹಿಡಿಯಲು ಹೋಗಿದ್ದರು. ಆದರೂ ಭೀಮಸೇನರ ಯುಕ್ತಿಯಿಂದ ಕುರು–ಪಾಂಡವರು, ಎರಡು ಗುಂಪುಗಳಾದವು. ಮೊದಲು ಕೌರವರು ದಾಳಿ ಮಾಡಿದರು. ಸೈನ್ಯದಿಂದಲ್ಲ, ಬಾಣ ಬತ್ತಳಿಕೆಗಳಿಂದಲ್ಲ, ಕೇವಲ ಬಾಲಕರ ಕಲ್ಲುಗಳಿಗೆ, ಸ್ತ್ರೀಯರ ಒನಕೆಗಳಿಗೆ, ವೃದ್ಧರ ಬಡಿಗೆಗಳಿಗೆ ತುತ್ತಾಗಿ, ಪೆಟ್ಟನ್ನು ತಾಳಲಾರದೆ, ಸೋತು ಕೂಗುತ್ತ ಹಿಂದಿರುಗಿ ಬಂದು ಪಾಂಡವರನ್ನು ಸೇರಿದರು.

ಬೆನ್ನಟ್ಟಿದ ಜನ, ಸೈನ್ಯ, ದ್ರುಪದರಾಜ, ಆತನ ಮಕ್ಕಳು ಪಾಂಡವರ ಮೇಲೂ ಹಲ್ಲೆ ಮಾಡಿದರು. ಆದರೂ ಪಾಂಡವರು ದ್ರುಪದನನ್ನು ಸದೆಬಡಿದು ದ್ರುಪದನನ್ನು ಬಂದಿಯಾಗಿ ಮಾಡಿದರು. ಇದಕ್ಕೆ ಕಾರಣಗಳೇನಿರಬಹುದು.

ಓದುಗರಲ್ಲಿ ಈ ಬಗೆಯ ವಿಚಾರ ಸ್ವಾಭಾವಿಕ. ಅವರಿಗೆ ಈ ರೀತಿ ಸಮಾಧಾನ ಹೇಳಬಹುದು. ಮೇಲಿನ ಶ್ಲೋಕಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ, ಭೀಮನ ಮಾತುಗಳಿಂದ ಆಚಾರ್ಯರು ಕೆಲವು ವಿಚಾರಗಳನ್ನು ಹೊರಗೆಡಹಿದ್ದಾರೆ.

೧) ಕರ್ಣನ ಬಲದಿಂದ ಕೌರವರಿಗೆ ಅಹಂಕಾರ ವೃದ್ಧಿಯಾಗಿತ್ತು. ಈ ಘಟನೆಯಿಂದ ಅವರ ಅಹಂಕಾರ ನಾಶವಾಯಿತು. **ಅಹಂಕಾರವು ಯಾರಿಗೂ ಒಳ್ಳೆಯದಲ್ಲ.**

೨) ಭೀಮಸೇನ ದೇವರು ಸರ್ವಜ್ಞರಾದುದರಿಂದ ಸೂರ್ಯನ ವರದ ಕಲ್ಪನೆ ಅವರಿಗಿತ್ತು. ಅಂತೆಯೇ ಅವರು ದ್ರೋಣರನ್ನು, ಪಾಂಡವರನ್ನು ಮಾರ್ಗದಲ್ಲಿಯೇ

ತಡೆದು, ಕೌರವರನ್ನು ಮುಂದೆ ಕಳಿಸಿದ್ದಾರೆ. ಅವರು ತಡೆದ ಅಂತರ ಸೂರ್ಯನ ವರದ ಪರಿಮಿತಿಯನ್ನು ಮೀರಿ ದೂರವಿರಬೇಕು. ಅಲ್ಲಿ ವರದ ಪ್ರಭಾವ ಅಸಾಧ್ಯ. ಇದನ್ನರಿಯದ ಕೌರವರು ಊರಲ್ಲಿ ನುಗ್ಗಿದರು. ಮೈಯನ್ನು ಮೆತ್ತಗೆ ಮಾಡಿಕೊಂಡರು. ಪರಾಜಯವನ್ನು ಅನುಭವಿಸಿದರು. ಇಲ್ಲಿ ಭೀಮನ ಬುದ್ಧಿವಂತಿಕೆ ವ್ಯಕ್ತವಾಗುತ್ತದೆ.

೩) ತಾರತಮ್ಯದ ದೃಷ್ಟಿಯಿಂದ ನೋಡಿದಾಗ, ವಾಯುದೇವರು ಸೂರ್ಯನಿಗಿಂತ ಅನೇಕ ಗುಣಗಳಿಂದ ಬಲಶಾಲಿಗಳು. 'ರಾಮಾಯಣದಲ್ಲಿ' ವಾಯುರೂಪದ ಹನುಮಂತನು ಬ್ರಹ್ಮನ ವರಗಳನ್ನೇ ಲೆಕ್ಕಿಸದೆ ಕಾರ್ಯವನ್ನು ಸಾಧಿಸಿದ್ದಾನೆ. ಇಲ್ಲಿ ಸೂರ್ಯನ ವರವು ಭೀಮನಿಗೆ ಅಡ್ಡಿಯಾಗಬಲ್ಲುದೇ? ಅಂತೆಯೇ ಕೌರವರು ಸೋತರು, ಪಾಂಡವರಿಗೆ ಗೆಲುವಾಯಿತು.

**ದ್ರುಪದಂ ಸ್ಥಾಪಯಾಮಾಸಾಥಾರ್ಜುನೋ ದ್ರೋಣಸನ್ನಿಧೌ ।**
**ಪಪ್ರಚ್ಛೈನಂ ತದಾದ್ರೋಣಃ ಸಖ್ಯಮಸ್ತ್ಯತ ನೇತಿವಾ ॥೮೭॥**

ಅರ್ಜುನನು, ದ್ರೋಣಾಚಾರ್ಯರ ಹತ್ತಿರ ದ್ರುಪದನನ್ನು ತಂದು ನಿಲ್ಲಿಸಿದನು. ಆಗ ದ್ರೋಣಾಚಾರ್ಯರು, ದ್ರುಪದನನ್ನು ಕುರಿತು, ಈಗಲಾದರೂ ಮಿತ್ರತ್ವ ಇದೆಯೋ? ಇಲ್ಲವೋ? ಎಂದು ಕೇಳಿದರು. (ಪರ್ಯಾಯವಾಗಿ ಮೂದಲಿಸಿದರು)

**ಅಸ್ತೀದಾನೀಮಿತಿಪ್ರಾಹ ದ್ರುಪದೋಽಂಗಿರಸಾಂ ವರಂ ।**
**ಅಥಾಹ ದ್ರುಪದಂ ದ್ರೋಣಃ ಸಖ್ಯಮಿಚ್ಛೇಽಕ್ಷಯಂ ತವ ॥೮೮॥**

ಆಗ ದ್ರುಪದನು, ಅಂಗೀರಸ ವಂಶದಲ್ಲಿ ಶ್ರೇಷ್ಠರಾದ ದ್ರೋಣರಿಗೆ 'ಈಗ ಸಖ್ಯವಿದೆ' ಎಂದು ಹೇಳಿದನು. ಅದಕ್ಕೆ, ನಿನ್ನಿಂದ ಅಕ್ಷಯವಾದ ಸಖ್ಯವನ್ನು ಬಯಸುತ್ತೇನೆ.

**ನಹ್ಯರಾಜ್ಞೋ ಭವೇ ತ್ಸಖ್ಯಂ ತವೇತೀದಂ ಕೃತಂಮಯಾ ।**
**ನವಿಪ್ರಧರ್ಮೋ ಯುದ್ಧ್ಯಮತಸ್ತ್ವಂ ನಯಯಾಧೃತಃ ॥೮೯॥**

ರಾಜನಲ್ಲದವನಿಗೆ ನಿನ್ನಲ್ಲಿ ಸಖ್ಯವಿರಲಿಲ್ಲ. ಅದಕ್ಕಾಗಿ ನಿನ್ನನ್ನು ಇಲ್ಲಿಗೆ ತರಲಾಯಿತು. ವಿಪ್ರನಿಗೆ ಯುದ್ಧವು ಧರ್ಮವಲ್ಲ. ಅದಕ್ಕಾಗಿ ನಾನು ನಿನ್ನನ್ನು ಹಿಡಿದು ತರಲಿಲ್ಲ.

**ಶಿಷ್ಯೈ ರೇತತ್ಕಾರಿತಂಮೇ ತವಸಖ್ಯ ಮಭೀಪ್ಸತಾ ।**
**ಅತಃ ಸಖ್ಯಾರ್ಥಮೇವಾದ್ಯ ತ್ವದ್ರಾಜ್ಯರ್ಧೋ ಹೃತೋಮಯಾ ॥೯೦॥**

ನಿನ್ನ ಸಖ್ಯವನ್ನು ಬಯಸಿಯೇ, ನನ್ನ ಶಿಷ್ಯರಿಂದ ನಿನ್ನನ್ನು ಇಲ್ಲಿಗೆ ಹಿಡಿತರಿಸಿದೆನು. ಈಗ ಆ ಸಖ್ಯವು ಸ್ಥಿರವಾಗಿ ಇರಲಿ ಎನ್ನುವ ದೃಷ್ಟಿಯಿಂದಲೇ ನಿನ್ನ ರಾಜ್ಯದಲ್ಲಿ ಅರ್ಧವನ್ನು ನಾನು ತೆಗೆದುಕೊಂಡಿದ್ದೇನೆ.

**ಗಂಗಾಯಾ ದಕ್ಷಿಣೇ ಕೂಲೇ ತ್ವಂ ರಾಜೈವೋತ್ತರೇತ್ವಹಂ ।**
**ನಹ್ಯರಾಜತ್ವ ಏಕಸ್ಯ ಸಖ್ಯಂ ಸ್ಯಾದಾವಯೋಃ ಸಖೇ ॥೯೧॥**

ಎಲೈ ಮಿತ್ರನೇ, ಗಂಗಾ ನದಿಯ ದಕ್ಷಿಣ ಭಾಗದಲ್ಲಿ ನೀನು ರಾಜನು. ಉತ್ತರ ಭಾಗದಲ್ಲಿ ನಾನು ರಾಜನು. ಏಕೆಂದರೆ, ಒಬ್ಬನಿಗೆಯೇ ರಾಜ್ಯವಿದ್ದಲ್ಲಿ ಸಖ್ಯ ಉಳಿಯಲಾರದು.

**ಇತ್ಯುಕ್ತ್ವೋನ್ಮುಚ್ಯತಂ ದ್ರೋಣೋ ರಾಜ್ಯಾರ್ಧಂ ಗೃಹ್ಯ ಚಾಮುತಃ ।**
**ಯಯೌ ಶಿಷ್ಯೈರ್ನಾಗಪುರಂನ್ಯವಸತ್ಸುಖಿ ಮತ್ರಚ ॥೯೨॥**

ದ್ರೋಣರು ಈ ರೀತಿಯಾಗಿ ನುಡಿದು, ದ್ರುಪದನನ್ನು ಬಂಧನದಿಂದ ಬಿಡಿಸಿದರು. ಆತನಿಂದ ಅರ್ಧರಾಜ್ಯವನ್ನೂ ಪಡೆದು, ಶಿಷ್ಯರೊಂದಿಗೆ ಹಸ್ತಿನಾವತಿಗೆ ಬಂದು ಸುಖವಾಗಿದ್ದರು.

ದ್ರೋಣರು ದ್ವಿಜೋತ್ತಮರಾಗಿ ಹೀಗೆ ಮಾಡಿದ್ದು ಸರಿಯೇ? ಅದಕ್ಕೆ ಆಚಾರ್ಯರ ಸಮಾಧಾನ ಸಿದ್ಧವಿದೆ.

**ಬ್ರಾಹ್ಮಣ್ಯತ್ಯಾಗ ಭೀರುಸ್ಸನ್ನಾಗೃಹ್ಣಾದ್ಧನುರಪ್ಯಸೌ ।**
**ಧಾರ್ತ ರಾಷ್ಟ್ರೈಸ್ತು ಭೀಮಸ್ಯಭಯೋತ್ಪಾದೌ ಪ್ರಣಮ್ಯ ಚ ॥೯೩॥**

**ಶರಣಾರ್ಥಂ ಯಾಚಿತತ್ವಾತ್ಸಪುತ್ರೋ ಯುಯುಧೇ ಪಾರ್ಥೈಃ ।**
**ಏವಂ ಹರೀಚ್ಛಯೈವಾಸೌ ಕ್ಷಾತ್ರಂ ಧರ್ಮಮಪೇಯವಾನ್ ॥೯೪॥**

ಬ್ರಾಹ್ಮಣ ಧರ್ಮ ಬಿಡುವ ಪ್ರಸಂಗ ಬರಬಹುದೆಂಬ ಭಯದಿಂದ, ಬಿಲ್ಲು ವಿದ್ಯೆಯನ್ನು ಬಲ್ಲವರಾದರೂ ಬಿಲ್ಲನ್ನು ಹಿಡಿಯಲಿಲ್ಲ.

**ಅಂದರೆ ಮುಂದೆ ಯುದ್ಧ ಮಾಡಿದರಲ್ಲ? ಎಂದರೆ,**

ಭೀಮನ ಭಯದಿಂದ ಕೌರವರು ಬಂದು ದ್ರೋಣರ ಕಾಲಿಗೆರಗಿದರು. ರಕ್ಷಣೆಗಾಗಿ ಪ್ರಾರ್ಥಿಸಿದರು. ಶರಣಾಗತರ ರಕ್ಷಣೆಗೆ ದ್ರೋಣರು ಮಗನಾದ ಅಶ್ವತ್ಥಾಮರನ್ನು ಕೂಡಿಕೊಂಡು ಪಾಂಡವರೊಡನೆ ಯುದ್ಧ ಮಾಡಿದರು. **ಕೊನೆಯಲ್ಲಿ ಆಚಾರ್ಯರ ನಿರ್ಣಯ, ಶ್ರೀಹರಿಯ ಇಚ್ಛೆಯಿಂದಲೇ ಅವರು ಕ್ಷಾತ್ರ ಧರ್ಮನ್ನು ಸ್ವೀಕರಿಸಿದರು.**

**ವಿ. ವಿ. :** ದ್ರೋಣರು, ಮೊದಲು ಪರಶುರಾಮರ ಹತ್ತಿರ 'ಆಕಳಿಗಾಗಿ' ಕೇಳಬೇಕೆಂದು ಹೋದಾಗಲೂ, ನಂತರ ದ್ರುಪದನ ಹತ್ತಿರ ಬಂದು ಕೇಳಿದಾಗಲೂ ಮಾನಸಿಕ ಸಮಾಧಾನಕ್ಕೆ ಕೆಲವು ಕಾರಣಗಳನ್ನು ಕೊಟ್ಟಿದ್ದಾರೆ. ಅದು ವಾಚಕರ ನೆನಪಿನಲ್ಲಿರಬಹುದು. ಇಲ್ಲಿಯೂ ಅದೇ ರೀತಿಯಾಗಿ ಕಾರಣ ಕೊಡಲು ಪ್ರಯತ್ನಿಸಿದ್ದಾರೆ. ಆದರೆ ಅವು ಅಷ್ಟು ತೃಪ್ತಿಕರ ಆಗಿಲ್ಲ. ಅಂತೆಯೇ ಆಚಾರ್ಯರು "ಹರೀಚ್ಛಯಾ" ಎಂದು ನಿರ್ಣಯಿಸಿದ್ದಾರೆ.

**ಇಲ್ಲಿ ಒಂದು ವಿಷಯ,** ಪರಮಾತ್ಮನ ಅವತಾರದ ಕಾಲಕ್ಕೆ ಮೊದಲು ಮತ್ತು ನಂತರ ಅನೇಕ ದೇವತೆಗಳು ಅಂಗಭೂತರಾಗಿ ಹುಟ್ಟುತ್ತಾರೆ ಎಂದು ಆಚಾರ್ಯರು ಮೊದಲೇ ಅಪ್ಪಣೆ ಕೊಡಿಸಿದ್ದಾರೆ. ಆಗ ಬ್ರಹ್ಮನು ಈ ರೀತಿಯ ಕಾರ್ಯಗಳನ್ನು ಮಾಡಿರಿ ಎಂದು ಆದೇಶವಿತ್ತು ಕಳಿಸಿರುತ್ತಾರೆ. ಅದನ್ನು ಪಾಲಿಸುವುದು ಜೀವಿಯ ಕರ್ತವ್ಯ ಹಾಗೂ ಅನಿವಾರ್ಯ. ಅಂತೆಯೇ ಅವರು ಹಾಗೆ ಮಾಡಿದ್ದಾರೆ.

ಉದಾಹರಣೆಗೆ ಒಂದು ನಾಟಕದ ಕಂಪನಿಯಿದೆ ಎಂದು ಭಾವಿಸಿ. ಆ ಕಂಪನಿಗೆ ಸೇರಿದವನು, ಸೇರಿದ ಮೇಲೆ, ಕಂಪನಿಯ ಮಾಲಕನು ಕೊಟ್ಟ ಪಾತ್ರವನ್ನು ವಹಿಸಬೇಕು, ಪಾತ್ರಕ್ಕೆ ತಕ್ಕಂತೆ ಚೆನ್ನಾಗಿ ನಟಿಸಿದರೆ ಮಾತ್ರ ಯಜಮಾನನು ಸಂತುಷ್ಟನಾಗುತ್ತಾನೆ. ನಾನು ಶುದ್ಧ ಬ್ರಾಹ್ಮಣ ಕುಡುಕನ ಪಾತ್ರ ಹೇಗೆ ವಹಿಸಲಿ? ಎಂದು ಆಕ್ಷೇಪವೆತ್ತಿದರೆ ಏನು ಪ್ರಯೋಜನ? ಉತ್ತಮ ಪಾತ್ರಧಾರಿಯ ಕಾರ್ಯವನ್ನು ದ್ರೋಣರು ಮಾಡಿ ಪರಮಾತ್ಮನ ಪ್ರೀತಿಗೆ ಪಾತ್ರರಾಗಿದ್ದಾರೆ.

**ಜಗತ್ತು ಒಂದು ನಾಟಕ ಶಾಲೆ, ಪರಮಾತ್ಮ ಸೂತ್ರಧಾರಿ, ಜೀವನು ಸೂತ್ರದ ಬೊಂಬೆ ಅವನು ಕುಣಿಸಿದಂತೆ ಕುಣಿಯಲೇಬೇಕು. ಇದು ಅನಿವಾರ್ಯ ಹಾಗೂ ಶ್ರೇಷ್ಠ.**

ಅಂತೆಯೇ ಆಚಾರ್ಯರು ತಮ್ಮ ಸಿದ್ಧಾಂತದಲ್ಲಿ **''ದೇವತೆಗಳು ಮಾಡಿದಂತೆ ಮಾಡಬೇಡಿರಿ ಅವರು ಹೇಳಿದಂತೆ ನಡೆಯಿರಿ''** ದೇವತೆಗಳ ಕಾರ್ಯ ಒಮ್ಮೊಮ್ಮೆ ನಮಗೆ ಅಧರ್ಮದಂತೆ ಕಂಡರೂ ಅವರಿಗೆ ಅದೇ ಧರ್ಮವಾಗಿರುತ್ತದೆ. ದ್ರೋಣರ ಪಾತ್ರದಲ್ಲಿ ಆ ತತ್ವವನ್ನು ಕಾಣಬೇಕು. ಟೀಕಿಸುವುದರಲ್ಲಿ ಅರ್ಥವಿಲ್ಲ. ಮೇಲಿನ ವಾಕ್ಯವನ್ನು ಭಕ್ತನು ಯಾವಾಗಲೂ ಸ್ಮರಿಸುತ್ತಲಿರಬೇಕು.

**ಇತ್ತ,**

**ದ್ರುಪದಸ್ತು ದಿವಾರಾತ್ರಂ ತಪ್ಯಮಾನಃ ಪರಾಭವತ್ ।**
**ಭೀಮಾರ್ಜುನ ಬಲಂ ದೃಷ್ಟ್ವಾ ಚೈಚ್ಛತ್ಪಾಂಡವ ಸಂಶ್ರಯಮ್ ॥೯೫॥**

**ಸಂಬಂಧೀ ತ್ವರ್ಜುನ ವಚಶ್ಚಿ ಕೀರ್ಷುಃ ಸತ್ಯಮೇವಚ ।**
**ಮಾರ್ದವಂಚಾರ್ಜುನೇ ದೃಷ್ಟ್ವಾ ಸುತಾಮೈಚ್ಛತ್ತದರ್ಥತಃ ॥೯೬॥**

ದ್ರುಪದರಾಜನು, ತನಗುಂಟಾದ ಪರಾಭವ ಮತ್ತು ಅಪಮಾನಗಳಿಂದ ಸಾಕಷ್ಟು ನೊಂದಿದ್ದನು. ಹಗಲೂರಾತ್ರಿ ಅದೇ ಚಿಂತೆಯಲ್ಲಿದ್ದನು. ಅಲ್ಲದೆ ಭೀಮಾರ್ಜುನರ ಬಲವನ್ನೂ ಕಂಡಿದ್ದನು. ಆದಕ್ಕಾಗಿ ಅವರ ಆಶ್ರಯ ಪಡೆಯಬೇಕೆಂದು ಇಚ್ಛಿಸಿದನು. ಜೊತೆಯಲ್ಲಿಯೇ ಅರ್ಜುನನು ''ಸಂಬಂಧಕ್ಕೆ ಯೋಗ್ಯ'' ಎಂದು ಹೇಳಿದ ವಾಕ್ಯ ಅವನಿಗೆ ಬಹಳ ಹಿಡಿಸಿತ್ತು. ಅಲ್ಲಿ ಅರ್ಜುನನ ಮೃದು ಸ್ವಭಾವವನ್ನೂ ಕಂಡಿದ್ದನು. ಅರ್ಜುನನ ಸಂಬಂಧ ಸತ್ಯ ಮಾಡಬೇಕು ಎಂದು ಬಗೆದನು. ಆದಕ್ಕಾಗಿಯೇ ಒಳ್ಳೆಯ ಮಗಳನ್ನು ಪಡೆಯುವ ಇಚ್ಛೆಯನ್ನು ಮಾಡಿದನು.

**ಪುತ್ರಂಚದ್ರೋಣಹಂತಾರಮಿಚ್ಛನ್ವಿಪ್ರವರೌ ಯಯೌ ।**
**ಯಾಜೋಪಯಜಾವಾನೀಯಾಥಾರ್ಬುದೇನ ಗವಾಂ ನೃಪಃ ॥೯೭॥**

**ದ್ವಿಜಾಭ್ಯಾಚಕಾರೇಷ್ಟಿಂಚ ತದ್ಭಾರ್ಯಾ ಮತ್ರ ಚಾಹುತಾ ।**
**ದ್ರುಪದಾತ್ಸುತಲಬ್ಧ್ಯರ್ಥಂ ಸಾಹಂಕಾರಾದ್ವ್ಯಲಂಬಯತ್ ॥೯೮॥**

ದ್ರೋಣಾಚಾರ್ಯರನ್ನು ಕೊಲ್ಲತಕ್ಕ ಮಗನಾಗಬೇಕು ಎಂದು ಇಚ್ಛಿಸಿ ಆ ರಾಜನು, ವಿಪ್ರಶ್ರೇಷ್ಠರಾದ ಯಾಜೋಪಯಾಜಾ ಅವನ್ನು, ಅರ್ಬುದ (ಹತ್ತುಕೋಟಿ)

ಆಕಳುಗಳನ್ನು ಇತ್ತು ಆಮಂತ್ರಿಸಿದನು. ಅವರಿಂದ ಯಾಗವನ್ನು ಮಾಡಿಸಿದನು. ದ್ರುಪದ ರಾಜನಿಗೆ ಒಂದು ಗಂಡು ಹಾಗೂ ಒಂದು ಹೆಣ್ಣು ಲಭಿಸಲಿ ಎಂದು ಅವರು ಯಜ್ಞವನ್ನು ಪ್ರಾರಂಭಿಸಿದರು. ರಾಜನ ಪತ್ನಿಯನ್ನು ಯಾಗಸ್ಥಳಕ್ಕೆ ಕರೆಸಿದರು. ಆಕೆಯು ಮಕ್ಕಳಾಗಲು ನಾನೇ ಅವಶ್ಯಕ ಎಂದು ಭಾವಿಸಿ, ಅಹಂಕಾರದಿಂದ ತಡಮಾಡಿದಳು.

**ಕಿಮೇತಯೇ ತ್ಯವಜ್ಞಾಯ ತಾವುಭೇ ವಿಪ್ರಸತ್ತಮೌ॥**
**ಅಜಹ್ವತಾಂ ತತ್ಪುತ್ರಾರ್ಥಂ ಪತ್ನ್ಯಾ ಪ್ರಾಶ್ಯಂ ಹವಿಸ್ತದಾ ॥೯೯॥**

**ಹುತೇಹವಿಷಿ ಮಂತ್ರಾಭ್ಯಾಂ ವೈಷ್ಣವಾಭ್ಯಾಂತ ದೈವಹಃ।**
**ದೀಪ್ತಾಂಗಾ ನಿರಭೋ ವಹ್ನಿಃ ಕುಂಡಮಧ್ಯಾತ್ಸಮುತ್ಥಿತಃ ॥೧೦೦॥**

ಆಗ ಆ ಇಬ್ಬರು ಬ್ರಾಹ್ಮಣರು, ಈ ಹೆಂಡತಿಯಿಂದ ನಮಗೇನಾಗಬೇಕಾಗಿದೆ, ಎಂದು ತಿರಸ್ಕರಿಸಿದರು. ಮಕ್ಕಳಿಗಾಗಿ ರಾಜನ ಪತ್ನಿ ಪ್ರಾಶನ ಮಾಡಲು ಯೋಗ್ಯವಾದ ಆ ಹವಿಸ್ಸನ್ನೇ ಅಗ್ನಿಯಲ್ಲಿ ಹೋಮಿಸಿದರು. ವೈಷ್ಣವ ದೇವತೆಗಳನ್ನು ಆಹ್ವಾನಿಸಿ, ಶ್ರೇಷ್ಠ ಮಂತ್ರಗಳಿಂದ ಆ ಹವಿಸ್ಸನ್ನು ಹೋಮಿಸುತ್ತಿರುವಾಗ, ಆ ಅಗ್ನಿಕುಂಡದ ಮಧ್ಯದಿಂದಲೇ ಅಗ್ನಿಗೆ ಸಮಾನ ತೇಜಸ್ಸಿನಿಂದ ಕೂಡಿದ ವ್ಯಕ್ತಿ ಮೇಲೆ ಬಂದಿತು.

**ಕಿರೀಟೀ ಕುಂಡಲೀ ದೀಪ್ತೋ ಹೇಮಮಾಲೀ ವರಾಸಿಮಾನ್।**
**ರಥೇನಾದಿತ್ಯವರ್ಣೇನ ನದನ್‌ಸನ್ ದ್ರುಪದ ಮಾದ್ರವತ್ ॥೧೦೧॥**

ಅಗ್ನಿ ಕುಂಡದಿಂದ ಬಂದ ವ್ಯಕ್ತಿ, ಕಿರೀಟ, ಕುಂಡಲಗಳನ್ನು ಧರಿಸಿದ್ದನು. ಬಂಗಾರದ ಆಭರಣ ಮತ್ತು ಮಾಲೆಗಳಿಂದ ಅಲಂಕೃತನಾಗಿದ್ದನು. ಒಳ್ಳೆಯ ಹರಿತವಾದ ಖಡ್ಗ, ಸೂರ್ಯನಂತೆ ಥಳಥಳಿಸುವ ರಥದಿಂದ ಕೂಡಿದವನಾಗಿ ಸಿಂಹನಾದವನ್ನು ಮಾಡುತ್ತ ಹೊರಬಂದನು.

**ಧೃಷ್ಟತ್ವಾದ್ದ್ಯೋತನತ್ವಾಚ್ಚ ಧೃಷ್ಟದ್ಯುಮ್ನ ಇತೀರಿತಃ ।**
**ಮುನಿಭಿರ್ದ್ರುಪದೇನಾಪಿ ಸರ್ವವೇದಾರ್ಥ ತತ್ವವಿತ್ ॥೧೦೨॥**

ಧೈರ್ಯ ಮತ್ತು ಪ್ರಕಾಶದಿಂದ ಕೂಡಿದವನಾದ ಕಾರಣ ಆ ಕುಮಾರನನ್ನು ಮುನಿಗಳು ಮತ್ತು ದ್ರುಪದ ರಾಜನು ಕೂಡ 'ಧೃಷ್ಟದ್ಯುಮ್ನ' ಎಂದೇ ಕರೆದರು. ಆ ಬಾಲಕನು ಎಲ್ಲ ವೇದ, ವೇದಾರ್ಥಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು.

**ಅನ್ವೇನಂ ಭಾರತೀ ಸಾಕ್ಷಾದ್ವೇದಿ ಮಧ್ಯಾತ್ಸಮುತ್ಥಿತಾ।**
**ಪ್ರಾಣೋಹಿ ಭರತೋನಾಮ ಸರ್ವಸ್ಯ ಭರಣಾತ್ ಶ್ರುತಃ ॥೧೦೩॥**

**ತದ್ಭಾರ್ಯಾ ಭಾರತೀನಾಮ ವೇದರೂಪಾ ಸರಸ್ವತೀ ।**
**ಶಂರೂಪಾಮಾಶ್ರಿತಾ ವಾಯುಂ ಶ್ರೀರಿತ್ಯೇವಚ ಕೀರ್ತಿತಾ ॥೧೦೪॥**

ಆ ಧೃಷ್ಟದ್ಯುಮ್ನನ ಹಿಂದಯೇ ಯಜ್ಞಕುಂಡದಿಂದ ಸಾಕ್ಷಾತ್ ಭಾರತೀ ದೇವಿಯರು ಮೇಲೆ ಬಂದಂತೆ. ಪ್ರಾಣವಾಯುವು ಸರ್ವರನ್ನು ರಕ್ಷಿಸುವನಾದ್ದರಿಂದ

ಆತನು ಭರತನೆಂದು ಪ್ರಖ್ಯಾತನಾಗಿದ್ದಾನೆ. ಭರತನಾಮ ವಾಯುವಿನ ಪತ್ನಿಯಾದ ಕಾರಣ ಈಕೆಯನ್ನು ಭಾರತಿ ಎಂದು ಕರೆದರು. ಈಕೆ ಸಮಸ್ತ ವೇದಗಳಿಗೆ ಅಭಿಮಾನಿಯು ಆದ್ದರಿಂದ ಈಕೆಗೆ ಸರಸ್ವತಿಯೆಂದೂ ಕರೆಯುತ್ತಾರೆ. 'ಶಂ'ರೂಪ ಅಂದರೆ ಮಂಗಲ ಕರನಾದ ವಾಯುದೇವರನ್ನು ಆಶ್ರಯಿಸಿದ ಪ್ರಯುಕ್ತ ಈಕೆಗೆ ಶ್ರೀಃ ಎಂದೂ ಕೀರ್ತಿಯಿದೆ.

ಸುಖ ಸ್ವರೂಪನಾದ ವಾಯುದೇವರಿಂದ ಕ್ರೀಡಿಸುವ ಪ್ರಯುಕ್ತ ಈಕೆಯು ಶ್ರೀ ಎಂದು ಕರೆಯಲ್ಪಡುತ್ತಾಳೆ.

**ದ್ರೌಪದಿದೇವಿಯರಲ್ಲಿರುವ ಪಂಚರೂಪಗಳು :**

**ಆದೇಶಯುಕ್ತಾ ಶಚ್ಯಾಶ್ಚ ಶ್ಯಾಮಲಾ ಯಾಸ್ತಥೋಷಸಃ।**
**ತಾಶ್ಚೇಂದ್ರ ಧರ್ಮ ನಾಸತ್ಯ ಸಂಶ್ರಯಾತ್ ಶ್ರೀಯ ಈರಿತಾಃ ॥೧೦೫॥**

ಇಂದ್ರನ ಪತ್ನಿಯಾದ ಶಚಿ, ಯಮನ ಪತ್ನಿ ಶ್ಯಾಮಲಾ, ಮತ್ತು ಅಶ್ವಿನೀ ದೇವತೆಗಳ ಹೆಂಡತಿ–ಉಷಾ ಇವರೆಲ್ಲರ ಆವೇಶದಿಂದ ಕೂಡಿದವಳು ದ್ರೌಪದಿ. ಶಚಿ, ಶ್ಯಾಮಲಾ, ಉಷಾದೇವಿಯರು, ಇಂದ್ರ, ಧರ್ಮ ಮತ್ತು ನಾಸತ್ಯ ದೇವತೆಗಳನ್ನು ಆಶ್ರಯಿಸಿದ ಕಾರಣದಿಂದಲೂ ಈಕೆ. 'ಶ್ರೀ' ಶಬ್ದದಿಂದ ಪ್ರಸಿದ್ಧಳಾಗಿದ್ದಾಳೆ.

**ಸಾ ಕೃಷ್ಣಾ ನಾಮ ತಶ್ಯಾ ಸೀದುತ್ಕೃಷ್ಟ ತ್ವಾದ್ಧಿ ಯೋಷಿತಾಂ।**
**ಕೃಷ್ಣಾಸಾ ವರ್ಣ ತಶ್ವಾಸೀದುತ್ಕೃಷ್ಟಾ ನಂದಿನೀಚ ಸಾ ॥೧೦೬॥**

ವಿ.ವಿ. : ಶ್ಲೋಕ ೮೨ ರಿಂದ ೧೦೪ರ ವರೆಗೆ ಅವಲೋಕಿಸಿದಾಗ ಓದುಗರಲ್ಲಿ ಈ ವಿಚಾರಗಳು ಹೊಳೆಯದೇ ಇರವು.

**ಪೌರಾಣಿಕ ದೃಷ್ಟಿಯಿಂದ :**

೧) ಭಾರತೀ ದೇವಿಯರ ಅವತಾರವಾಗಬೇಕು. ಮೇಲಿನ ಶ್ಲೋಕಗಳಲ್ಲಿ ಅದರ ಪೀಠಿಕೆ ಅಡಗಿದೆ.

೨) ಎಲ್ಲವೂ ಈಶ ಸಂಕಲ್ಪ, ಅದಕ್ಕೆ ತಕ್ಕಂತೆ ನಡೆಯಲೇಬೇಕು.

೩) ದೇವತೆಗಳ ಅವತಾರವಾಗಬೇಕಾದರೆ ಸ್ತ್ರೀ ಪುರುಷರ ಅವಶ್ಯಕತೆಯಿಲ್ಲ.

೪) ಅವತರಿಸುವ ದೇವತೆಗಳು ಸಾಮಾನ್ಯ ಮಕ್ಕಳಂತೆ ಹುಟ್ಟುವುದಿಲ್ಲ. ಕಿರೀಟ, ಕುಂಡಲ, ವಸ್ತ್ರಾಭರಣ, ಆಯುಧ, ಇತ್ಯಾದಿಗಳ ಸಹಿತವಾಗಿಯೇ ಅವತರಿಸುತ್ತಾರೆ. ಅವರ ಅವತಾರದ ಉದ್ದೇಶವೇ ಬೇರೆಯಾಗಿರುತ್ತದೆ. ನೆಪಕ್ಕೆ ಮಗು, ತಂದೆತಾಯಿಗಳು ಮಾತ್ರ ಮಗುವೆಂದೇ ಭಾವಿಸುತ್ತಾರೆ.

೫) ಆ ಕಾಲದಲ್ಲಿ ವಿಪ್ರರಲ್ಲಿ ಎಂತಹ ಅದ್ಭುತವಾದ ಶಕ್ತಿಯಿದ್ದಿತು. ಯಾಗ–ಯಜ್ಞಗಳಲ್ಲೂ, ಮಂತ್ರಗಳಲ್ಲೂ ಅಘಟಿತವಾದ ಘಟನೆಗಳನ್ನು ಮಾಡುವ ಸಾಮರ್ಥ್ಯವಿದ್ದಿತು.

**ಐತಿಹಾಸಿಕ ಮತ್ತು ಸಾಮಾಜಿಕ ದೃಷ್ಟಿ :**

೧) ವಿಪ್ರರಲ್ಲೂ ವೃತ್ತಿ ದೃಷ್ಟಿಯಿಂದ ವರ್ಣಸಂಕರ ಪ್ರಾರಂಭವಾಗಿತ್ತು. ಅನೇಕ ಬ್ರಾಹ್ಮಣರು ಕ್ಷಾತ್ರವೃತ್ತಿ ವಿದ್ಯೆಗಳತ್ತ ವಾಲಿದ್ದರು. ಪರಶುರಾಮರೇ ಅದಕ್ಕೆ ಕಾರಣ ಮತ್ತು ಮೂಲ ಪುರುಷರು ಎನ್ನಬಹುದೇನೋ!

೨) ಮಾನವನು ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳಲು, ಧರ್ಮದ ಮತ್ತು ಸಂಪ್ರದಾಯಗಳ ಆಶ್ರಯ ಪಡೆಯುತ್ತಾನೆ. ಸಮರ್ಥಿಸಿಕೊಳ್ಳಲೂ ಪ್ರಯತ್ನಿಸುತ್ತಾನೆ.

೩) ದ್ರೋಣರು ಕೇವಲ ಆಕಳು ಕೇಳಿದ್ದರೆ ನೂರಾರು ಪಡೆಯಬಹುದಾಗಿದ್ದಿತು. ಬದಲಾಗಿ ಯಾವುದೋ ಒಂದು ಮಹತ್ವದ ಆಕಾಂಕ್ಷೆಗೆ ಒಳಗಾದರು.

೪) ದ್ವೇಷ ಮತ್ತು ಸೇಡಿನ ಭಾವನೆಗಳು ಎಂತಹ ಕೆಟ್ಟ ಪರಿಣಾಮವನ್ನು ಬೀರುತ್ತವೆ. ದ್ರೋಣರು ಕೇವಲ ಛೇಡಿಸಿ ದ್ರುಪದನಲ್ಲಿ ದ್ವೇಷ ಬೆಳೆಸಿದರು. ದ್ರುಪದನಾದರೂ ಸೇಡಿನ ಭಾವನೆಗೊಳಗಾಗಿ ದ್ರೋಣರ ವಧೆಗಾಗಿಯೇ ಕೈಹಾಕಿದನು.

ಮೇಲಿನ ಘಟನೆಗಳಿಂದ ಪೌರಾಣಿಕ ತತ್ವಗಳನ್ನು ತಿಳಿಯುವುದು ಅಗತ್ಯ. ಜೊತೆಯಲ್ಲಿ ಸಾಮಾಜಿಕ ವಿಷಯಗಳತ್ತ ಗಮನಹರಿಸಿ ಎಚ್ಚರವಹಿಸುವುದೂ ಅಷ್ಟೇ ಅಗತ್ಯ. ಅಂದಾಗ ಮಾತ್ರ ಆಚಾರ್ಯರ ಗ್ರಂಥದ ಉದ್ದೇಶವು ಫಲಿಸುವುದೆಂದು ನಮ್ರವಾಗಿ ಹೇಳಬಯಸುತ್ತೇನೆ.

ಆ ದ್ರೌಪದಿಯು, ಸ್ತ್ರೀಯರಲ್ಲಿ ಶ್ರೇಷ್ಠಳು, ರೂಪದಲ್ಲಿ ಪರಮ ಸುಂದರಿಯು, ಆದಕಾರಣ ಎಲ್ಲರನ್ನೂ ಆಕರ್ಷಿಸುತ್ತಿದ್ದಳು. ಅದಕ್ಕಾಗಿ ಆಕೆಯನ್ನು 'ಕೃಷ್ಣಾ' ಎಂದು ಕರೆದರು. ಕೃಷ್ಣವರ್ಣಯುಕ್ತಳಾದ ಕಾರಣದಿಂದಲೂ ಆಕೆ, 'ಕೃಷ್ಣಾ' 'ನಂದಿನೀಚ' ಅಂದರೆ ದ್ರೌಪದಿ ದೇವಿಯರು, ಆನಂದ ಸ್ವರೂಪವುಳ್ಳವರು, ಆನಂದವನ್ನು ಕೊಡತಕ್ಕವ ರಾಗಿದ್ದ ಕಾರಣ, ಅವರಿಗೆ 'ಕೃಷ್ಣಾ' ಎಂಬ ಹೆಸರು ಯೋಗ್ಯವೆ.

**ಉತ್ಪತ್ತಿತಶ್ಚ ಸರ್ವಜ್ಞಾ ಸರ್ವಾಭರಣ ಭೂಷಿತಾ ।**
**ಸಂಪ್ರಾಪ್ತ ಯೌವನೈವಾಸೀದಜರಾಲೋಕ ಸುಂದರೀ ॥೧೦೭॥**

ದ್ರೌಪದಿ ದೇವಿಯರು, ಹುಟ್ಟುವಾಗಲೇ ಸರ್ವಾಭರಣಗಳಿಂದ ಅಲಂಕೃತ ರಾಗಿಯೇ ಇದ್ದರು. ಮೂಲರೂಪದಿಂದಲೇ 'ಸರ್ವಜ್ಞಾ' ಎಲ್ಲವನ್ನು ತಿಳಿದವ ಳಾಗಿದ್ದಳು. ತಾರುಣ್ಯದ ಅವಸ್ಥೆಯಲ್ಲಿಯೇ ಉದ್ಭವಿಸಿದಳು. ಮುಪ್ಪು ಎಂಬುದಿಲ್ಲ. ಲೋಕ ಸುಂದರಿಯೂ ಅಹುದು.

**ಉಮಾಂಶಯುಕ್ತಾ ನಿತರಾಂ ಸರ್ವಲಕ್ಷಣ ಸಂಯುತಾ ॥೧೦೮॥**

ದ್ರೌಪದಿ ದೇವಿಯರು ಪಾರ್ವತಿ ದೇವಿಯರ ಅಂಶದಿಂದ ಕೂಡಿದವ ರಾಗಿದ್ದರು. ಅಲ್ಲದೇ ಇತರ ಎಲ್ಲ ಸಲ್ಲಕ್ಷಣಗಳು ಅವರಲ್ಲಿದ್ದವು.

**ಪೂರ್ವ ವೃತ್ತಾಂತ :**

**ಪೂರ್ವಂ ಹ್ಯುಮಾಚ ದೇವ್ಯಸ್ತಾಃ ಕದಾಚಿ ದ್ಭರ್ತೃಭಿರ್ಯುತಾಃ ।**
**ವಿಲಾಸಂ ದರ್ಶಯಮಾಸುರ್ಬ್ರಹ್ಮಾಣಃ ಪಶ್ಯತೋಽಧಿಕಂ ।**
**ಶಶಾಪತಾಸ್ತದಾ ಬ್ರಹ್ಮಾ ಮಾನುಷೀಂ ಯೋನಿಮಾಪ್ಸ್ಯಥ ॥೧೦೯॥**

ಪೂರ್ವದಲ್ಲಿ ಒಂದುದಿನ ಪಾರ್ವತಿ, ಶಚಿ, ಶ್ಯಾಮಲಾ ಮತ್ತು ಉಷಾರೂಪರಾದ ದೇವಿಯರು, ತಮ್ಮ ಪತಿಗಳಿಂದೊಡಗೂಡಿ, ಬ್ರಹ್ಮನನ್ನು ಕಾಣಲು ಹೋದರು. ಬ್ರಹ್ಮನು ನೋಡುತ್ತಿದ್ದಂತೆಯೇ ಹೆಚ್ಚಾಗಿ ಹಾವಭಾವಗಳನ್ನು ಪ್ರದರ್ಶಿಸಿದರು. ಆಗ ಬ್ರಹ್ಮನು "ನೀವೆಲ್ಲರೂ ಮನುಷ್ಯ (ಮಾನವ) ಯೋನಿಯಲ್ಲಿ ಜನಿಸಿರಿ" ಎಂದು ಶಾಪವಿತ್ತನು.

**ತತ್ರಾಪ್ಯನ್ಯಗಾಶ್ಚ ಭವತೇ ತ್ಯೇವಂ ಶಪ್ತಾಃ ಸುರಾಂಗನಾಃ ।**
**ವಿಚಾರ್ಯ ಭಾರತೀ ಮೇತ್ಯ ಸರ್ವಮಸ್ಯೈ ನಿವೇದ್ಯ ಚ ॥೧೧೦॥**

**ಸಹಸ್ರ ವತ್ಸರಂ ಚೈನಾಂ ಶುಶ್ರೂಷಿತ್ವಾ ಬಭಾಷಿರೇ ॥೧೧೧॥**

"ಆ ಮಾನವ ಜನ್ಮದಲ್ಲಿಯು ಕೂಡ, ನಿಮಗೆ ಅನ್ಯ ಪುರುಷರ ಸ್ಪರ್ಶವಾಗಲಿ" ಎಂದು ಶಾಪ ಹೊಂದಿದ ಆ ದೇವಸ್ತ್ರೀಯರು, 'ವಾಯುದೇವರ ಸ್ಪರ್ಶ ಅನ್ಯಪುರುಷರ ಸ್ಪರ್ಶವಲ್ಲ' ಎಂದು ವಿಚಾರಿಸಿ, ಭಾರತೀ ದೇವಿಯರ ಹತ್ತಿರ ಬಂದರು. ತಾವು ಮಾಡಿದ ತಪ್ಪನ್ನು ತಮಗೆ ಉಂಟಾದ ಶಾಪವನ್ನು ಭಾರತೀ ದೇವಿಯರಿಗೆ ಬಿನ್ನೈಸಿಕೊಂಡರು ಸಾವಿರ ವರ್ಷ ಭಾರತೀ ದೇವಿಯರನ್ನು ಸೇವಿಸಿದರು.

**ದೇವಿ ನೋ ಮಾನುಷ್ಯಂ ಪ್ರಾಪ್ಯಮನ್ಯಗಾತ್ವಂ ಚ ಸರ್ವಥಾ ।**
**ತತ್ರಾಪಿ ಮಾರುತಾದನ್ಯಂ ನಸ್ಪೃಶೇಮ ಕಥಂಚನ । ॥೧೧೨॥**

ಹೇ, ದೇವಿ! ನಮಗೆ ಮಾನವ ಜನ್ಮ ಬರಬೇಕಾಗಿದೆ. ಪರಪುರುಷರ ಸ್ಪರ್ಶವೂ ಅನಿವಾರ್ಯವಾಗಿದೆ. ಮಾನವ ಜನ್ಮದಲ್ಲಿಯೂ ಕೂಡ ವಾಯುದೇವರ ವಿನಃ ನಾವು ಯಾರನ್ನೂ ಮುಟ್ಟಲಾರೆವು" ಎಂದು ವಿನಂತಿಸಿಕೊಂಡರು.

**ಬ್ರಹ್ಮಣೈವಚ ಶಪ್ತಾಃಸ್ಮಃ ಪೂರ್ವಂ ಚಾನ್ಯತ್ರ ಲೀಲಯೋ ।**
**ಏಕ ದೇಹತ್ವ ಮಾಪ್ಯೈನಂ ಯದಾವಂಚಯಿತುಂ ಗತಾಃ ॥೧೧೩॥**

ಹಿಂದೆ ಒಂದು ದಿನ ನಾವು, ಎಲ್ಲಾಗೂ ಒಂದೇ ಶರೀರದಲ್ಲಿ ಸೇರಿ, ಬ್ರಹ್ಮನಿಗೆ ಮೋಸ ಮಾಡಬೇಕೆಂದು ಆಟದ ನಿಮಿತ್ತದಿಂದ ಬ್ರಹ್ಮನಲ್ಲಿಗೆ ಹೋದೆವು. ಆಗಲೇ ನಮಗೆ ಬ್ರಹ್ಮನಿಂದ ಶಾಪ ದೊರೆಯಿತು.

**ಆ ಶಾಪದ ವಿವರ ಹೀಗಿದೆ :**

**ಏಕದೇಹಾ ಮಾನುಷತ್ವ ಮಾಪ್ಯಥತ್ರಿಶ ಉದ್ಧತಾಃ ।**
**ತ್ರಿಶೋಮಧ್ಯಂಚಸಾಯೇತಾ ಇತಿ ತೇನೋದಿತಾವಯಮ್। ॥೧೧೪॥**

**ಅತ ಸ್ತ್ರಿಯೈಕ ದೇಹತ್ವ ವಿಭ್ಯಾ ಮಾದೇವಿ ಜನ್ಮಸು**
**ಚತುರ್ಷ್ವಪಿ ಯತೋಽಸ್ಮಾಕಂ ಶಾಪದ್ವಯ ನಿಮಿತ್ತತಃ ||೧೧೫||**

"ಎಲೋ ದೃಪ್ತ (ಗರ್ವ ಹಾಗೂ ಉದ್ಧಟತನದಿಂದ ಕೂಡಿದ) ಸ್ತ್ರೀಯರೇ, ನೀವು ಏಕದೇಹರಾಗಿ ನನ್ನನ್ನು ಮೂರು ಸಲ ವಂಚಿಸಲು ಬಂದದ್ದರಿಂದ, ಮೂರು ಜನ್ಮಗಳಲ್ಲಿಯೂ ಏಕದೇಹಿಗಳಾಗಿಯೇ ಹುಟ್ಟುವಿರಿ" ಹೀಗೆ ನಮಗೆ ಬ್ರಹ್ಮನು ಶಾಪ ಕೊಟ್ಟಿದ್ದಾನೆ. ಎಲೈ ಭಾರತಿದೇವಿಯೇ ನಮಗೆ ಈ ರೀತಿ ಎರಡು ಶಾಪಗಳು ಲಭಿಸಿವೆ. ಮೂರುಸಲ ಮಾನುಷತ್ವವನ್ನು ಹೊಂದಿರಿ ಎಂಬುದು ಒಂದು ಶಾಪ. ಇತರ ಪುರುಷರ ಸ್ಪರ್ಶವುಳ್ಳವರಾಗಿರಿ ಎಂಬುದು, ಎರಡನೆಯ ಶಾಪ. ಈ ಕಾರಣಗಳಿಂದ ನಾಲ್ಕೂ ಜನ್ಮಗಳಲ್ಲೂ ಏಕದೇಹದಿಂದ ನಿನ್ನಲ್ಲಿ ಕೂಡಿಕೊಂಡು ಇರಲು ಇಚ್ಛಿಸುತ್ತೇವೆ" ಎಂದು ಪ್ರಾರ್ಥಿಸಿದರು.

**ಚತುರ್ಜನ್ಮ ಭವೇದ್ಭೂಮೌ ತ್ವಾಂ ನಾನ್ಯೋ ಮಾರುತಾ ದೃಶೇತ್ ।**
**ನಿಯಮೋಽಯಂ ಹರೇರ್ಯಸ್ಮಾದನಾದಿರ್ನಿತ್ಯ ಏವಚ ||೧೧೬||**

ನಾಲ್ಕು ಸಲ ಭೂಮಿಯಲ್ಲಿ ಜನ್ಮ ತಾಳಬೇಕಾಗಿದೆ. ನಿನ್ನಲ್ಲಿ ವಾಯುದೇವರ ಹೊರತು ಇನ್ನೊಬ್ಬರ ಸ್ಪರ್ಶವಾಗಲಾರದು. ವಾಯುದೇವರ ಸ್ಪರ್ಶಕ್ಕೆ ಅನ್ಯಮಿತ್ತ ದೋಷವಿಲ್ಲ. ಇದು ಹರಿಯ ನಿಯಮ. ಅನಾದಿ ಮತ್ತು ನಿತ್ಯವಾದುದು. ಅದಕ್ಕಾಗಿ ನಾವು ನಾಲ್ಕೂಜನ ನಿನ್ನನ್ನೇ ಕೂಡಿಕೊಂಡಿರುತ್ತೇವೆ ಎಂದು ಪ್ರಾರ್ಥಿಸಿದರು.

**ಅತಸ್ತ್ರಿಯೈಕದೇಹಾನ್ನೋ ನಾನ್ಯ ಆಪ್ನೋತಿ ಮಾರುತಾತ್ ।**
**ಇತೀರಿತೇ ತಥೇತ್ಯುಕ್ತ್ವಾ ಪಾರ್ವತ್ಯಾದಿ ಯುತೈವಸಾ । ||೧೧೭||**

**ವಿಪ್ರಕನ್ಯಾಽ ಭವತ್ತತ್ರ ಚತಸ್ರಃ ಪಾರ್ವತೀ ಯುತಾಃ**
**ಏಕದೇಹಸ್ಥಿತಾಶ್ಚಕ್ರು ರ್ಗಿರೀಶಾಯ ತಪೋಮಹತ್ ||**

**ತದ್ದೇಹಸ್ಥಾ ಭಾರತೀತು ರುದ್ರ ದೇಹಸ್ಥಿತಂ ಹರಿಂ ।**
**ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥ ಧೃತವ್ರತಾ ||೧೧೮||**

ಆದ್ದರಿಂದ ಏಕದೇಹದಿಂದ ನಾವೆಲ್ಲರೂ ನಿಮ್ಮಲ್ಲಿರುತ್ತೇವೆ. ಮಾರುತನ ಸ್ಪರ್ಶದಿಂದ ಅನ್ಯ ಪುರುಷರ ಸ್ಪರ್ಶದ ದೋಷವಿಲ್ಲ ಎಂದು ಮತ್ತೊಮ್ಮೆ ಬೇಡಿಕೊಂಡಾಗ, ಭಾರತಿ ದೇವಿಯರು ಹಾಗೆಯೇ ಆಗಲಿ ಎಂದು ಒಪ್ಪಿದರು. ಪಾರ್ವತಿ ಮೊದಲಾಗಿ ಇತರ ದೇವಿಯರ (ಶಚಿ ಶಾಮಲಾ, ಉಷಾ) ಸಹಿತ ಭಾರತಿ ದೇವಿಯರು ವಿಪ್ರ ಕನ್ಯೆಯಾಗಿ ಜನಿಸಿದರು.

(ಶಿವಕನ್ಯಾ) ವಿಪ್ರ ಕನ್ಯೆಯ ಜನ್ಮದಲ್ಲಿಯೇ, ತನ್ನ ದೇಹದಲ್ಲಿದ್ದ ನಾಲ್ಕು ಜನರೊಂದಿಗೆ ರುದ್ರದೇವರನ್ನು ಕುರಿತು ತಪಸ್ಸು ಮಾಡಿದರು.

**ಭಾರತೀದೇವಿಯರು ರುದ್ರದೇವರನ್ನು ಕುರಿತು ತಪಸ್ಸು ಮಾಡಬಹುದೇ?** ಎಂಬ ಶಂಕೆಗೆ, 'ರುದ್ರದೇಹಸ್ಥಿತ' 'ಕರ್ಮೈಕ್ಯಾರ್ಥಂ' ಎಂಬ ಪದಗಳನ್ನು ಬಳಸಿದ್ದಾರೆ.

ಅಂದರೆ ಭಾರತಿದೇವಿಯರು, ರುದ್ರಾಂತರ್ಗತನಾದ ಶ್ರೀಹರಿಯನ್ನು ಕುರಿತು ತಪಸ್ಸು ಮಾಡಿದ್ದು, ತಮಗಾಗಿ ಅಲ್ಲ. ತಮ್ಮಂತರ್ಗತರಾದ ದೇವಿಯರ ಇಷ್ಟಪೂರ್ತಿಗಾಗಿ. ಅವರ ಕರ್ಮದಲ್ಲಿ ಐಕ್ಯತೆಯನ್ನು ಸಾಧಿಸುವದಕ್ಕಾಗಿ ಎಂದು ವಿವರಿಸಿದ್ದಾರೆ. ವಿಪ್ರಕನ್ಯೆಯ ತಪಸ್ಸಿನಿಂದ ರುದ್ರಾಂತರ್ಗತ ಪರಮಾತ್ಮನು ಸಂತುಷ್ಟಗೊಂಡನು. **ಪರೋಪಕಾರ ಮಾಡುವುದೇ ಭಾರತೀ ದೇವಿಯ ಧರ್ಮ.**

**ತಸ್ಯೈ ಸರುದ್ರದೇಹಸ್ಥೋ ಹರಿಃ ಪ್ರಾಸಾದ್ವರಂ ಪ್ರಭುಃ ।**
**ಅನಂತತೋಷಣಂ ವಿಷ್ಣೋಃ ಸ್ವಭರ್ತ್ರಾ ಸಹಜನ್ಮಸು । ॥೧೧೯॥**

**ಸರ್ವೇಷ್ಟಪ್ರೀತಿ ಚಾನ್ಯಸಾಂ ದದೌ ಶಂಕರ ಏವ ಚ।**
**ವರಂ ಸ್ವಭರ್ತೃ ಸಂಯೋಗಂ ಮಾನುಷೇಷ್ವಪಿ ಜನ್ಮಸು ॥೧೨೦॥**

ರುದ್ರ ದೇಹಸ್ಥ ಶ್ರೀಹರಿ, ಭಾರತಿ ದೇವಿಯರಿಗೆ ಎಲ್ಲ ಜನ್ಮಗಳಲ್ಲೂ ಪತಿಯಿಂದೊಡಗೂಡಿ, ವಿಷ್ಣುವಿನ ಪ್ರೀತ್ಯರ್ಥವಾಗಿ ಸೇವೆಯನ್ನು ಗೈಯುತ್ತಿರು" ಎಂದು ವರವನ್ನು ಕೊಟ್ಟನು. ಇತರ ಸ್ತ್ರೀಯರಿಗೂ ಪತಿಗಳೊಂದಿಗೆ ಕೂಡುವಂತೆ, ವರವನ್ನು ಕೊಟ್ಟನು.

**ತತಸ್ತ ದ್ವೈವ ದೇಹಂ ತಾ ವಿಸೃಜ್ಯ ನಳನಂದಿನೀ ।**
**ಬಭೂವುರಿಂದ್ರ ಸೇನೇತಿ ದೇಹೈಕ್ಯೇನ ಸುಸಂಗತಾಃ ॥೧೨೧॥**

ವರಗಳನ್ನು ಪಡೆದ ಕೂಡಲೇ, ವಿಪ್ರ ಕನ್ಯೆಯು ತನ್ನ ದೇಹವನ್ನು ತ್ಯಜಿಸಿದಳು. ಪುನಃ ದೇಹೈಕ್ಯದಿಂದಲೇ ಒಂದೇ ಬುದ್ಧಿಯಿಂದ ಒಂದೇ ಕಾರ್ಯ ಮಾಡಲು 'ನಳನಂದಿನಿ' ಎಂಬ ಹೆಸರಿನಿಂದ ಹುಟ್ಟಿದಳು. ಕೆಲವು ಕಾಲದ ಮೇಲೆ ಸ್ವೇಚ್ಛೆಯಿಂದ ಆ ದೇಹವನ್ನೂ ಬಿಟ್ಟು 'ಇಂದ್ರಸೇನಾ' ಎಂದು ಮೂರನೇ ಸಲ ಜನ್ಮ ತಾಳಿದಳು. ಆದರೂ ಎಲ್ಲ ಜನ್ಮಗಳಲ್ಲೂ ಆ ನಾಲ್ಕೂ ದೇವಿಯರು ಏಕದೇಹಿಗಳಾಗಿಯೇ ಭಾರತೀ ದೇವಿಯರಲ್ಲಿದ್ದರು. ಇಂದ್ರಸೇನೆಯ ವೃತ್ತಾಂತ.

**ತದಾಸೀನ್ಮುದ್ಗಲೋನಾಮ ಮುನಿಸ್ತಪಸಿ ಸಂಸ್ಥಿತಃ ।**
**ಚಕಮೇ ಪುತ್ರಿಕಾಂ ಬ್ರಹ್ಮೇತ್ಯ ಶೃಣೋತ್ಸ ಕಥಾಂತರೇ ॥೧೨೨॥**

ಆಗ ಮುದ್ಗಲನೆಂಬ ಪ್ರಸಿದ್ಧ ಮುನಿಯಿದ್ದನು. ಆತನು ಬಹು ತಪಸ್ವಿಯೂ ಆಹುದು. ಆ ಮುನಿಯು ಯಾವುದೋ ಕಥಾ ಶ್ರವಣದ ಒಂದು ಸಂದರ್ಭದಲ್ಲಿ ಚತುರ್ಮುಖ ಬ್ರಹ್ಮನು ಮಗಳನ್ನು ಕಾಮಿಸಿದನು ಎಂದು ಕೇಳಿದನು.

**ಅಪಾಹಸ ತ್ತೋಽಬ್ಜ ಯೋನಿಂ ಶಶಾಪೈನಂ ಚತುರ್ಮುಖಃ ।**
**ಭಾರತ್ಯಾದ್ಯಾಃ ಪಂಚದೇವೀರ್ಗಚ್ಛ ಮನಿಷ್ಣಭೂತಯೇ ॥೧೨೩॥**

ಅದನ್ನು ಕೇಳಿದ ಮುದ್ಗಲರು ಬ್ರಹ್ಮನನ್ನು ಕುರಿತು ಅಪಹಾಸ್ಯ ಮಾಡಿದರು. ಇದನ್ನರಿತ ಬ್ರಹ್ಮನು, "ಹೇ ಮುನಿಯೇ, ಕಾಮವಿಲ್ಲದವನೆಂಬ ಅಹಂ ಅಭಿಮಾನ ವುಳ್ಳವನೇ, ನನ್ನನ್ನು ಕೀಳುಭಾವನೆಯಿಂದ ಕಂಡಕಾರಣ ನಿನಗೆ ನಕರಾದ್ಯಾವರ್ಥ

ಆಗಬೇಕಾಗಿದೆ. ಅದಕ್ಕಾಗಿ ಭಾರತಿಯೇ ಮೊದಲಾದ ಐದು ದೇವೀ ಶರೀರವನ್ನು ಭೋಗಿಸು ಎಂದು ಶಪಿಸಿದನು.

**ಇತೀರಿತಸ್ತಂ ತಪಸಾ ತೋಷಯಾಮಾಸ ಮುದ್ಗಲಃ**
**ಶಾಪಾನುಗ್ರಹ ಮಸ್ಯಾಥ ಚಕ್ರೇ ಕಂಜಸಮುದ್ಭವಃ ॥೧೨೪॥**

ಬ್ರಹ್ಮನ ಈ ರೀತಿಯು ಶಾಪವನ್ನು ಕೇಳಿ, (ಆ ಮುನಿಯು ಬಹು ನೊಂದುಕೊಂಡನು) ಶಾಪಕ್ಕೆ ಅನುಗ್ರಹವನ್ನು ಪ್ರಾರ್ಥಿಸಿ, ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿದನು. ಸಂತುಷ್ಟಗೊಂಡ ಬ್ರಹ್ಮನು ಶಾಪಕ್ಕೆ ಅನುಗ್ರಹವನ್ನು ಮಾಡಿದನು. ಹೇಗೆ?

**ನತ್ವಂ ಯಾಸ್ಯಸಿ ತಾದೇವೀರ್ಮಾರುತಸ್ತ್ವ ಚ್ಛರೀರಗಃ ।**
**ಯಾಸ್ಯತಿ ತ್ವಂ ತದಾ ಮೂರ್ಛಾಂಗತೋ ನೈವವಿಬುಧ್ಯಸೇ ॥೧೨೫॥**

ಎಲೈ ಮುದ್ಗಲನೇ ಗಾಬರಿಯಾಗಬೇಡ. ನೀನು ಆ ದೇವಿಯನ್ನು ಕೂಡುವದಿಲ್ಲ. ನಿನ್ನ ಶರೀರದಲ್ಲಿ ವಾಯುದೇವರೇ ಪ್ರವೇಶಿಸಿ ಆ ಕಾರ್ಯ ಮಾಡುತ್ತಾರೆ. ಆಗ ನೀನು ಮೂರ್ಛಿತನಾಗಿರುವಿ. ಎಚ್ಚರವೇ ಇರುವುದಿಲ್ಲ. (ಅದರಿಂದ)

ಇದು ಸಾಧ್ಯವೇ? ಏಕಿಲ್ಲ. ಶಸ್ತ್ರ ಚಿಕಿತ್ಸೆಯ ಕಾಲಕ್ಕೆ ಒಂದು ಚಿಕ್ಕ ಔಷಧಿ ಆ ಕಾರ್ಯವನ್ನು ಮಾಡುತ್ತದೆ. ಎಚ್ಚರ ತಪ್ಪಿಸುತ್ತದೆ. ಶರೀರಕ್ಕೆ ಉಂಟಾದ ಬಾಧೆಯ ಅರಿವಾಗುವುದಿಲ್ಲ. ಇದು ಕೇವಲ ಮಾನವ ವ್ಯಾಪಾರ ದೇವತೆಗಳಿಗೆ ಅದು ಅಸಾಧ್ಯವೇ?

**ನಚ ಷಾಪಂ (ಶಾಪಂ) ತತಸ್ತೇ ಸ್ಯಾದಿತ್ಯುಕ್ತೇ ಚೈನ ಮಾವಿಶತ್ ।**
**ಮಾರುತೋಽಥೇಂದ್ರ ಸೇನಾಂಚ ಗೃಹೀತ್ವಾಥಾಭವದ್ಗೃಹೀ ॥೧೨೬॥**

ಆ ಕಾರಣದಿಂದ ನಿನಗೆ ಷಾಪವು ಒದಗಲಾರದು, (ಶಾಪದ ಪ್ರಭಾವವೂ ಇಲ್ಲ) ಎಂದು ಹೇಳಿದರು. ಅದೇ ಸಮಯಕ್ಕೆ ವಾಯುದೇವರು ಮುದ್ಗಲರ ಶರೀರದಲ್ಲಿ ಪ್ರವೇಶಿಸಿದರು. ನಂತರ ಮುದ್ಗಲರು ಇಂದ್ರಸೇನೆಯನ್ನು ಪಾಣಿಗ್ರಹಣ ಮಾಡಿಕೊಂಡು ಗ್ರಹಸ್ಥಾಶ್ರಮಿಗಳಾದರು.

**ರೇಮೇಚಸ ತಯಾಸಾರ್ಧಂ ದೀರ್ಘಕಾಲಂ ಜಗತ್ಪ್ರಭುಃ ।**
**ತತೋ ಮುದ್ಗಲ ಮುದ್ಬೋಧ್ಯ ಯಯೌಚಸ್ವಂ ನಿಕೇತನಮ್ ॥೧೨೭॥**

ಜಗತ್ಪ್ರಭುವಾದ ವಾಯುದೇವರು, ಮುದ್ಗಲರ ಶರೀರದಲ್ಲಿದ್ದು, ಇಂದ್ರಸೇನೆಯೊಡನೆ ಬಹುಕಾಲ ಕ್ರೀಡಿಸಿದರು. ನಂತರ ಒಂದು ದಿನ ಮುದ್ಗಲರನ್ನು ಎಚ್ಚರಿಸಿ, ತಮ್ಮ ನಿಕೇತನಕ್ಕೆ ತೆರಳಿದರು.

**ತತೋದೇಶಾಂತರಂಗತ್ವಾ ತಪಶ್ಚಕ್ರೇಚ ಮುದ್ಗಲಃ ।**
**ಸೇಂದ್ರಸೇನಾ ವಿಮುಕ್ತಾಥ ಭರ್ತ್ರಾಚಕ್ರೇ ಮಹತ್ತಪಃ ॥೧೨೮॥**

ಅನಂತರ ಆ ಮುದ್ಗಲರು, ದೇಶಾಂತರಕ್ಕೆ ಹೋಗಿ ತಪಸ್ಸಿಗೆ ಕುಳಿತರು. ಇತ್ತ ಇಂದ್ರಸೇನೆಯು ಕೂಡ, ಮುದ್ಗಲರು ಹೋದಮೇಲೆ, (ಪತಿಯನ್ನು ಅಗಲಿದ ಮೇಲೆ) ಮಹತ್ತರವಾದ ತಪಸ್ಸನ್ನು ಆಚರಿಸಹತ್ತಿದಳು.

**ತದ್ದೇಹಗಾ ಭಾರತೀತು ಕೇಶವಂ ಶಂಕರೇ ಸ್ಥಿತಂ ।**
**ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಪೂರ್ವವತ್ ॥೧೨೯॥**

ಇಂದ್ರಸೇನಾ ದೇಹಾಂತರ್ಗತರಾದ ಭಾರತೀ ದೇವಿಯರು ರುದ್ರಾಂತರ್ಗತ ಶ್ರೀಹರಿಯನ್ನು ಮೊದಲಿನಂತೆಯೇ ಕರ್ಮೈಕ್ಯಾರ್ಥಕ್ಕಾಗಿ ತಪಸ್ಸು ಮಾಡಿ ಸಂತೋಷ ಬಡಿಸಿದರು.

**ಉಮಾದ್ಯಾ ರೌದ್ರ ಮೇವಾತ್ರ ತಪಶ್ಚಕ್ರುರ್ಯಥಾಪುರಾ ।**
**ಪ್ರತ್ಯಕ್ಷೇಚ ಶಿವೇಜಾತೇ ತದ್ದೇಹಸ್ಥೇಚ ಕೇಶವೇ ॥೧೩೦॥**

**ಪೃಥಕ್ಪೃಥ ಕ್ಸ್ವಭರ್ತ್ರಾ ರ್ಥ್ಯೈತಾಃ ಪಂಚಾಪ್ಯೇಕ ದೇಹಗಾಃ ।**
**ಪ್ರಾರ್ಥಯಾಮಾಸು ರಭವತ್ಪಂಚ ಕೃತ್ವೋ ವಚೋಹಿತತ್ ॥೧೩೧॥**

ಪಾರ್ವತಿ ಮೊದಲಾದ ಐದು ಜನ ಸ್ತ್ರೀಯರು ಮೊದಲಿನಂತೆಯೇ ರುದ್ರ ದೇವರನ್ನು ಕುರಿತು ತಪಸ್ಸು ಮಾಡಿದರು. ರುದ್ರಾಂತರ್ಗತ ಶ್ರೀಹರಿಯು ಪ್ರತ್ಯಕ್ಷನಾದನು. ಐದೂ ಜನ ಸ್ತ್ರೀಯರು ತಮ್ಮ ತಮ್ಮ ಪತಿಗಳಿಗಾಗಿ ಪ್ರತ್ಯೇಕವಾಗಿ ಪ್ರಾರ್ಥನೆ ಮಾಡಿದರು. ಒಂದೇ ದೇಹದಲ್ಲಿ ಅವರಿದ್ದ ಕಾರಣ, ಅದು ಐದು ಸಲ ಕೇಳಿದಂತಾಯಿತು. ಆ ಮಾತಿಗೆ ಹರಿಹರರು ತಥಾಸ್ತು ಎಂದು ಹೇಳಿದರು ಅರ್ಥಾತ್ ಐದು ಜನ ಪತಿಗಳಿಗೆ ತಥಾಸ್ತು ಎಂದಾಯಿತು.

**ಶಿವದೇಹಸ್ಥಿತೋ ವಿಷ್ಣುಃ ಭಾರತ್ಯೈ ತುದದೌ ಪತಂ ।**
**ಅನ್ಯಾಸಾಂ ಶಿವ ಏವಾಥ ಪ್ರದದೌ ಚತುರಃ ಪತೀನ್ ॥೧೩೨॥**

ಶಿವನ ದೇಹದಲ್ಲಿರುವ ವಿಷ್ಣುವು ಭಾರತಿ ದೇವಿಯರಿಗೆ ನಿನ್ನ ಪತಿಯನ್ನು ಕೂಡಿಕೋ ಎಂದು ಸಂತೋಷದಿಂದ ವರವಿತ್ತರೆ, ಅನ್ಯರಿಗೆ ರುದ್ರದೇವರೇ ನಾಲ್ಕು ಜನ ಪತಿಗಳಾಗಲಿ ಎಂದು ಹೇಳಿದನು.

**ದೇವ್ಯಶ್ಚತಸ್ರಸ್ತು ತದಾ ದತ್ತ ಮಾತ್ರೇವರೇಽಮುನಾ ।**
**ದೇವಾ ನಾಮವ ತಾರಾರ್ಥಂ ಪಂಚದೇವ್ಯಃ ಸ್ಮ ಇತ್ಯಥ ॥೧೩೩॥**

**ನಾಜಾನನ್ನೇಕ ದೇಹತ್ವಾ ಚ್ಛಿ ದ್ಯೋಗಾತ್ ಕ್ಷೀರನೀರವತ್ ।**
**ತಾಃ ಶ್ರುತ್ವಾ ಸ್ವಪತಿಂ ದೇವಿನಚಿ ರಾತ್ಪ್ರಾಪ್ಸ್ಯಸೀತಿ ಚ ॥೧೩೪॥**

**ವಿಷ್ಣೂಕ್ತಂ ಶಂಕರೋಕ್ತಂಚ ಚತ್ವಾರಃ ಪತಯಃ ಪ್ರಥಕ್ ।**
**ಭವಿಷ್ಯಂತೀತ್ಯ ಥೈಕಸ್ಯಾಮೇನಿರೇ ಪಂಚಭರ್ತೃತಾಮೌ ॥೧೩೫॥**

ರುದ್ರ ದೇವರಿಂದ ಈ ರೀತಿಯ ವರವನ್ನು ಪಡೆಯುತ್ತಿರುವಾಗ, ಆ ನಾಲ್ಕು ಜನ ಸ್ತ್ರೀಯರು, ಐದು ಜನ ದೇವತೆಗಳ (ಧರ್ಮ, ವಾಯು, ನಾಸತ್ಯರು ಹಾಗೂ ಹೆಂಡತಿಯ ಸಂಯೋಗವಿಲ್ಲದ ರುದ್ರ) ಇವರ ಅವತಾರಕ್ಕಾಗಿ, ಈ ಶರೀರದಲ್ಲಿ ನಾವು ಐದು ಜನ ದೇವಿಯರು ಇದ್ದೇವೆ ಎಂಬುದನ್ನು ಮರೆತರು (ತಿಳಿಯಲಿಲ್ಲ).

"ಹೇ ದೇವಿ, ನಿಮ್ಮ ಪತಿಯನ್ನು ಬೇಗನೆ ಪಡೆಯುವಿ" ಎಂದು ಒಂದು ಸಲ ವಿಷ್ಣು ಹೇಳಿದ್ದನ್ನು ನಾಲ್ಕು ಸಲ, ಶಂಕರರು ಹೇಳಿದ್ದನ್ನು ಒಟ್ಟಿನಲ್ಲಿ ಐದಾವರ್ತಿ ಹೇಳಿದ್ದನ್ನು ಕೇಳಿದರು. ನಮ್ಮ ನಮ್ಮ ಪತಿಗಳನ್ನು ಬಿಟ್ಟು ಬೇರೆ ನಾಲ್ಕು ನಾಲ್ಕು ಜನ ನಮಗೆ ಪತಿಗಳಾಗಬೇಕೆ? ಒಬ್ಬಳಿಗೆಯೇ ಐದು ಜನ ಗಂಡಂದಿರು ಎಂದು ಅವರು ತಿಳಿದರು.

**ರುರುದುಶ್ಚೈಕ ದೇಹಸ್ಥಾ ಏಕೈವಾಹ ಮಿತಿಸ್ಥಿತಾಃ ।**
**ಅಥಾಭ್ಯಾಗಾನ್ಮಹೇಂದ್ರೋಽತ್ರ ಸೋಽಬ್ರವೀತಾಂಪರಸ್ತ್ರಿಯಮ್ ॥೧೩೬॥**

**ಕಿಮರ್ಥಂ ರೋದಿಷೀತ್ಯೇವ ಸಾಬ್ರವೀ ದ್ವಟುರೂಪಿಣಂ ।**
**ಶಂಕರಂ ದರ್ಶಯಿತ್ವೈವ ಪಂಚಭರ್ತೃತ್ವಮೇಷಮೇ ॥೧೩೭॥**

**ವರಾರ್ಥ ಮರ್ಥಿತಃ ಪಾದಾದಿತಿ ತಂ ಶಿವ ಇತ್ಯಥ ।**
**ಅಜಾನನ್ ಶಕ್ರ ಆಹೋಚ್ಚೈಃ ಕಿಮೇತದ್ಭುವನತ್ರಯೇ ॥೧೩೮॥**

**ಯತ್ಪಾಲಿತೇ ಯೋಷಿತಂ ತ್ವಂ ವೃಥಾಶಪಸಿ ದುರ್ಮತೇ ।**
**ಇತೀರಿತೇ ಶಿವಃ ಪ್ರಾಹ ಪತಮಾನುಷ್ಯ ಮಾಪ್ನುಹಿ ॥೧೩೯॥**

**ಅಸ್ಯಾಶ್ಚ ಭರ್ತಾ ಭವಸಿ ತ್ವಾಮೇವೈಷಾ ವರಿಷ್ಯತಿ ॥೧೪೦॥**

ಈ ದೇಹದಲ್ಲಿ ನಾನೊಬ್ಬಳೇ ಇರುವವಳು ಎಂದು ಆ ನಾಲ್ಕು ಜನ ದೇವಿಯರು ಭಾವಿಸಿದ್ದರು. ಭಾರತೀ ದೇವಿಯರ ದೇಹದಲ್ಲಿ ನಾವೆಲ್ಲರಿದ್ದೇವೆ ಎಂಬುದನ್ನು ಮರೆತರು. ಕಾರಣ ಅವರು ರೋದಿಸ ಹತ್ತಿದರು. ಅದೇ ಕಾಲಕ್ಕೆ ದೇವೇಂದ್ರನು ಅಲ್ಲಿಗೆ ಬಂದನು. ಆ ಶ್ರೇಷ್ಠ ಸ್ತ್ರೀಯನ್ನು ಕಂಡು, ಏತಕ್ಕಾಗಿ ರೋದಿಸುತ್ತಿರುವಿ? ಎಂದು ಕೇಳಿದನು.

ಅವಳು ವಟುರೂಪಿಯಾದ ಶಿವನನ್ನು ತೋರಿಸಿ, ಈತನಿಗೆ ನಾನು ಪತಿಗಾಗಿ ಪ್ರಾರ್ಥಿಸಿಕೊಂಡೆ, ನನಗೆ ಐದು ಜನ ಪತಿಗಳಾಗಲಿ, ಎಂದು ವರವನ್ನು ಕೊಟ್ಟಿದ್ದಾನೆ ಎಂದು ಹೇಳಿದಳು.

ಆ ವಟುವೇ ಶಿವನೆಂದು ಇಂದ್ರನು ತಿಳಿಯಲಿಲ್ಲ. ಎಲೌ ದುರ್ಮತಿಯೋ ನನ್ನ ಆಳ್ವಿಕೆಯಲ್ಲಿರುವ ಈ ಲೋಕದಲ್ಲಿ ನೀನು ಬಂದು, ಈ ನಿರಪರಾಧಿಯಾದ ಸ್ತ್ರೀಗೆ ಏಕೆ ಶಪಿಸಿದೆ?

ಈ ಮಾತನ್ನು ಕೇಳಿದ ರುದ್ರನು, ನೀನು ಸ್ವರ್ಗದಿಂದ (ಪತಿತನಾಗು) ಕೆಳಗೆ ಬೀಳು. ಮನುಷ್ಯನ ಜನ್ಮ ತಾಳು. ಇವಳಿಗೆ ನೀನೇ ಗಂಡನಾಗುವಿ" ಎಂದು ನುಡಿದನು.

ಆದ್ದರಿಂದಲೇ ದ್ರೌಪದಿ ಅರ್ಜುನನಿಗೆ ಮಾಲೆ ಹಾಕಿದಳು.

**ಪಶ್ಚಾತ್ರ ಮದವಜ್ಞಾನಾತ್ಪತಿತಾಂ ಸ್ತ್ವದ್ವಶಾನ್ ಸುರಾನ್ ।**
**ಗಿರೇರಧಸ್ತಾದಸ್ಯೈವೇತ್ಯುಕ್ತೋಽಸೌ ಪಾಕಶಾಸನಃ ॥**
**ಉದ್ಬ ಬರ್ಹ ಗಿರಿಂತಂತು ದದರ್ಶಾತ್ರಚ ತಾನ್ಸುರಾನ್ ॥೧೪೧॥**

ಇಲ್ಲಿ ನೋಡು, ನನ್ನನ್ನು ತಿರಸ್ಕರಿಸಿದ್ದರಿಂದ, ನಿನ್ನಂಥ ದೇವತೆಗಳು, ಈ ಗಿರಿಯ ಕೆಳಗೆ ಬಿದ್ದಿದ್ದಾರೆ. ಚೆನ್ನಾಗಿ ನೋಡು, ಎಂದು ರುದ್ರದೇವರು ಹೇಳಿದಾಗ, ದೇವೇಂದ್ರನು ಆ ಪರ್ವತವನ್ನು ಕಿತ್ತಿ ಮೇಲೆ ಎತ್ತಿದನು. ಆ ಪರ್ವತದ ಕೆಳಗೆ ರುದ್ರನು ಹೇಳಿದಂತೆ ದೇವತೆಗಳನ್ನು ನೋಡಿದನು.

**ಪೂರ್ವೇಂದ್ರಾನ್ಮಾರುತ ವೃಷನಾಸತ್ಯಾಂಶ್ಚತುರಃ ಸ್ಥಿತಾನ್ ।**
**ಮಾನುಷೇಷ್ವವತಾರಾಯ ಮಂತ್ರಂರಹಸಿ ಕುರ್ವತಃ ॥೧೪೨॥**

ಅಲ್ಲಿ, ಪೂರ್ವ ಮನ್ವಂತರಗಳಲ್ಲಿ ಇಂದ್ರರಾಗಿದ್ದ, ವಾಯು, ಯಮ ಮತ್ತು ಅಶ್ವಿನಿ ದೇವತೆಗಳು ಹೀಗೆ ನಾಲ್ಕು ಜನರಿದ್ದರು. ಅವರು ಮಾನವರಾಗಿ ಹುಟ್ಟಬೇಕಾದುದರಿಂದ ರಹಸ್ಯವಾಗಿ ಕುಳಿತು ಮಂತ್ರಾಲೋಚನೆಯನ್ನು ನಡೆಸಿದ್ದರು.

**ತತೋವರೇಣ್ಯಂ ವರದಂ ವಿಷ್ಣುಂ ಪ್ರಾಪ್ಯಸ ವಾಸವಃ ।**
**ತತ್ಪ್ರಸಾದಾನ್ನರಾಂಶೇನಯುಕ್ತೋ ಭೂಮಾವಜಾಯತ ॥೧೪೩॥**

ಇದನ್ನು ಕಂಡು ಆ ದೇವೇಂದ್ರನು, ಸರ್ವೋತ್ತಮನಾದ ಶ್ರೀ ವಿಷ್ಣುವಿನ ಹತ್ತಿರ ಬಂದು, ಪ್ರಾರ್ಥಿಸಿ, ಆತನ ಅನುಗ್ರಹ ಪಡೆದು ನರಾಂಶಯುಕ್ತನಾಗಿ ಭೂಮಿಯಲ್ಲಿ ಹುಟ್ಟಿದನು.

**ಮದವಜ್ಞಾ ನಿಮಿತ್ತೇನ ಪತಿತಾ ಇತಿ ತಾನ್ಸುರಾನ್ ।**
**ಮಾರುತಾದೀನ್ಮೃಷಾವಾದೀರಿತಿ ಬ್ರಹ್ಮಾ ಶಿವಂ ತದಾ ॥೧೪೪॥**

**ಶಶಾಪ ಮಾನುಷೇಷು ತ್ವಂ ಕ್ಷಿಪ್ರಂ ಜಾತಃ ಪರಾಭವಂ ।**
**ಶಕ್ರಾನ್ನರತನೋರ್ಯಾಸಿ ಯಸ್ಕೃತ್ವಂತು ಮೃಷಾವದಃ ॥೧೪೫॥**

"ನನಗೆ ದ್ರೋಹಮಾಡಿದ ಪ್ರಯುಕ್ತ ಈ ದೇವತೆಗಳು ಇಲ್ಲಿ ಬಿದ್ದಿದ್ದಾರೆ" ಎಂದು ಮೂರುತಿಯೇ ಮೊದಲಾಗಿ ಎಲ್ಲ ದೇವತೆಗಳ ಬಗೆಗೆ ನೀನು ಸುಳ್ಳು ಹೇಳಿರುವಿ, ಆದ್ದರಿಂದ ನೀನೂ ಕೂಡ ಕೂಡಲೇ ಭೂಲೋಕದಲ್ಲಿ ಅವತರಿಸು" ಎಂದು ಬ್ರಹ್ಮದೇವರು ರುದ್ರನಿಗೆ ಹೇಳಿದರು. ಅಷ್ಟೇ ಅಲ್ಲ, ಯಾವ ಇಂದ್ರನು ನರಾಂಶದಿಂದ ಅರ್ಜುನನಾಗಿ ಹುಟ್ಟುವನೋ, ಅವನಿಂದ ನಿನಗೆ ಪರಾಜಯ ಆಗಲಿ, 'ಇದು ಸುಳ್ಳು ಹೇಳಿದ್ದಕ್ಕಾಗಿ ಶಾಪ' ಎಂದು ಬ್ರಹ್ಮನು ಎಚ್ಚರಿಸಿದನು. ಮುಂದೆ ನೋಡಿ.

**ಮಚ್ಛಪ್ತಾನಾಂಚ ದೇವೀನಾಮ ವಿಚಾರ್ಯಮಯಾಯತಃ ।**
**ಪತಿಯೋಗವರಂ ಪ್ರಾದಾಃ ನಾವಾಪ್ಸ್ಯಸಿ ತತಃ ಪ್ರಿಯಾಮ್ ॥೧೪೬॥**

**ಮಾನುಷೇಷು ತತಃ ಪಶ್ಚಾದ್ಭಾರತೀ ದೇಹ ನಿರ್ಗತಾಂ ।**
**ಸ್ವಲೋಕೇ ಪ್ರಾಪ್ಸ್ಯಸಿ ಸ್ವಾರ್ಥೇವರೋಽಯಂತೇ ಮೃಷಾಭವೇತ್ ॥೧೪೭॥**

ನನ್ನಿಂದ ಶಾಪ ಹೊಂದಿದ ಸ್ತ್ರೀಯರಿಗೆ, ನನ್ನನ್ನು ವಿಚಾರಿಸದೆಯೇ ಪತಿಯೋಗಕ್ಕಾಗಿ ವರವನ್ನು ಕೊಟ್ಟಿರುವಿ. ಆ ಕಾರಣನಿಂದ ನೀನು ಮಾನವನಾಗಿದ್ದಾಗ, ನಿನಗೆ ಪತ್ನಿಯ

ಸಂಯೋಗವಿಲ್ಲ. ಮುಂದೆ ಪಾರ್ವತಿಯು ಭಾರತಿದೇವಿಯರ ಶರೀರವನ್ನು ಬಿಟ್ಟು ಹೊರ ಬಂದಾಗ, ಕೈಲಾಸದಲ್ಲಿ ನೀನು ಪುನಃ ರುದ್ರನಾಗಿ ಪಾರ್ವತಿಯನ್ನು ಪಡೆಯುವೆ. ಆ ನಿನ್ನ ವರ ನಿನ್ನ ವಿಷಯದಲ್ಲಿ ಸುಳ್ಳಾಗುವುದು. "ಅಂದರೆ ಪಾರ್ವತಿಯು ಈ ಜನ್ಮದಲ್ಲಿ ನಿನ್ನನ್ನು ಪಡೆಯಲಾರಳು".

**ಏಷಾಸಾ ದ್ರೌಪದೀ ನಾಮ ಪಂಚದೇವೀ ತನುರ್ಭವೇತ್ ।**
**ಪೃಷಾ ವಾಗ್ಯೇಷು ತೇ ಪ್ರೋಕ್ತಾ ಮಾರುತಾದ್ಯಾಸ್ತು ತೇಽಖಿಲಾ ॥೧೪೮॥**

**ತಾಸಾಂ ಪತಿತ್ವ ಮಾಪ್ಸ್ಯಂತಿ ಭಾರತ್ಯೇವತು ಪಾರ್ವತೀ ।**
**ಸಂಯುಕ್ತಾ ವ್ಯವಹಾರೇಷು ಪ್ರವರ್ತೇ ತನಚಾನ್ಯಥಾ ॥೧೪೯॥**

ಐದು ದೇವಿಯರಿಂದ ಕೂಡಿದ ಈ ಇಂದ್ರಸೇನೆಯೇ ಮುಂದೆ, 'ದ್ರೌಪದಿ' ಎಂಬ ಹೆಸರಿನಿಂದ ಪ್ರಸಿದ್ಧಳಾಗುವಳು. ಯಾರ ವಿಷಯದಲ್ಲಿ ನೀನು ಸುಳ್ಳಾಡಿರುವೆಯೋ ಆ ಎಲ್ಲ ದೇವತೆಗಳು, ವಾಯು ಮೊದಲಾಗಿ ಇತರ ದೇವತೆಗಳು ತಮ್ಮ ತಮ್ಮ ಪತಿಗಳನ್ನು ಪಡೆಯುತ್ತಾರೆ. ಪಾರ್ವತಿಯು, ಭಾರತೀ ದೇವಿಯರಲ್ಲಿದ್ದರೂ, ಊಟ ಮೊದಲಾದ ವ್ಯವಹಾರಗಳಲ್ಲಿ ಪ್ರವರ್ತರಾಗುವಳು, ಅನ್ಯಥಾ ಬೇರೊಂದಕ್ಕಿಲ್ಲ.

**ಏತೇಽಪಿ ಮಾರುತಾದ್ಯಾಸ್ತೇ ದೇವಕಾರ್ಯಾರ್ಥ ಗೌರವಾತ್ ।**
**ಜಾತಾ ಇತಿ ಶ್ರುತಿಸ್ತತ್ರ ನಾವಜ್ಞಾತೇಽತ್ರ ಕಾರಣಮ್ ॥೧೫೦॥**

ಮಾರುತಿ ಮೊದಲಾದ ಎಲ್ಲ ದೇವತೆಗಳು, ದೇವಕಾರ್ಯ ಪ್ರಯೋಜನಕ್ಕಾಗಿ (ಅಂಗಭೂತರಾಗಿ) ಹುಟ್ಟಿದ್ದಾರೆ. ಇದು ಶ್ರುತಿಸಮ್ಮತ. ನಿನ್ನ ಅವಜ್ಞಾ ಎಂಬ ಕಾರಣವು ಸರಿಯಾದದ್ದಲ್ಲ.

**ದೀರ್ಘಕಾಲಂ ಮನುಷ್ಯೇಷು ತತಸ್ತ್ವಂ ಸ್ಥಿತಿಮಾಪ್ಸ್ಯಸಿ ॥೧೫೧॥**

**ಇತ್ಯುಕ್ತ್ವಾ ಪ್ರಯಯೌ ಬ್ರಹ್ಮಾ ಸೋಽಶ್ವತ್ಥಾಮಾ ಶಿವೋಽಭವತ ।**
**ಪಂಚದೇವೀ ತನುಸ್ತ್ವೇಷಾ ದ್ರೌಪದೀ ನಾಮಚಾ ಭವತ್ ॥೧೫೨॥**

"ನೀನು ದೀರ್ಘಕಾಲ ಮನುಷ್ಯನಾಗಿಯೇ ಉಳಿಯುವಿ" ಈ ರೀತಿ ಬ್ರಹ್ಮನು ಹೇಳಿ ಹೊರಟುಹೋದನು. ಆ ರುದ್ರದೇವರೇ ಅಶ್ವತ್ಥಾಮರಾಗಿ ಅವತರಿಸಿದ್ದಾರೆ. (ಅವರು ಚಿರಂಜೀವಿಗಳಲ್ಲಿ ಒಬ್ಬರು). ಐದು ದೇವಿಯರನ್ನು ಹೊಂದಿದ ಇಂದ್ರಸೇನೆಯೇ ಮುಂದೆ ದ್ರೌಪದಿ' ಎಂದು ಪ್ರಸಿದ್ಧಳಾದಳು.

**ವೇದೇಷು, ಪುರಾಣೇಷು ಭಾರತೇಚಾವಗಮ್ಯತೇ ।**
**ಉಕ್ತೋರ್ಥಃ ಸರ್ವ ಏವಾಯಂ ತಥಾಪೂರ್ವೋದಿಶಾತ್ವಯೋ ॥೧೫೩॥**

ವೇದ, ಪುರಾಣ, ಭಾರತ ಮುಂತಾದ ಅನೇಕ ಗ್ರಂಥಗಳಲ್ಲಿ ಇದು ಹೇಳಲ್ಪಟ್ಟಿದೆ। ಎಲ್ಲ ದೇವಿಯರಿಗೆ ಶಾಪವಿದ್ದ ಪ್ರಯುಕ್ತ ಒಂದೇ ಶರೀರದಲ್ಲಿ ಅವತರಿಸಿದ್ದಾರೆ. ಹೀಗೆ ಉಂಟಾದ ಅನೇಕ ಸೃಷ್ಟಿಗಳಲ್ಲೂ ಈ ವಿಷಯ ಬಂದಿದೆ.

ವಿ. ವಿ. : ಶ್ರೀಮದಾಚಾರ್ಯರು ದ್ರೌಪದಿಯ ಹುಟ್ಟು ವಿವರಿಸಲು ೧೦೦ ನೇ ಶ್ಲೋಕದಿಂದ ಪ್ರಾರಂಭಿಸಿದ್ದಾರೆ. ಮೊದಲು ಎರಡು ಶ್ಲೋಕಗಳು ದೃಷ್ಟದ್ಯುಮ್ನನಿಗಳಾಗಿದ್ದರೆ, ೧೦೩ ನೇ ಶ್ಲೋಕದಿಂದ ೧೫೩ ಪೂರ್ತಿ ದ್ರೌಪದಿ ಹುಟ್ಟಿಗಾಗಿ ಮೀಸಲಾಗಿವೆ. ಇಷ್ಟು ವಿವರವಾಗಿ ತಿಳಿಸಿದರೂ ಆ ಹುಟ್ಟು ರಹಸ್ಯವಾಗಿಯೇ ಇದೆ. ಇಂದಿಗೂ ಅನೇಕರ ಪ್ರಶ್ನೆಗಳಿಗೆ ಕಾರಣವಾಗಿದೆ. ಬಹಳಷ್ಟು ಜನರಿಗೆ ಶಂಕೆಗೆ ಎಡೆಗೊಟ್ಟಿದೆ.

ಇದು ದೇವತೆಗಳ ವ್ಯಾಪಾರ. ದೇವಲೋಕದ ವ್ಯವಹಾರ. ಮಾನವನ ದೃಷ್ಟಿ, ಮಾನವನ ಬುದ್ಧಿ, ಕಾರ್ಯ ಮಾಡಲಾರವು. ಅಂತೆಯೇ ಆಚಾರ್ಯರು ವೇದಗಳ ಮತ್ತು ಪುರಾಣಗಳ ಉಲ್ಲೇಖ ಮಾಡಿದ್ದಾರೆ. ನಾವು ತಿಳಿಯಬೇಕಾದ ವಿಷಯಗಳು:

೧) ದೇವತೆಗಳಿಗೂ ಪ್ರಾರಬ್ಧ ಕರ್ಮ ತಪ್ಪಿಲ್ಲ. ಅವರೂ ಅದನ್ನು ಭೋಗಿಸಲೇ ಬೇಕಾಗುತ್ತದೆ. ಅದಕ್ಕೆ ತಕ್ಕಂತೆ ಭಗವಂತನು ಅವರಿಗೆ ಬುದ್ಧಿಯನ್ನು ಕೊಡುತ್ತಾನೆ. ಅದಕ್ಕೆ ನಾಲ್ಕು ಜನ ದೇವಿಯರೇ ಸಾಕ್ಷಿ. ಬ್ರಹ್ಮನಂಥವನನ್ನು ವಂಚಿಸಲು ಹೋಗಿ ತೊಂದರೆಗೆ ಈಡಾದರು. ಒಂದುಸಲ ಅಲ್ಲ, ಮೂರು ಸಲ ದೊಡ್ಡವರ ಶಾಪ ನಾಲ್ಕು ಜನ್ಮಗಳವರೆಗೂ ತಪ್ಪಲಿಲ್ಲ. ಒಂದೇ ಗೂಡಿನಲ್ಲಿ ಜನಿಸಬೇಕಾಯಿತು.

೨) ಏಕದೇಹದಲ್ಲಿ ಜನಿಸಲು ಪರಪುರುಷನ ಸ್ಪರ್ಶ ತಪ್ಪಿಸಲು ಅವರಿಗೆ ಭಾರತಿ ದೇವಿಯರಿಗೆ ಶರಣಾಗಬೇಕಾಯಿತು. ಅವರ ಸೇವೆ ಮಾಡಿ ಅವರ ಪ್ರೀತಿಯನ್ನು ಸಂಪಾದಿಸಿದ ನಂತರ ಸ್ವಲ್ಪ ನೆಮ್ಮದಿ ದೊರೆಯಿತು.

೩) ಭಾರತೀದೇವಿಯರು ಪರೋಪಕಾರಾರ್ಥವಾಗಿಯೇ ಜೀವಿಸಿದವರು ಎಂದು ಈ ಘಟನೆಯಿಂದ ಸ್ಪಷ್ಟವಾಗುತ್ತದೆ. ತಮಗೆ ಯಾವ ತೊಂದರೆಯಿಲ್ಲದಿದ್ದರೂ, ಮೊರೆ ಹೊಕ್ಕ ದೇವಿಯರನ್ನು ರಕ್ಷಿಸಲು ಭೂಲೋಕದಲ್ಲಿ ನಾಲ್ಕು ಸಲ ಜನ್ಮ ತಾಳಬೇಕಾಯಿತು. ವಿಪ್ರಕನ್ಯೆ ನಳನಂದನಿ, ಇಂದ್ರಸೇನಾ ಹಾಗೂ ದ್ರೌಪದಿ, ಚಂದ್ರಾ.

೪) ಭಾರತಿದೇವಿಯರ ಹೊರತು ಇತರ ದೇವಿಯರಿಗೆ ಅಜ್ಞಾನವಿದೆ. ತಾವು ಏಕದೇಹದಲ್ಲಿದ್ದುದನ್ನು ಮರೆತು ಒಬ್ಬೊರಿಗೆ ಐದೈದು ಗಂಡಂದಿರೆಂದು ಭಾವಿಸಿ ರೋದಿಸಹತ್ತಿದರು.

೫) ಇಂದ್ರನೂ ಅಜ್ಞಾನಿಯಾದ, ವಟುರೂಪದಲ್ಲಿದ್ದ ಶಿವನನ್ನು ಗುರುತಿಸಲಿಲ್ಲ. ಆತನ ಶಾಪದ ವಿರುದ್ಧ ವರವನ್ನು ಕೊಟ್ಟು ಫಲವಾಗಿ ತಾನೂ ಭೂಲೋಕದಲ್ಲಿ ಅವತರಿಸಬೇಕಾಯಿತು.

೬) ಇಂದ್ರನ ಮೇಲೆ ಪ್ರಭಾವ ಬೀರಲು ಶಿವನೂ ಸ್ವಲ್ಪ ಮಟ್ಟಿಗೆ ಸುಳ್ಳಾಡಿದಂತಾಯಿತು. ಪರಿಣಾಮ ಆತನೂ ಭೂಲೋಕದಲ್ಲಿ ಅವತರಿಸಬೇಕಾಯಿತು. ಅಷ್ಟೇ ಅಲ್ಲ, ಆ ಜನ್ಮದಲ್ಲಿ ಕೊನೆಯವರೆಗೆ ಪತ್ನಿಯನ್ನು ಕಾಣಲಿಲ್ಲ.

೭) ತಾರತಮ್ಯ ದೃಷ್ಟಿಯೂ ಅಡಗಿದೆ. ದೊಡ್ಡವರಿತ್ತ ವರವೇ ಇರಲಿ, ಶಾಪವೇ ಇರಲಿ, ಕೆಳಗಿನವರು ಮನ್ನಿಸಲೇಬೇಕು. ಅದಕ್ಕೆ ವಿರುದ್ಧವಾಗಿ ನಡೆದಲ್ಲಿ ಶಿಕ್ಷೆ ಕಟ್ಟಿಟ್ಟದ್ದು. ಬ್ರಹ್ಮ, ರುದ್ರ ಮತ್ತು ಇಂದ್ರ ಇವರ ಘಟನೆಗಳಿಂದ ನಮಗೆ ವ್ಯಕ್ತವಾಗುತ್ತದೆ.

೮) ವಾಯು, ಯಮ ಮತ್ತು ನಾಸತ್ಯರು ದೇವಕಾರ್ಯಕ್ಕಾಗಿ ಭೂಲೋಕದಲ್ಲಿ ತಾವೇ ಹುಟ್ಟಲು ಸಿದ್ಧರಾಗಿದ್ದರು. ಅವರಿಗೆ ಯಾರ ಶಾಪವೂ ಕಾರಣವಾಗಿರಲಿಲ್ಲ. ಆದರೆ (ಇಂದ್ರನಿತ್ತ?) ವರದಿಂದ ಅವರಿಗೆ ಭೂಲೋಕದಲ್ಲಿ ಹುಟ್ಟಲೇಬೇಕಾಯಿತು. "ನಿಯತಪತಿ–ಪತ್ನಿತ್ವದ" ಧರ್ಮವನ್ನು ಪಾಲಿಸಲೇಬೇಕಲ್ಲವೇ? ಅದು ತಪ್ಪುವಂತಿಲ್ಲ. ಇಂದ್ರ ಶಾಪ ನಿಮಿತ್ತವಾಯಿತು.

೯) ವಾಯುದೇವರು, ಜೀವನಕ್ಕೆ ಆಧಾರ. ಕಾರಣ ತಂದೆಯಿದ್ದಂತೆ ಆತನ ಸ್ಪರ್ಶ ಪರನ–ಸ್ಪರ್ಶವಾಗಲಾರದು.

೧೦) ವಿಷ್ಣುವು ಸರ್ವೋತ್ತಮನು ಎಲ್ಲರಲ್ಲಿ ತಾನಿದ್ದರೂ, ಅವರವರಿಂದ ಆಯಾ ಕಾರ್ಯಗಳನ್ನು ಮಾಡಿಸುತ್ತಾನೆ.

೧೧) ದ್ರೌಪದಿಯು ಐದು ಜನ ಸ್ತ್ರೀಯರನ್ನು ಹೊಂದಿದವಳು ಎಂದು ತಂದೆಯೆನಿಸಿಕೊಂಡ ದ್ರುಪದರಾಜನೇ ಒಪ್ಪಲಿಲ್ಲ. ವೇದವ್ಯಾಸರು ದಿವ್ಯ ದೃಷ್ಟಿಯನ್ನು ಇತ್ತ ನಂತರ ವಿಶ್ವಾಸ ಉಂಟಾಯಿತು. ಅಂದಮೇಲೆ ಮಾನವನು ಒಪ್ಪುವುದು ಹೇಗೆ? ಒಪ್ಪುವುದಕ್ಕಾಗಿ ಇದಕ್ಕೆ ವಿಜ್ಞಾನದ ಒಂದು ಚಿಕ್ಕ ಉದಾಹರಣೆ ಕೊಡಬಯಸುತ್ತೇನೆ. ಬೆಳಕು ಅಥವಾ ಬಿಳಿಯ ಬಣ್ಣ. ನಮಗೆಲ್ಲರಿಗೂ ಒಂದಾಗಿಯೇ ಕಾಣುತ್ತದೆ. ಆದರೆ ವಿಜ್ಞಾನಿಗಳು ಅದನ್ನು ವಿಶ್ಲೇಷಿಸಿ, ಬಣ್ಣ ಬಣ್ಣಗಳನ್ನಾಗಿ ಬಿಡಿಸಿ ತೋರಿಸುತ್ತಾರೆ. ನಮ್ಮಲ್ಲಿಯೂ ವಿಜ್ಞಾನದ ದೃಷ್ಟಿಕೋನ ಬೆಳೆದಾಗ ಬೆಳಕಿನಲ್ಲಿ ಬಣ್ಣಗಳಿವೆ ಎಂದು ಒಪ್ಪುತ್ತೇವೆ. ಇದು ಒಮ್ಮೆಗೆ ಬರಲಾರದು. ಹಲವಾರು ವರ್ಷ ಕಲಿಯಬೇಕು. ಇದು ಇಂದ್ರಿಯ ಗಮ್ಯವಾದದ್ದು. ಆದರೆ, ದ್ರೌಪದಿಯ ವಿಷಯ ಇಂದ್ರಿಯಾತೀತವಾದದ್ದು. ಅದಕ್ಕೆ ದಿವ್ಯದೃಷ್ಟಿಯೇ ಅಗತ್ಯ. ಅದನ್ನು ಪಡೆಯಲು ಸಾಧನೆ ಅಗತ್ಯ. ಸಾಧನೆಯ ಜೊತೆಯಲ್ಲಿ ಪರಮಾತ್ಮನ ಅನುಗ್ರಹವೂ ಬೇಕು.

ವಿಜ್ಞಾನದ ದೃಷ್ಟಿಯಲ್ಲಿ ಬಣ್ಣಗಳಿಲ್ಲದಾಗ ಬೆಳಕು ನಶಿಸಿ ಹೋಗುವುದೇನೋ? ಆದರೆ ಭಾರತೀ ದೇವಿಯರಿಗೆ ಆ ಸ್ಥಿತಿಯಿಲ್ಲ. ಆ ದೇವಿಯರು ಇಲ್ಲದಾಗಲೂ ಅವರು ಸ್ಥಿರವಾಗಿ ಇರತಕ್ಕವರೇ. ದ್ರೌಪದಿ ದೇವಿಯವರ ಬಗೆಗೆ ಇತರ ಇನ್ನೂ ಕೆಲವು ವಿಷಯಗಳಿವೆ. ಪ್ರಸಂಗ ಬಂದಾಗ ಮತ್ತೆ ವಿವೇಚಿಸೋಣ.

**ಮುಮುದುಃ ಸರ್ವಪಾಂಚಾಲಾ ಜಾತಯೋರ್ನ್ಸುತಯೋಃ ।**
**ಮಾನುಷನ್ಮೋಹ ಭೋಗೇನ ಸಂಸರ್ಗಾನ್ಮಾನು ಸ್ತಯೋಃ ಹೇಷುಚ।೧೫೮।**

**ಮನುಷ್ಯ ಪುತ್ರತಾಯಾಶ್ಚ ಭಾವೋ ಮಾನುಷ ಏತಯೋಃ ।**
**ಅಭೂನ್ನಾತಿತರಾಮಾಸೀತ್ತದಯೋ ನಿಶ್ಚ ಹೇತುತಃ ।।೧೫೯।।**

ರಾಜನಿಗೆ ಮಗ ಮತ್ತು ಮಗಳು ಇಬ್ಬರು ಹುಟ್ಟಿದ್ದನ್ನು ಕಂಡು ಪಾಂಚಾಲ ಜನರು ಸಂತೋಷಗೊಂಡರು. ಅವರು ದೇವತೆಗಳಾಗಿದ್ದರೂ, ಮನುಷ್ಯಾನ್ನ ಸೇವನೆ, ಮತ್ತು ಮಾನವರ ಸಹವಾಸದಿಂದ ಮಾನವರ ಮಕ್ಕಳಾದುದರಿಂದ ಅವರಲ್ಲಿ ಮಾನವರ

ಸ್ವಭಾವ ಉಂಟಾಯಿತು. ಆದರೂ (ದೇವತಾಗುಣಗಳನ್ನು ಬಿಟ್ಟಿರಲಿಲ್ಲ) ಮಾನವನ ಸ್ವಭಾವ ಹೆಚ್ಚಾಗಿ ಇರಲಿಲ್ಲ.

**ಯಾಜೋಪಯಾಜೌ ತಾವೇವ ದಯಿತಾ ದ್ರುಪದಸ್ಯ ಚ ।**
**ಮಾತೃಸ್ನೇಹಾರ್ಥಮನಯೋರ್ಯಯಾಚೇ ದದತುಶ್ಚ ತೌ ॥೧೫೬॥**

ದ್ರುಪದ ರಾಜನ ಪತ್ನಿಯು ಬಂದು, ಆ ಮಕ್ಕಳಲ್ಲಿ, ನನ್ನ ಬಗೆಗೆ ತಾಯಿ ಪ್ರೀತಿ ಉಂಟಾಗುವಂತೆ ಮಾಡಿ ಎಂದು, ಯಾಜೋಪಯಾಜರಿಗೆ ಪ್ರಾರ್ಥಿಸಿಕೊಂಡಳು. ಯಾಜೋಪಯಾಜರು ಹಾಗೆ ಆಗಲಿ ಎಂದರು.

**ಜಾತಮಾತ್ರಂ ನಿಹಂತಾರಂ ಭಾರದ್ವಾಜೋ ನಿಶಮ್ಯ ತಂ ।**
**ಯಶೋರ್ಥಮಸ್ತ್ರಾಣಿ ದದಾವಗ್ರಹೀತ್ಯೋಽಪಿ ಲೋಭತಃ ॥**
**ರಾಮಾಸ್ತ್ರಾಣಾಂ ದುರ್ಲಭತ್ವಾತ್ತ್ರಿದಶೇಷ್ವಪಿ ವೀರ್ಯವಾನ್ ॥೧೫೭॥**

ತನ್ನನ್ನು ಕೊಲ್ಲುವುದಕ್ಕಾಗಿಯೇ ಈತನು ಹುಟ್ಟಿದ್ದಾನೆಂದು ತಿಳಿದರೂ, 'ಕೀರ್ತಿ ಉಳಿಯಲಿ' ಎನ್ನುವ ಹೇತುವಿನಿಂದ, ಪರಶುರಾಮರಲ್ಲಿ ಪಡೆದ ಶ್ರೇಷ್ಠವಾದ ಅಸ್ತ್ರಗಳನ್ನು ದೃಷ್ಟದ್ಯುಮ್ನನಿಗೆ ಕೊಟ್ಟರು. (ಕಲಿಸಿದರು) ಅವು ದೇವತೆಗಳಿಗೂ ದುರ್ಲಭ ವಾದ ಅಸ್ತ್ರಗಳು.

**ವಿ. ವಿ. :** ಇಲ್ಲಿ ದ್ರೋಣರ ವಿಶಾಲ ಭಾವನೆಯನ್ನು ಓದುಗರು ಗಮನಿಸಬೇಕು. 'ಕೊಲ್ಲುವ ವೈರಿಗೂ ದಿವ್ಯಾಸ್ತ್ರಗಳನ್ನು ದಾನಮಾಡಿದ್ದಾರೆ.'

**ಭೀಮಾರ್ಜುನಾಭ್ಯಾಂ ಬದ್ಧಂ ತಂ ಶ್ರುತ್ವಾ ಪಾಂಚಾಲ ಭೂಪತಿಂ ।**
**ಪ್ರಾಹಿಣೋತ್ಕೃತವರ್ಮಾಣಂ ಪಾಂಡವಾನಾಂ ಜನಾರ್ದನಃ । ॥೧೫೮॥**

**ಪಾಂಡವೇಷ್ವತುಲಾಂ ಪ್ರೀತಿಂ ಲೋಕೇಖ್ಯಾಪಯಿತುಂ ಪ್ರಭುಃ ॥೧೫೯॥**

ಭೀಮಾರ್ಜುನರು ದ್ರುಪದ ರಾಜನನ್ನು ಬಂಧಿಸಿ ತಂದ ಸುದ್ದಿಯನ್ನು ಕೇಳಿ, ಪ್ರಭುವಾದ ಜನಾರ್ದನನು ಅವರ ಕೀರ್ತಿ ಇನ್ನೂ ಬೆಳೆಯಲಿ ಎನ್ನುವ ಉದ್ದೇಶದಿಂದಲೂ, ತನ್ನ ಪ್ರೀತಿ ಅವರಲ್ಲಿ ಅತಿಶಯವಾಗಿದೆ ಎಂಬುದನ್ನು ಜಗತ್ತಿಗೆ ತೋರಿಸಲು ಕೃತವರ್ಮ ನನ್ನು ಕಳಿಸಿ ಸಂತೋಷ ವ್ಯಕ್ತಪಡಿಸಿದನು.

**ಸನ್ಮಾನ್ಯ ಪಾಂಡವಾನ್ಸೋಽಪಿ ಶೂರಾನುಜಸುತಾಸುತಃ ।**
**ತೈರ್ಮಾನಿತಃ ಕೃಷ್ಣಭಕ್ತ್ಯಾ ಭ್ರಾತೃತ್ವಾಚ್ಚ ಹರಿಂ ಯಯೌ ॥೧೬೦॥**

ಕೃತವರ್ಮನು, ಶೂರರಾಜನ ತಮ್ಮನ ಮಗಳ ಮಗ, ಆತನು ಬಂದು ಪಾಂಡವರಿಗೆ ಸನ್ಮಾನಿಸಿ ಗೌರವಿಸಿದನು. ಕೃಷ್ಣನಲ್ಲಿ ಭಕ್ತಿಯುಳ್ಳ ಪಾಂಡವರು, ಕೃತವರ್ಮ ನಲ್ಲಿ ಭ್ರಾತೃಭಾವವನ್ನು ತೋರಿ, ಅವನನ್ನು ಸತ್ಕರಿಸಿ ಕಳುಹಿದರು.

ಶೂರರಾಜನ ಮಗಳಾದ ಕುಂತಿ, ಪಾಂಡವರ ತಾಯಿ.

ಶೂರನ ತಮ್ಮನ ಮಗಳು ಕೃತವರ್ಮನ ತಾಯಿ – ಅಕ್ಕ ತಂಗಿಯ ಮಕ್ಕಳು ಸಹೋದರರು.

**ತತಃ ಪ್ರಭೃತಿ ಸಂತ್ಯಜ್ಯ ದೇವಪಕ್ಷಾ ಜರಾಸುತಂ ।**
**ಪಾಂಡವಾನಾಶ್ರಿತಾ ಭೂಪಾಜ್ಞಾತ್ವಾ ಭೈಮಾರ್ಜುನಂ ಬಲಮ್ ॥೧೬೧॥**

ಅಂದಿನಿಂದ, ದೇವತೆಗಳ ಪಕ್ಷದಲ್ಲಿರುವ ರಾಜರೆಲ್ಲರು, ಭೀಮಾರ್ಜುನರ ಬಲವನ್ನು ಕಂಡು, ಜರಾಸಂಧನ ಪಕ್ಷವನ್ನು ತ್ಯಜಿಸಿ, ಪಾಂಡವರ ಪಕ್ಷವನ್ನು ಆಶ್ರಯಿಸಿದರು.

**ವಿ. ವಿ. :** ಇದು ರಾಜನೀತಿ. ಬಲಶಾಲಿಗಳ ಪಕ್ಷವನ್ನು ಅನುಸರಿಸುವುದು ವ್ಯಕ್ತಿಯ ಸ್ವಭಾವ.

**ವಿಶೇಷತಶ್ಚ ಕೃಷ್ಣಸ್ಯ ವಿಜ್ಞಾಯ ಸ್ನೇಹಮೇಷು ಹಿ ।**
**ಪರಾಜಿತಾಶ್ಚ ಬಹುಶೋಽಕೃಷ್ಣೇ ನಾಚಿಂತ್ಯ ಕರ್ಮಣಾ ॥೧೬೨॥**

**ಪ್ರತಾಪಾ ದೇವತೇ ಪೂರ್ವಂ ಜರಾಸಂಧ ವಶಂಗತಾಃ ।**
**ನ ಸ್ನೇಹಾತ್ತದ್ಬಲಂ ಜ್ಞಾತ್ವಾ ಪಾರ್ಥಾನಾಂ ಕೇಶವಸ್ಯ ಚ ॥೧೬೩॥**

**ಜನ್ಮಾಂತರಾಭ್ಯಾಸವಶಾತ್ ಸ್ನಿಗ್ಧಾಃ ಕೃಷ್ಣೇಚ ಪಾಂಡುಷು ।**
**ಜರಾಸಂಧ ಭಯಂತ್ಯಕ್ತ್ವಾ ತಾನೇವಚ ಸಮಾಶ್ರಿತಾಃ ॥೧೬೪॥**

**ಅಪಿ ತಂ ಬಹುಶಃ ಕೃಷ್ಣವಿಜಿತಂ ನೈವತತ್ಯಜುಃ ।**
**ಅಸುರಾಃ ಪೂರ್ವಸಂಸ್ಕಾರಾತ್ಸಂಸ್ಕಾರೋ ಬಲವಾನ್ಯತಃ ॥೧೬೫॥**

ಪಾಂಡವರಲ್ಲಿ ಶ್ರೀಕೃಷ್ಣನ ವಿಶೇಷ ಅನುಗ್ರಹವಿರುವದನ್ನು ಅವರು ಅರಿತರು. ಅಚಿಂತ್ಯ ಕಾರ್ಯಗಳನ್ನು ಮಾಡತಕ್ಕ ಶ್ರೀಕೃಷ್ಣನಿಂದ ಆ ರಾಜರು ಅನೇಕ ಸಲ ಪರಾಜಿತರಾಗಿದ್ದರು. ಆದರೂ ಜರಾಸಂಧನ ಭಯ ಮತ್ತು ಬಲಕ್ಕಾಗಿ ಆತನ ವಶರಾಗಿದ್ದರು. ಸ್ನೇಹದಿಂದಲ್ಲ ಈಗ ಶ್ರೀಕೃಷ್ಣನ ಮತ್ತು ಪಾಂಡವರ (ಪಾರ್ಥನ) ಬಲವನ್ನರಿತಮೇಲೆ, ಜನ್ಮಾಂತರ ಸಂಸ್ಕಾರದಿಂದ ಶ್ರೀಕೃಷ್ಣ–ಪಾಂಡವರಲ್ಲಿ ಭಕ್ತಿಯುಳ್ಳವರಾದರು. ಈಗ ಜರಾಸಂಧನ ಭಯವನ್ನು ತ್ಯಜಿಸಿ, ಅವರೆಲ್ಲರು ಪಾಂಡವರನ್ನು ಆಶ್ರಯಿಸಿದರು. ಪೂರ್ವಸಂಸ್ಕಾರ ಬಹು ಪ್ರಬಲವಾದದ್ದು. ಕೃಷ್ಣನಿಂದ ಅನೇಕ ಸಲ ಸೋಲನ್ನಪ್ಪಿದರೂ ಅಸುರರು ಜರಾಸಂಧನ ಪಕ್ಷವನ್ನು ಬಿಡಲೇ ಇಲ್ಲ.

**ದೇವಾಹಿ ಕಾರಣಾದನ್ಯಾನಾಶ್ರಯಂ ತೋಽಪಿ ನಾಂತರಂ ।**
**ಸ್ನೇಹಂ ತ್ಯಜಂತಿ ದೇವೇಷು ತಥಾನ್ಯೇಽನ್ಯೇಷ್ವಪಿ ಸುಟಿಮ್ ॥೧೬೬॥**

ದೇವತೆಗಳು ಯಾವುದೋ ಕಾರಣದಿಂದ (ಅನ್ಯರನ್ನು) ಅಸುರರನ್ನು ಆಶ್ರಯಿಸಿದರೂ, ಅಂತರಂಗದಲ್ಲಿ ಅವರು ದೈವೀ ಸ್ನೇಹವನ್ನು ತ್ಯಜಿಸುವುದಿಲ್ಲ. ಅದೇ ರೀತಿಯಾಗಿ ಅಸುರರು ಕಾರಣದ ಒತ್ತಡದಿಂದ ಸತ್ಸಂಗದಲ್ಲಿ, ಅವರಂತೆ ಕಂಡರೂ ಅವರು ತಮ್ಮ ನಿಜಗುಣಗಳನ್ನು ಬಿಡುವುದಿಲ್ಲ.

**ಧೃತರಾಷ್ಟ್ರೋ ಬಲಂ ಜ್ಞಾತ್ವಾ ಬಹುಶೋಭೀಮಪಾರ್ಥಯೋಃ ।**
**ದೇವತ್ವಾಚ್ಚ ಸ್ವಭಾವೇನ ಜ್ಯೇಷ್ಠತ್ವಾದ್ಧರ್ಮಜಸ್ಯಚ ।**
**ಸುಪ್ರೀತ ಏ ವತಂ ಚಕ್ರೇ ಯೌರಾಜ್ಯಾಭಿಷೇ ಕಿಣಮ್ ॥೧೬೭॥**

ಧೃತರಾಷ್ಟ್ರನು, ಭೀಮಾರ್ಜುನರ ಬಲವನ್ನು ಅನೇಕ ಸಲ ಕಂಡು, ತಿಳಿದಿದ್ದನು. ಅಲ್ಲದೆ ದೈವೀಸ್ವಭಾವಿಯೂ ಆಗಿದ್ದನು, ಮೇಲಾಗಿ ಧರ್ಮನು ಜ್ಯೇಷ್ಠ ಎಂಬುದನ್ನೂ ತಿಳಿಸಿದ್ದನು. ಅದಕ್ಕಾಗಿ ಪ್ರೀತಿಯಿಂದಲೇ ಧರ್ಮರಾಜನಿಗೆ ಯುವರಾಜ ಪಟ್ಟಾಭಿಷೇಕ ಮಾಡಿದನು.

**ಭೀಮಾರ್ಜುನಾ ವದೋ ಜಿತ್ವಾ ಸರ್ವದಿಕ್ಷುಚ ಭೂಪತೀನ್ ।**
**ಚಕ್ರತುಃ ಕರದಾನ್ಸರ್ವಾನ್ ಧೃತರಾಷ್ಟ್ರಸ್ಯ ದುರ್ಜಯೌ ॥೧೬೮॥**

ಪಟ್ಟಾಭಿಷೇಕದ ನಂತರ ಭೀಮಾರ್ಜುನರು ಸರ್ವ ದಿಕ್ಕಿನ ರಾಜರನ್ನು ಗೆದ್ದರು. ಧೃತರಾಷ್ಟ್ರನಿಗೆ ದುರ್ಜಯವಾದ ರಾಜರನ್ನೂ ಗೆದ್ದರು. ಎಲ್ಲಾ ರಾಜರು ಧೃತರಾಷ್ಟ್ರನಿಗೆ ಕರವನ್ನು ತಂದೊಪ್ಪಿಸುವಂತೆ ಮಾಡಿದರು.

**ತಯೋಃ ಪ್ರೀತೋಽಭವತ್ಸೋಽಪಿ ಪೌರಜಾನಪದಾಸ್ತದಾ।**
**ಭೀಷ್ಮ ದ್ರೋಣಮುಖಾಃ ಸರ್ವೇಽಪ್ಯತಿ ಮಾನುಷಕರ್ಮಣಾ ॥೧೬೯॥**

ಸಾಮಾನ್ಯ ಜನರಿಗೆ ಮಾಡಲು ಅಶಕ್ಯವಾದ ಕಾರ್ಯಗಳನ್ನು ಭೀಮಾರ್ಜುನರು ಮಾಡಿದ್ದನ್ನು ಕಂಡು, ಧೃತರಾಷ್ಟ್ರನು ಭೀಷ್ಮ, ದ್ರೋಣ ಮೊದಲಾದವರು, ಇತರ ಪೌರರು, ಹಳ್ಳಿಗರು ಕೂಡ ಸಂತುಷ್ಟರಾದರು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯೇ
ಪಾಂಡವ ದಿಗ್ವಿಜಯೋನಾಮ
ಅಷ್ಟಾದಶೋಽಧ್ಯಾಯಃ ॥

ಇಲ್ಲಿಗೆ ಶ್ರೀಮದಾನಂದ ತೀರ್ಥರಿಂದ ರಚಿತವಾದ, ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿಯ 'ಪಾಂಡವ ದಿಗ್ವಿಜಯ' ಎಂಬ ಹದಿನೆಂಟನೇ ಅಧ್ಯಾಯ ಮುಗಿದು ಇದನ್ನು ಶ್ರೀಕೃಷ್ಣನು ಸ್ವೀಕರಿಸಿ ಅನುಗ್ರಹಿಸಲಿ.

ಶ್ರೀ ಕೃಷ್ಣಾರ್ಪಣಮಸ್ತು ಶ್ರೀ ಮಧ್ವೇಶಾರ್ಪಣಮಸ್ತು

# ಅಧ್ಯಾಯದ ಚಿಂತನೆ

ಆಚಾರ್ಯ ದ್ರೋಣರು ಕುರು–ಪಾಂಡವರಿಗೆ ವಿದ್ಯೆ ಮತ್ತು ಶಸ್ತ್ರಗಳ ಅಭ್ಯಾಸವನ್ನು ಮಾಡಿಸಿದರು. ಎಲ್ಲರಲ್ಲೂ (ಭೀಮನನ್ನು ಬಿಟ್ಟು) ಅರ್ಜುನನು ಶ್ರೇಷ್ಠನಾದನು.

ದ್ರೋಣರ ಹತ್ತಿರ ಭೀಮನು ವಿದ್ಯೆಯನ್ನು ಕಲಿಯಲಿಲ್ಲ. ತನಗಿಂತಲೂ ಕೆಳ ದರ್ಜೆಯಲ್ಲಿದ್ದ ದೇವತೆಗಳನ್ನು ಪ್ರಾರ್ಥಿಸಲಿಲ್ಲ. ಆತನ ಮನಸ್ಸು ಒಪ್ಪಲಿಲ್ಲ. ಅಲ್ಲದೇ ಆತನು ಸ್ವಪ್ರತಿಭೆಯಿಂದ ಎಲ್ಲ ಬಲ್ಲವನಾಗಿದ್ದನು. "ದೇವರ ವಿನಃ ಅನ್ಯರನ್ನು ಬೇಡುವುದು ಭಾಗವತ ಧರ್ಮದ ವಿರುದ್ಧ" ಭೀಮಸೇನ ದೇವರು ಶುದ್ಧ ಭಾಗವತರಾದ ಕಾರಣ ಯಾರನ್ನೂ ಏನನ್ನೂ ಎಂದೂ ಕೇಳಿಲ್ಲ. ಕೆಲವೊಂದು ಸಲ ಪ್ರಸಂಗ ಬಂದಾಗ ದೇವತೆಗಳಿಗೆ ಆಜ್ಞೆಯಿತ್ತು, ಕೆಲಸ ಮಾಡಿಸಿದ್ದಾರೆ. ಹರಿನಿಂದೆ ಸಹಿಸಿದವರಲ್ಲ. ಸಂಶಯ ಜ್ಞಾನದ ಸುಳಿವೇ ಅವರ ಹತ್ತಿರ ಇರಲಿಲ್ಲ ವಿದ್ಯೆಯನ್ನು ತಮ್ಮ ಜೀವನೋಪಾಯಕ್ಕಾಗಿ ಬಳಸಿದವರಲ್ಲ. ಹರಿಯಾಜ್ಞೆಯನ್ನು ಎಂದೂ ಉಲ್ಲಂಘಿಸಿದವರಲ್ಲ. ಬ್ರಹ್ಮ, ವಾಣಿ, ವಾಯು, ಭಾರತಿ ಈ ನಾಲ್ಕು ಜನರು ಅಭಿನ್ನ ಭಕ್ತರು ಉಳಿದವರೆಲ್ಲ ಭಿನ್ನ ಭಕ್ತರು. ಅವರಿಗೆ ಆಗಾಗೆ ಅಜ್ಞಾನ ಆವರಿಸಿದ್ದುಂಟು. ಅನೇಕ ಉದಾಹರಣೆಗಳನ್ನು ಕೊಡಲಾಗಿದೆ.

ಒಂದು ದಿನ ಅಸ್ತ್ರ ವಿದ್ಯೆಗಳ ಪ್ರದರ್ಶನ ನಡೆಯಿತು. ಹಿರಿಯರೆಲ್ಲ ಸೇರಿದ್ದರು. ಕುಂತಿಯೂ ಬಂದಿದ್ದಳು. ಎಲ್ಲ ವಿದ್ಯೆಗಳಲ್ಲಿ ಅರ್ಜುನನು ಶ್ರೇಷ್ಠನೆನಿಸಿದನು. ಕರ್ಣನು ತಾನು ಅಲ್ಲಿ ವಿದ್ಯೆ ಕಲಿಯದೇ ಇದ್ದರೂ, ಉತ್ಸುಕತೆಯಿಂದ ತಾನು ಪರಶುರಾಮರಲ್ಲಿ ಕಲಿತ ವಿದ್ಯೆಯನ್ನು ಪ್ರದರ್ಶಿಸಲು ಬಂದನು. ವಿದ್ಯೆಯ ಪ್ರದರ್ಶನದಲ್ಲಿ ಅರ್ಜುನನಿಗಿಂತಲೂ ಮಿಗಿಲಾದನು. ಕುಂತಿ ಗುರ್ತಿಸಿ ಆನಂದಿಸಿದಳು. ಆದರೂ ಏನೂ ಅನ್ನುವಂತಿರಲಿಲ್ಲ. ಕರ್ಣನ ಶ್ರೇಷ್ಠತೆಯನ್ನು ಕಂಡ ಅರ್ಜುನನು, ಸಹಿಸದೆ ಯುದ್ಧಕ್ಕೆ ಕರೆದನು. ಇನ್ನೇನು ಯುದ್ಧ ಪ್ರಾರಂಭವಾಗಬೇಕು. ಆಗ ಭೀಮನು ಬಂದು ತಡೆದನು. "ಅಕ್ಷತ್ರಿಯನೊಂದಿಗೆ ಯುದ್ಧ ತರವಲ್ಲ" ಎಂದು ಯುದ್ಧ ನಿಲ್ಲಿಸಿದನು. ಅಷ್ಟೇ ಅಲ್ಲ ಕರ್ಣನಿಗೆ ಕುದುರೆಯನ್ನು ಹೊಡೆಯುವ ಚಾಬುಕನ್ನು ತಂದು ಕೊಟ್ಟನು. ಕೇವಲ ಹುಟ್ಟು ಮುಖ್ಯವಲ್ಲ. ಸಂಸ್ಕಾರಗಳು ಅತ್ಯಗತ್ಯ ಎಂಬುದನ್ನು ಇಲ್ಲಿ ಎತ್ತಿತೋರಿದ್ದಾರೆ.

ಕರ್ಣನು ನಿರುತ್ತರನಾಗಿ ಸುಮ್ಮನಾದನು. ಅದು ಅಂದಿನ ಸಮಾಜದ ಧರ್ಮ.

ದುರ್ಯೋಧನನು, ತಂದೆಯನ್ನು ಕೇಳಿ, ಅಂಗರಾಜ್ಯ ಕರ್ಣನಿಗಿತ್ತು ಪಟ್ಟಾಭಿಷೇಕ ಮಾಡಿದನು. ಈಗ ಕರ್ಣನು ರಾಜನು. ಆ ಪಟ್ಟಾಭಿಷೇಕದ ಕಾಲದಲ್ಲಿ ಕರ್ಣನ ಸಾಕು ತಂದೆ, ಅತಿರಥನು ಅಲ್ಲಿ ಬಂದಿದ್ದನು. ಅನೇಕ ರಾಜರ ಮಧ್ಯೆ ಕರ್ಣನು ನೇರವಾಗಿ ಬಂದು ತಂದೆಗೆ ನಮಸ್ಕರಿಸಿದನು. ಇಲ್ಲಿ ಕರ್ಣನ ವಿನಯ ಹಾಗೂ ಒಳ್ಳೆಯ ಗುಣ ಎದ್ದು ಕಾಣುತ್ತದೆ. ನಂತರ ಭೀಮ ದುರ್ಯೋಧನರ ಗದಾ ವಿದ್ಯೆಯ ಪ್ರದರ್ಶನ. ಅಲ್ಲಿ ಆಚಾರ್ಯರು 'ಛಲಾತ್' ಎಂಬ ಪದ ಬಳಸಿದ್ದಾರೆ. ಅಂದರೆ ಅವರ ವಿದ್ಯೆಯ ಪ್ರದರ್ಶನ ಕೇವಲ ಪ್ರದರ್ಶನ ಆಗಿರಲಿಲ್ಲ. ಛಲದಿಂದ ಕೂಡಿತ್ತು. ದೇವಾಸುರರಲ್ಲಿ ಎರಡು

ಗುಂಪುಗಳೇ ಆದವು. ಪ್ರಾರಂಭದಲ್ಲಿಯೇ ಭೀಕರದ ಭಯ ಕಂಡಿತು. ಇದನ್ನರಿತ ದ್ರೋಣರು, ಆ ಪ್ರದರ್ಶನ ನಿಲ್ಲಿಸಿದರು. ನೀವಿಬ್ಬರು ನಿಮ್ಮ ನಿಮ್ಮಲ್ಲಿ ಶ್ರೇಷ್ಠರೇ ಎಂದು ತೀರ್ಮಾನ ವಿತ್ತರು. ಗುರುಗಳ ಮಾತೆಗೆ ಇಬ್ಬರೂ ಹಿಂದಿರುಗಿದರು.

'ಅರ್ಜುನನನ್ನು ಕರ್ಣನೇ ಕೊಲ್ಲಬೇಕು' ಎಂದು ದುರ್ಯೋಧನ ಪ್ರತಿಜ್ಞೆ ಮಾಡಿದರೆ, 'ಕರ್ಣನನ್ನು ಅರ್ಜುನನೇ ಕೊಲ್ಲಬೇಕು' ಎಂದು ಭೀಮನು ನಿಶ್ಚಯಿಸಿದನು. **ದೇವ–ದಾನವರ ಪಕ್ಷಗಳೇ ಹುಟ್ಟಿಕೊಂಡವು.**

ಹಿಂದೆ ಹನುಮಂತನು ಸುಗ್ರೀವನನ್ನು ರಕ್ಷಿಸಿದನು. ಇಂದು ಭೀಮನು ಅರ್ಜುನನನ್ನು ರಕ್ಷಿಸುತ್ತಿದ್ದಾನೆ. ವಾಲಿ–ಸುಗ್ರೀವ, ಕರ್ಣ–ಅರ್ಜುನ ಇಬ್ಬರೂ ದೇವತೆ ಗಳೇ. ಆದರೂ ವಾಯುವಿನ ಅನುಗ್ರಹದಿಂದ ಒಬ್ಬೊಬ್ಬರಿಗೆ ಒಂದೊಂದು ಸಲ ಜಯ. ಹನುಮನು ಒಲಿದರೆ, ಹರಿತಾ ಒಲಿವ ಈ ಮಾತು ಸತ್ಯ.

ಈಗ ಗುರುದಕ್ಷಿಣೆಯ ಪ್ರಸಂಗ – ದ್ರುಪದರಾಜನನ್ನು ಬಂಧಿಸಿ ತರಬೇಕು. ಇದು ಗುರುವಿನ ಆಜ್ಞೆ, ಇಬ್ಬರೂ ಪಾಂಚಾಲದತ್ತ ಸಾಗಿದರು. ಮಧ್ಯದಲ್ಲಿ ಭೀಮನು ಕೌರವರ ಮುಖಭಂಗಮಾಡುವ ಉದ್ದೇಶದಿಂದ ಪಾಂಡವರನ್ನು ಗುರುಗಳನ್ನು ನಿಲ್ಲಿಸಿದನು. ಕೌರವರು ಮುಂದೆ ಸಾಗಿ ಪಾಂಚಾಲರ ಪೌರರಿಂದಲೇ ಪೆಟ್ಟು ತಿಂದು ಸೋತು ಪಾಂಡವರ ಸಹಾಯಕ್ಕಾಗಿ ಕೂಗುತ್ತ ಹಿಂದಿರುಗಿದರು. ನಂತರ ಪಾಂಡವರು ಮುಂದೆ ಸಾಗಿದರು. ಪಾಂಚಾಲರ ಗುಟ್ಟು ಭೀಮನು ಅರಿತಿದ್ದನು. ಇಬ್ಬರಿಗೂ ಯುದ್ಧವಾಯಿತು. ಪಾಂಡವರು ಗೆದ್ದರು. ದ್ರುಪದನು ಸೆರೆ ಸಿಕ್ಕನು. ಭೀಮನು ಪಾಂಚಾಲರ ಸೈನ್ಯವನ್ನು ನಾಶ ಮಾಡುವುದನ್ನು ಕಂಡು, ಅರ್ಜುನನು, "ಅಣ್ಣಾ ಸೈನ್ಯವನ್ನು ನಾಶಮಾಡಬೇಡ. ಅದು ಯೋಗ್ಯವಲ್ಲ. ದ್ರುಪದನು ಒಳ್ಳೆಯವನು, ನಮ್ಮ ತಂದೆಯ ಗೆಳೆಯನು, ಸಂಬಂಧಕ್ಕೆ ಯೋಗ್ಯನಾದವನು. ಈಗ ಗುರುವಾಜ್ಞೆಯಿಂದಾಗಿ ದ್ರುಪದನನ್ನು ಮಾತ್ರ ಹಿಡಿದುಕೊಂಡು ಹೋಗೋಣ" ಎಂದು ಹೇಳಿದನು. ಭೀಮನಿಂದ ಸೈನ್ಯ ಮುಕ್ತವಾಯಿತು.

ದ್ರುಪದನನ್ನು ದ್ರೋಣರ ಮುಂದೆ ತಂದು ನಿಲ್ಲಿಸಲಾಯಿತು. ದ್ರೋಣರು ಮೂದಲಿಸುವ ಮಾತುಗಳನ್ನಾಡಿದರು. ಅದೇ ಮುಂದೆ ದ್ವೇಷಕ್ಕೆ ಕಾರಣವಾಯಿತು. ದ್ರುಪದರ ಯೋಗ್ಯತೆಗೆ ಅದು ತಕ್ಕುದಲ್ಲ ಆದರೂ ನಡೆದುಹೋಯಿತು. ದ್ರೋಣರು ಸಖ್ಯವನ್ನು ಸ್ಥಿರವಾಗಿ ನಿಲ್ಲುವಂತೆ ಮಾಡಲು ಗಂಗಾ ನದಿಯ ಉತ್ತರ ಭಾಗದ ಅರ್ಧ ರಾಜ್ಯವನ್ನು ಕಸಿದುಕೊಂಡು ಕಳಿಸಿದರು. ಸಖ್ಯದ ಬದಲಾಗಿ ವೈರತ್ವ ಸ್ಥಿರವಾಯಿತು.

ದ್ರೋಣರ ಮಾತುಗಳಿಂದ ನೊಂದ, ಅರ್ಜುನನ ಮಾತುಗಳಿಂದ ಸಂತುಷ್ಟನಾದ ದ್ರುಪದನು, ದ್ರೋಣರನ್ನು ಕೊಲ್ಲುವಂಥ ಮಗ, ಅರ್ಜುನನಿಗೆ ಯೋಗ್ಯಳಾದ ಮಗಳನ್ನು ಪಡೆಯಲೇಬೇಕು ಎಂದು ನಿಶ್ಚಯಿಸಿದನು.

ಮುಂದೆ ಆ ದ್ರುಪದನು 'ಯಾಜೋಪಯಾಜ' ರೆಂಬ ಶ್ರೇಷ್ಠ ವಿಪ್ರರನ್ನು ಕರೆಸಿ, ದಾನ–ಧರ್ಮಗಳಿಂದ ಅವರನ್ನು ಸಂತುಷ್ಟಪಡಿಸಿ, ತನ್ನ ಇಂಗಿತ ತಿಳಿಸಿ ಪುತ್ರಕಾಮೇಷ್ಟಿ ಯಾಗಕ್ಕಾಗಿ ಪ್ರಾರ್ಥಿಸಿಕೊಂಡನು. ವಿಪ್ರರು ಅಷ್ಟೇ ನಿಷ್ಠೆಯಿಂದ ಯಾಗ ಪ್ರಾರಂಭಿಸಿದರು.

ಮಧ್ಯದಲ್ಲಿ ರಾಜನ ಮಡದಿಗೆ ಪ್ರಾಶನ ಮಾಡಿಸಲು ಪಾಯಸ ಸಿದ್ಧವಾಯಿತು. ಮಡದಿಯನ್ನು ಯಜ್ಞಸ್ಥಳಕ್ಕಾಗಿ ಕರೆಸಿದರು. 'ನಾನಿಲ್ಲದೇ ಮಕ್ಕಳು ಆಗಲಾರವು. ಮಕ್ಕಳ ಉತ್ಪತ್ತಿಗೆ ನಾನೇ ಕಾರಣಳು' ಎಂಬ ಅಹಂಕಾರದಿಂದ ಬರಲು ತಡಮಾಡಿದಳು. ವಿಪ್ರರು ಮುಹೂರ್ತಕ್ಕಾಗಿ ಕಾದು, ಮಡದಿ ಬರದೇ ಇದ್ದಾಗ, ಆಕೆಯಿಂದ ನಮಗೇನಾಗಬೇಕಾಗಿದೆ ಎಂದು ಹೇಳಿ, ಆ ಪಾಯಸವನ್ನೇ ಹವಿಸ್ಸನ್ನಾಗಿಸಿ ಅಗ್ನಿಯಲ್ಲಿ ಹೋಮಿಸಿದರು. ಆ ಅಗ್ನಿ ಕುಂಡದಿಂದ ಸಕಲಾಭರಣ ಭೂಷಿತನಾಗಿ, ಅಗ್ನಿಪ್ರಕಾಶದಂತೆ ಹೊಳೆಯುವ ಒಬ್ಬ ಪುರುಷನು ಮೇಲೆ ಬಂದನು. ಆತನೇ **'ಧೃಷ್ಟದ್ಯುಮ್ನ'**ನು. ಮುಂದೆ ಆತನನ್ನು ಅನುಸರಿಸಿಯೇ ಅದೇ ಕುಂಡದಿಂದ **'ಭಾರತೀ ದೇವಿಯರು' 'ದ್ರೌಪದಿಯೆ'** ನಾಮದಿಂದ ಹೊರಬಂದರು. **ದ್ರುಪದನ ಮಗಳಾದ ಕಾರಣ 'ದ್ರೌಪದಿ' ಹೇಗೆ 'ಜನಕನ ಮಗಳಾದ ಕಾರಣ ಜಾನಕಿ'** ಇದ್ದಂತೆ.

'ದ್ರೌಪದಿ'ಯ ವ್ಯಕ್ತಿತ್ವ ಇಂದು ಅನೇಕರ ಚರ್ಚೆಗೆ ಕಾರಣವಾಗಿದೆ. ಟೀಕೆ ಗಳಿಗೂ ಒಳಗಾಗಿದೆ. ಅದಕ್ಕಾಗಿಯೇ ಆಚಾರ್ಯರು ಬಹಳಷ್ಟು ವಿಶದವಾಗಿ ವಿವರಿಸಿದ್ದಾರೆ. ಲೇಖಕರೂ ಇದರ ವಿವರಣೆಗೆ ಸಾಕಷ್ಟು ಶ್ರಮಿಸಿದ್ದಾರೆ. ಆದರೂ ಅನೇಕರಿಗೆ ಇದು ಒಗಟಾಗಿಯೇ ಉಳಿದಿದೆ. ಅದಕ್ಕಾಗಿ ಇದು ಮತ್ತೊಂದು ಪ್ರಯತ್ನ.

'ದ್ರೌಪದಿದೇವಿಯರನ್ನು' ಕುರಿತು ವಿಚಾರಿಸುವಾಗ ಕಾಲಮಾನಗಳನ್ನು ಲಕ್ಷ್ಯದಲ್ಲಿಡುವುದು ಅತ್ಯವಶ್ಯಕ. ದ್ವಾಪರದ ಸ್ಥಿತಿಯನ್ನು ಕಲಿಯುಗ ಅರ್ಧ ಕಳೆದ ನಂತರ, ಅದೂ ಅಣು ಯುಗದಲ್ಲಿ ವಿಚಾರಿಸುವುದು ಎಷ್ಟು ಸಮಂಜಸ?

ದೇವತೆಗಳ ನಡೆನುಡಿಗಳನ್ನು ಮಾನವರಾದ ನಾವು ಅರಿಯಲಾರೆವು. ನಮ್ಮ ಮೂಗಿನ ನೇರ ಅವರನ್ನು ಕಾಣುವುದು ಸರಿ ಎನಿಸಲಾರದು. ಯುಗಧರ್ಮಕ್ಕನುಸರಿಸಿ, ನಡೆ–ನುಡಿ, ಆಚಾರ–ವಿಚಾರ ಸಮಾಜದ ಚೌಕಟ್ಟು ಎಲ್ಲವೂ ಬದಲಾಗುತ್ತವೆ. ಅಷ್ಟೇ ಏಕೆ ಆಯು ಮತ್ತು ಬುದ್ಧಿಮತ್ತೆಯಲ್ಲಿಯೂ ಕ್ಷೀಣತೆವುಂಟಾಗುತ್ತದೆ ಎಂಬುದು ಅನೇಕರು ಒಪ್ಪಿದ ವಿಷಯ.

ಈ ಹಿನ್ನೆಲೆಯಲ್ಲಿ ದ್ರೌಪದಿಯ ಪಾತ್ರದ ಬಗೆಗೆ ವಿಚಾರಿಸುವುದು ಅಗತ್ಯ. ದ್ರೌಪದಿ 'ಒಬ್ಬಳಲ್ಲ ಐದು ಜನರಿಂದ ಕೂಡಿದ ಸ್ತ್ರೀ' ಎಂಬುದು ಆಚಾರ್ಯರ ಸಿದ್ಧಾಂತ. ಅದನ್ನು ಸ್ಪಷ್ಟೀಕರಿಸಲೆಂದೇ ಈ ಕೆಳಗಿನ ವಿವರಣೆ ನೀಡಲಾಗಿದೆ.

ಹಿಂದೆ ಒಂದುಸಲ ಶಚಿ (ಇಂದ್ರನ ಪತ್ನಿ) ಶಾಮಲಾ (ಯಮನ ಪತ್ನಿ) ಉಷಾ (ಅಶ್ವಿನಿ ದೇವತೆಗಳ ಪತ್ನಿ) ಮೂರು ಜನ ಒಂದೇಗೂಡಿನಲ್ಲಿದ್ದರು. ಆ ಸಮಯಕ್ಕೆ ಬ್ರಹ್ಮದೇವರು ಸ್ನಾನಕ್ಕಾಗಿ ಹೊರಟಿದ್ದರು. ಈ ಮೂರು ಜನ ಬ್ರಹ್ಮನಿಗೆ ಪರಿಹಾಸ ಮಾಡಬೇಕೆಂದು ಒಂದೇ ಸೀರೆಯನ್ನು ಸುತ್ತಿಕೊಂಡರು. ಬ್ರಹ್ಮನ ಮುಂದೆ ಬಂದರು. ಬ್ರಹ್ಮನು ಇವರನ್ನು ಕಂಡು ರೇಗಿದನು. **''ನೀವು ಮೂರು ಜನ್ಮಗಳಲ್ಲಿ ಒಂದೇ ಗೂಡಿನಲ್ಲಿ ಹುಟ್ಟಿರಿ. ದ್ವಾಪರ ಯುಗದಲ್ಲಿ ಉದ್ಧೃತರಾಗಿರಿ''** ಶಾಪ ಮತ್ತು ವರವನ್ನು ಕೊಟ್ಟನು. ಅಲ್ಲಿಯೇ ನಿಂತಿದ್ದ **ಪಾರ್ವತಿಯು** ಇದನ್ನು ಕಂಡು ನಕ್ಕಳು. ಬ್ರಹ್ಮನಿಗೆ ಇದು ಸಹನೆ ಆಗಲಿಲ್ಲ. **'ನೀನು ಭೂಮಿಯಲ್ಲಿ ಅವತರಿಸು'** ಎಂದು ಶಾಪವಿತ್ತನು.

ದೇವತೆಗಳಾಗಿಯೂ, ಬ್ರಹ್ಮನ ಯೋಗ್ಯತೆ ಮತ್ತು ಸ್ವಭಾವವನ್ನು ಬಲ್ಲವರಾಗಿಯೂ ಅವರು ಹೀಗೇಕೆ ಮಾಡಿದರು?

ಅವರು ಕರ್ಮಫಲವನ್ನು ಮುಂದೆ ಭೋಗಿಸಬೇಕಾಗಿದೆ. ಅದಕ್ಕಾಗಿಯೇ ಪರಮಾತ್ಮನು ಅವರಿಗೆ ಆ ರೀತಿಯ ಬುದ್ಧಿಯನ್ನು ಕೊಟ್ಟನು. '**ವಿನಾಶಕಾಲೇ ವಿಪರೀತ ಬುದ್ಧಿ**' ಇಂದಿಗೂ ಪ್ರಸಿದ್ಧಿಯಿದೆಯಲ್ಲವೇ?

ಶಾಪವನ್ನು ಕೇಳಿ ದೇವತಾಸ್ತ್ರೀಯರು ಗಾಬರಿಯಾದರು. ಪಶ್ಚಾತ್ತಾಪಪಟ್ಟು ನಮಗೆ ಪರಪುರುಷರ ಸಂಗವಾಗದಂತೆ ಕರುಣಿಸಿರಿ ಎಂದು ಕೇಳಿದರು. ಕರುಣಾಳುವಾದ ಬ್ರಹ್ಮನು 'ಆಗಲಿ' ಎಂದು ಹೇಳಿ, 'ನೀವೆಲ್ಲರು ಭಾರತಿದೇವಿಯರನ್ನು ತಪಸ್ಸಿನಿಂದ ಒಲಿಸಿರಿ. ಆಗ ನಿಮ್ಮ ಕಾರ್ಯ ಈಡೇರುವುದೆಂದು ಹೇಳಿ ಹೊರಟುಹೋದನು.

ಅವರೆಲ್ಲರೂ ಬಹುಕಾಲ ತಪಸ್ಸು ಮಾಡಿ ಭಾರತಿದೇವಿಯರ ಅನುಗ್ರಹಕ್ಕೆ ಪಾತ್ರರಾದರು. ತಮ್ಮ ಗೋಳನ್ನು ಹೇಳಿಕೊಂಡರು. ನಮಗೆ ಭೂಲೋಕದಲ್ಲಿ ಮೂರು ಜನ್ಮಗಳು ತಾಳಬೇಕಾಗಿದೆ. ಜೊತೆಯಲ್ಲಿ ಪರಪುರುಷರ ಸಂಗವಾಗದಂತೆ ಬಾಳಬೇಕಾಗಿದೆ. ನಿಮ್ಮಲ್ಲಿ ಸೇರಿದರೆ ಇದು ಸಾಧ್ಯ. ನಿಮ್ಮನ್ನು ವಾಯುವಿನ ಹೊರತು ಇತರರು ಯಾರೂ ಮುಟ್ಟಲಾರರು. ವಾಯು ನಮಗೆ ತಂದೆಯ ಸಮಾನ. ಆತನ ಸ್ಪರ್ಶ ಪರಪುರುಷನ ಸ್ಪರ್ಶ ಎನಿಸಲಾರದು ಎಂದು ಆಶ್ರಯಕ್ಕಾಗಿ ಪ್ರಾರ್ಥಿಸಿಕೊಂಡರು.

ಭಾರತಿದೇವಿಯರು ಪರೋಪಕಾರದ ಹೇತುವಿನಿಂದ, ಮೊದಲು 'ವಿಪ್ರಕನ್ಯೆ' ಶಿವಕನ್ಯೆಯಾಗಿ ಜನಿಸಿದಳು. ಆಕೆಯ ಶರೀರದಲ್ಲಿ ನಾಲ್ಕು ಜನ ದೇವಿಯರು ಏಕದೇಹರಾಗಿಯೇ ಇದ್ದರು. ಅವರೆಲ್ಲರೊಂದಿಗೆ ವಿಪ್ರ ಕನ್ಯೆಯು ರುದ್ರದೇವರಂತರ್ಗತ ಶ್ರೀಹರಿಯನ್ನು ಕುರಿತು ತಪಸ್ಸು ಮಾಡಿದರು. ಇತರ ದೇವಿಯರು ರುದ್ರದೇವರನ್ನು ಕುರಿತು ತಪಸ್ಸು ಮಾಡಿದರು. ವಿಪ್ರಕನ್ಯೆಯ ತಪಸ್ಸು ಕೇವಲ ತನಗಾಗಿ ಇರಲಿಲ್ಲ. ತನ್ನನ್ನು ಆಶ್ರಯಿಸಿದ ದೇವತೆಗಳ ಇಷ್ಟ ಪೂರ್ತಿಯಾಗಲಿ, ಅವರ ಕರ್ಮದಲ್ಲಿ ಐಕ್ಯತೆ ಬರಲಿ ಎಂಬುದೇ ಗುರಿಯಾಗಿತ್ತು. ಆದರೂ ರುದ್ರಾಂತರ್ಗತ ಶ್ರೀಹರಿಯು "**ನೀನು ಎಲ್ಲ ಜನ್ಮಗಳಲ್ಲೂ ಪತಿಯನ್ನು ಕೂಡಿಕೊಂಡು ಶ್ರೀಹರಿಯ ಪ್ರೀತ್ಯರ್ಥಸೇವೆ ಮಾಡಿ ಸಂತೋಷದಿಂದಿರು**" ಎಂದು ವಿಪ್ರಕನ್ಯಾಂತರ್ಗತ ಭಾರತಿ ದೇವಿಯರಿಗೆ ವರವಿತ್ತನು. ಇತರ ದೇವತೆಗಳಿಗೆ ರುದ್ರದೇವರೇ "ನಿಮ್ಮ ನಿಮ್ಮ ಪತಿಗಳನ್ನು ಹೊಂದಿರಿ" ಎಂದು ವರವಿತ್ತನು. ಈ ಸಾಧನೆಯನ್ನು ಸಾಧಿಸಿದ ಕೂಡಲೇ ವಿಪ್ರಕನ್ಯೆಯು ದೇಹವನ್ನು ತ್ಯಜಿಸಿದಳು.

ಭಾರತಿದೇವಿಯರು, ತನ್ನನ್ನಾಶ್ರಯಿಸಿದ ಸ್ತ್ರೀಯರ ಉದ್ಧಾರ ಆಗಲಿ ಎನ್ನುವ ದೃಷ್ಟಿಯಿಂದಲೇ 'ನಳನಂದಿನಿ' ಆಗಿ ಹುಟ್ಟಿದರು.

ಆ ದೇಹದಿಂದ ಕೆಲವು ಕಾಲವಿದ್ದು, ಸ್ವೇಚ್ಛೆಯಿಂದಲೇ 'ಇಂದ್ರಸೇನಾ' ಎಂಬ ಮೂರನೇ ಜನ್ಮ ತಾಳಿದರು. ಪ್ರತಿಯೊಂದು ಜನ್ಮದಲ್ಲಿಯೂ ನಾಲ್ಕುಜನ ದೇವಿಯರು ಭಾರತೀಯ ದೇಹದಲ್ಲಿಯೇ ಇದ್ದರು. 'ಇಂದ್ರಸೇನೆಯು' ಮುದ್ಗಲರೆಂಬ ಮುನಿಗಳನ್ನು ಮದುವೆಯಾದರು.

ಮುದ್ಗಲರು ಮಹಾತಪಸ್ವಿಗಳು, ಶ್ರೇಷ್ಠ ಋಷಿಗಳೂ ಕೂಡ. ಒಂದು ಸಲ ಕಥಾಶ್ರವಣದ ಕಾಲಕ್ಕೆ 'ಬ್ರಹ್ಮನು ಮಗಳನ್ನು ಕಾಮಿಸಿದನು' ಎಂಬುದನ್ನು ಕೇಳಿದರು. ಬ್ರಹ್ಮನನ್ನು ಕೀಳು ಭಾವನೆಯಿಂದ ಕಂಡರೂ, ನಕ್ಕರೂ ಕೂಡ. ಇದನ್ನು ತಿಳಿದ ಬ್ರಹ್ಮನು ಹೇ ಮುನಿಯೇ ನಾನು ಕಾಮಿಯಲ್ಲ ಎಂಬ ಅಹಂಕಾರ ನಿನಗಿದೆ. ಅಲ್ಲದೆ ನನ್ನನ್ನು ಗೌಣವಾಗಿ ಕಂಡಿದ್ದಿ. ನಿನಗೆ ನರಕಾದಿ ಅನರ್ಥಗಳು ಆಗಬೇಕಾಗಿದೆ. ಅದಕ್ಕಾಗಿ ಭಾರತಿ ಮೊದಲ್ಗೊಂಡು ಐದು ದೇವತೆಗಳ ಕೂಡಿಕೊಂಡ, ಇಂದ್ರಸೇನಾ ರೂಪದಲ್ಲಿರುವ ಕನ್ಯೆಯನ್ನು ಉಪಭೋಗಿಸು ಎಂದು ಹೇಳಿದರು.

ಇದನ್ನು ಕೇಳಿದ ಮುನಿಯು ನೊಂದನು. ಪಶ್ಚಾತ್ತಾಪದಿಂದ ಬೆಂದನು. ಗಾಬರಿಯಾಗಿ ಉದ್ಧಾರಕ್ಕಾಗಿ ಪುನಃ ಪ್ರಾರ್ಥಿಸಿಕೊಂಡನು. ದಯಾಳುವಾದ ಬ್ರಹ್ಮನು, ಎಲೈ ಮುನಿಯೆ ಭಯಪಡಬೇಡ. ವಾಯುದೇವರ ಹೊರತು ಭಾರತಿಯನ್ನು ಯಾರೂ ಮುಟ್ಟಲಾರರು. ವಾಯುದೇವರೇ ನಿನ್ನ ಶರೀರದಲ್ಲಿ ಪ್ರವೇಶಿಸಿ, ಆ ಕಾರ್ಯ ಮಾಡುತ್ತಾರೆ. ಆ ಸಮಯದಲ್ಲಿ ನೀನು ಮರಣಕ್ಕೆ ಸಮನಾದ ಮೂರ್ಛೆಯಲ್ಲಿರುವಿ. ನಿನಗೆ ಶಾಪ, ತಾಪ ಯಾವುದು ತಟ್ಟಲಾರದು ಎಂದು ಹೇಳಿದರು. ಅದೇ ಸಮಯಕ್ಕೆ ವಾಯುದೇವರು ಮುದ್ಗಲರ ಶರೀರದಲ್ಲಿ ಪ್ರವೇಶಿಸಿದರು. ಮುದ್ಗಲರ ಶರೀರ ಇಂದ್ರಸೇನೆಯನ್ನು ಮದುವೆ ಮಾಡಿಕೊಂಡಿತು. ವಾಯುದೇವರು ಬಹಳ ಕಾಲದವರೆಗೆ ಭಾರತಿದೇವಿಯರೊಂದಿಗೆ ಕಾಲ ಕಳೆದು ತಮ್ಮ ನಿಕೇತನಕ್ಕೆ ತೆರಳಿದರು. ಮುದ್ಗಲರಿಗೆ ಎಚ್ಚರವಾಯಿತು. ಅವರು ಆ ದೇಶವನ್ನೇ ಬಿಟ್ಟು ಬೇರೆಡೆ ನೆಲೆಸಿ ತಪಸ್ಸು ಮಾಡಹತ್ತಿದರು.

ಮುದ್ಗಲರ ನಿರ್ಗಮನದ ನಂತರ ಇಂದ್ರಸೇನೆಯು ಮೊದಲಿನಂತೆ ರುದ್ರಾಂತರ್ಗತ ಹರಿಯನ್ನು ಕುರಿತು ತಪಸ್ಸು ಮಾಡಹತ್ತಿದರು. ಶ್ರೀಹರಿಯು ಪ್ರತ್ಯಕ್ಷನಾದನು. ಐದುಜನ ಸ್ತ್ರೀಯರು ತಮ್ಮ ತಮ್ಮ ಪತಿಗಳಿಗಾಗಿ ಪ್ರತ್ಯೇಕ ಪ್ರಾರ್ಥನೆಗೈದರು. ದೇಹ ಒಂದೇ ಇದ್ದ ಕಾರಣ 'ಐದು ಸಲ' ಕೇಳಿದಂತಾಯಿತು. ಅವರ ಪ್ರಾರ್ಥನೆಗೆ ಶ್ರೀಹರಿ 'ತಥಾಸ್ತು' ಎಂದನು. ಅಂದರೆ ಶ್ರೀಹರಿಯು 'ಐದುಜನ ಸ್ತ್ರೀಯರಿಗೆ ಐದು ಜನ ಪತಿಗಳು' ಎಂದು ಹೇಳಿದಂತಾಯಿತು.

ಇದನ್ನು ಕೇಳಿದ ಸ್ತ್ರೀಯರು (ಅಜ್ಞಾನದಿಂದ) ತಾವು ಒಂದೇ ದೇಹದಲ್ಲಿದ್ದೇವೆ ಎಂಬುದನ್ನು ಮರೆತರು. ಒಬ್ಬೊಬ್ಬರಿಗೆ 'ಐದು ಜನ ಪತಿಗಳು' ಎಂದು ಭಾವಿಸಿ ರೋದಿಸ ಹತ್ತಿದರು. ಅದೇ ಸಮಯಕ್ಕೆ ದೇವೇಂದ್ರನು ಅಲ್ಲಿಗೆ ಬಂದು ರೋದಿಸುವ ಕಾರಣವನ್ನು ಕೇಳಿದನು. ಅದಕ್ಕೆ ಆ ಸ್ತ್ರೀಯರು, ವಟುರೂಪನಾದ ಶಿವನನ್ನು ತೋರಿಸಿ, "ಈತನು ನಮಗೆ ಐದು ಜನ ಪತಿಗಳಾಗಲಿ" ಎಂದು ವರವಿತ್ತಿದ್ದಾನೆ ಎಂದು ಹೇಳಿದರು. ವಟುವಿನ ನಿಜವನ್ನು ಅರಿಯದ ದೇವೇಂದ್ರನು ಅಹಂಕಾರದಿಂದ, ನನ್ನ ಲೋಕದಲ್ಲಿ ಈ ನಿರಪರಾಧಿಗಳಾದ ಸ್ತ್ರೀಯರಿಗೆ 'ಏಕೆ ಶಾಪವಿತ್ತೆ?' ಎಂದು ಗರ್ಜಿಸಿದನು. ಅದಕ್ಕೆ ಶಿವನು, ನೀನು ಸ್ವರ್ಗದಿಂದ ಪತಿತನಾಗು, ಭೂಲೋಕದಲ್ಲಿ ಮಾನವನಾಗು, ಇವಳಿಗೆ ನೀನೇ ಗಂಡನಾಗು" ಎಂದು ಶಪಿಸಿದನು. ಇದರ ಪರಿಣಾಮವಾಗಿಯೇ ದ್ರೌಪದಿಯು ಅರ್ಜುನನಿಗೆಯೇ ಮೊದಲು ಮಾಲೆ ಹಾಕಿದ್ದಾಳೆ.

**ವಿ. ವಿ. :** ಈ ಪ್ರಕರಣ ಓದುವಾಗ ಓದುಗರು ಬಣ್ಣದ ಕನ್ನಡಕವನ್ನು ತೆಗೆದು, ಪೂರ್ವಗ್ರಹಪೀಡಿತ ಮನೋಭಾವವನ್ನು ತ್ಯಜಿಸಿ ಓದಿದಾಗ ಸರಿಯಾದ ಚಿತ್ರ ಕಣ್ಣಿಗೆ ಕಟ್ಟಬಹುದು. ಆಗಲೂ ಕಣ್ಣಿನಲ್ಲಿ ಪರೆ ಇತ್ಯಾದಿ ದೋಷಗಳಿದ್ದಲ್ಲಿ ಶಸ್ತ್ರ ಚಿಕಿತ್ಸೆ (Operation) ಅಗತ್ಯವಾಗುವುದು. ಅಂದರೆ ಮೊದಲ ಎರಡು ದೋಷಗಳು ಸಚ್ಛಾಸ್ತ್ರಶ್ರವಣ ಮತ್ತು ಸಾಧನಗಳಿಂದ ಹೋಗಲು ಸಾಧ್ಯ. ಮೂರನೆಯದು 'ಮಿಥ್ಯಾಜ್ಞಾನ' ಅದು ಅಳಿಯಬೇಕಾದರೆ ಯೋಗ್ಯ ಗುರುಗಳಿಂದಲೇ ಸಾಧ್ಯ. ಅಂತಹ ಪ್ರಸಂಗವು ಯಾರಿಗೂ ಬಾರದಿರಲಿ ಎಂಬುದೇ ಲೇಖಕನ ಪ್ರಾರ್ಥನೆ.

ಪಾಂಚಾಲಿ ರಾಜನು, ಗಂಡು, ಮತ್ತು ಹೆಣ್ಣು ಇಬ್ಬರು ಮಕ್ಕಳನ್ನು ಕಂಡು ಬಹು ಆನಂದಿಸಿದನು. ಪ್ರಜೆಗಳಿಗೂ ಅಷ್ಟೇ ಸಂತೋಷವಾಯಿತು. ಆದರೆ ತಾಯಿಗೆ ಮಾತ್ರ ಮನದಲ್ಲಿ ಅಳುಕು ಉಳಿಯಿತು. ಕಾರಣ ಆಕೆ, "ಮಕ್ಕಳಿಗೆ ನನ್ನಲ್ಲಿ ತಾಯಿ ಭಾವನೆ ಮತ್ತು ಪ್ರೇಮ ಬೆಳೆಯುವಂತೆ" ಮಾಡಿರಿ ಎಂದು ವಿಪ್ರರನ್ನು ಕುರಿತು ಪ್ರಾರ್ಥಿಸಿದಳು. ಅದಕ್ಕೆ ಅವರು 'ತಥಾಸ್ತು' ಎಂದರು.

ಮುಂದೆ ದ್ರುಪದನ ಮಗನು ಶಸ್ತ್ರ ವಿದ್ಯೆಯ ಅಭ್ಯಾಸಕ್ಕಾಗಿ ದ್ರೋಣರ ಹತ್ತಿರ ಹೋದನು. "ನನ್ನನ್ನು ಕೊಲ್ಲುವುದಕ್ಕಾಗಿಯೇ ಇವನ ಜನ್ಮ ಆಗಿದೆ" ಎಂಬುದನ್ನು ದ್ರೋಣರು ಅರಿತಿದ್ದರು. ಆದರೂ ಏನೂ ಯೋಚಿಸಲಿಲ್ಲ. ಬದಲಾಗಿ ರಾಜಕುಮಾರನಿಗೆ ತಾವು ಗುರುಗಳಿಂದ ಪಡೆದ ದಿವ್ಯಾಸ್ತ್ರಗಳನ್ನು ಕಲಿಸಿದರು. (ದ್ರೋಣರನ್ನು ಟೀಕಿಸುವವರು ಈ ವಿಚಾರ ಗಮನಿಸಬೇಕೆಂದು ಲೇಖಕನ ವಿನಂತಿ.)

ದ್ರುಪದನೊಂದಿಗೆ ಹೋರಾಡಿ, ಪಾಂಡವರು ಗೆದ್ದು ಬಂದ ಸಮಾಚಾರ ಶ್ರೀಕೃಷ್ಣನಿಗೆ ತಿಳಿಯಿತು. ಪಾಂಡವರ ಕೀರ್ತಿ ಇನ್ನೂ ಬೆಳಗಲಿ, ಕೌರವರ – ಪಾಂಡವರ ಶಕ್ತಿ ಜಗತ್ತಿಗೆ ಗೊತ್ತಾಗಲಿ ಎನ್ನುವ ಉದ್ದೇಶದಿಂದ ಶ್ರೀಕೃಷ್ಣನು ಕೃತವರ್ಮನನ್ನು ಕಳಿಸಿ ಅವರಿಗೆ ಸತ್ಕರಿಸಿದನು.

ಪಾಂಡವರ ಬಲ ಮತ್ತು ಶ್ರೀಕೃಷ್ಣನ ಅನುಗ್ರಹ ತಿಳಿದ ನಂತರ ಅನೇಕ ರಾಜರು, ಜರಾಸಂಧನ ಪಕ್ಷವನ್ನು ತ್ಯಜಿಸಿ, ಪಾಂಡವರ ಪಕ್ಷವನ್ನು ಸೇರಿದರು. ಅನೇಕ ರಾಜರು ದೈವೀಸ್ವಭಾವದವರಾಗಿದ್ದರೂ, ಜರಾಸಂಧನ ಭಯ ಮತ್ತು ಬಲಕ್ಕೆ ಮಣಿದು ಆತನ ಅನುಯಾಯಿಗಳಾಗಿದ್ದರು. ಈಗ ಅವರು ನಿರ್ಭೀತರಾಗಿ ಪಾಂಡವರ ಪಕ್ಷ ವನ್ನು ಸೇರಿದರು. ಕೆಲವು ಆಸುರೀ ಪ್ರವೃತ್ತಿಯುಳ್ಳ ರಾಜರು ಜರಾಸಂಧನ ಪಕ್ಷ ದಲ್ಲಿಯೇ ಉಳಿದರು.

ಇದನ್ನು ತಿಳಿದ ಧೃತರಾಷ್ಟ್ರನು, ಧರ್ಮನಿಗೆ ಯುವರಾಜನನ್ನಾಗಿ ಮಾಡಿದನು. ಮುಂದೆ ಭೀಮಾರ್ಜುನ ಸುತ್ತಲಿನ ಅನೇಕ ದುಷ್ಟ ರಾಜರನ್ನು ಗೆದ್ದು, ಧೃತರಾಷ್ಟ್ರನಿಗೆ ಕಪ್ಪ ತಂದೊಪ್ಪಿಸುವಂತೆ ಮಾಡಿದರು. ರಾಜ್ಯವನ್ನು ವಿಸ್ತರಿಸಿದರು. ಎಂಬಲ್ಲಿಗೆ ಹದಿನೆಂಟನೆ? ಅಧ್ಯಾಯ ಮುಗಿದುದು.

॥ ಶ್ರೀಗುರುಭ್ಯೋನಮಃ ॥
॥ ಪರಮ ಗುರುಭ್ಯೋ ನಮಃ ॥
॥ ಶ್ರೀ ವೇದವ್ಯಾಸಾಯನಮಃ ॥

# ಅಧ್ಯಾಯ ಹತ್ತೊಂಭತ್ತು

**ಏವಂ ಶುಭೋಚ್ಚ ಗುಣವತ್ಸು ಜನಾರ್ದನೇನ ।**
**ಯುಕ್ತೇಷು ಪಾಂಡುಷು ಚರತ್ಸ್ವ ಧಿಕಂಶುಭಾನಿ ॥**
**ನಾಸ್ತಿಕ್ಯನೀತಿ ಮತುಲಾಂ ಗುರುದೇವತಾದಿ ।**
**ಸತ್ಸ್ವಂಜಸ್ಯೆವಜಗೃಹು ರ್ಧೃತರಾಷ್ಟ್ರ ಪುತ್ರಾಃ ॥೧॥**

ಪಾಂಡವರು, ಶ್ರೀಕೃಷ್ಣನ ಅನುಗ್ರಹದಿಂದ, ಭಕ್ತಿ, ಜ್ಞಾನ, ವೈರಾಗ್ಯ ಮುಂತಾದ ಒಳ್ಳೆಯ ಗುಣಗಳಿಂದ ಸಂಪನ್ನರಾಗಿ ದಿನ ದಿನಕ್ಕೆ ವೃದ್ಧಿ ಹೊಂದುತ್ತಿದ್ದರು.

ಅತ್ತ ಧೃತರಾಷ್ಟ್ರನ ಪುತ್ರರು, ದೇವತೆಗಳಿಗೂ, ಗುರುಗಳಿಗೂ ಒಪ್ಪದೇ ಇರತಕ್ಕ ನಾಸ್ತಿಕ್ಯವಾದವನ್ನು ಸ್ವೀಕರಿಸಿದರು. ಅದನ್ನೇ ಹೆಚ್ಚಾಗಿ ಬೆಳೆಸಲು ನಿಶ್ಚಯಿಸಿದರು.

**ನಾಸ್ತಿಕ್ಯ ನೀತಿಯ ಗುರುಗಳು**

**ನಾಮ್ನಾ ಕಲಿಂಗ ಇತಿ ಚಾಸುರಕೋದ್ವಿಜೋಽ ।**
**ಭೂಚ್ಛಿಷ್ಯಃ ಸುತೇ ರಗುರೋಃ ಶಕುನೇರ್ಗುರುಃ ಸಃ ॥**
**ನೀತಿಂ ಸಕುತ್ಸಿತತಮಾಂ ಧೃತರಾಷ್ಟ್ರೇ ಪುತ್ರೇ ।**
**ಷ್ವಾಧಾದ್ರಹೋ ವಚನತಃ ಶಕುನೇಃ ಸಮಸ್ತಾಮ್ ॥೨॥**

ಹಿಂದೆ ಇದ್ದ ಕಲಿಂಗನೆಂಬ ಅಸುರನೇ ಇಂದು ದ್ವಿಜನಾಗಿ ಹುಟ್ಟಿದ್ದಾನೆ. ಅವನು ಅಸುರರಿಗೆ ಗುರುವಾದ ಶುಕ್ರಾಚಾರ್ಯರ ಶಿಷ್ಯನು. ಅಂತಹ ಶಿಷ್ಯ ಇಂದು ಶಕುನಿಗೆ ಗುರುವಾಗಿದ್ದಾನೆ. ಆ ಶಕುನಿಯು ತಾನು ಕಲಿತ ವಿದ್ಯೆಯನ್ನು ಧೃತರಾಷ್ಟ್ರನ ಮಕ್ಕಳಿಗೆ ರಹಸ್ಯವಾಗಿ ಬೋಧಿಸ ಹತ್ತಿದ್ದಾನೆ.

**(ಕಲಿಂಗ ಅಥವಾ ಕಣಿಕನ ನೀತಿ)**

**ವಧ್ಯೈ ವಯತ್ರ ಪರಮಂ ನಸುರಾಶ್ಚಪೂಜ್ಯಾಃ ।**
**ಸ್ವಾರ್ಥೇನ ವಂಚನಕೃತೇ ಜಗತೋ ಖಲಂ ಚ ॥**
**ಧರ್ಮಾದಿ ಕಾರ್ಯಮಪಿಯುಶ್ಚ ಮಹೋಪಧಿಃ ಸ್ಯಾತ್ ।**
**ಶ್ರೇಷ್ಠಃ ಸ ಏವ ನಿಖಿಲಾಸುರದೈತ್ಯ ಸಂಘಾತ್ ॥೩॥**

ಯಾವ ಶಾಸ್ತ್ರದಲ್ಲಿ ವಂಚನೆಯೇ ಅಧಿಕವಾಗಿದೆಯೋ? ಎಲ್ಲಿ ದೇವತೆಗಳಿಗೆ ಗೌರವ ಆದರಗಳಿಲ್ಲವೋ? ಸ್ವಾರ್ಥ ಮತ್ತು ವಂಚನೆಗಳಿಗೆ ಜಗತ್ತಿನಲ್ಲಿ ಹೆಚ್ಚಿನ

ಸ್ಥಾನವಿದೆಯೋ? ಧಾರ್ಮಿಕ ಕಾರ್ಯಗಳು ತೋರಿಕೆಗಾಗಿದ್ದು, ಪ್ರತಿಷ್ಠೆ ಮತ್ತು ಡಂಭಾಚಾರ ವಾಗಿರುತ್ತವೋ? ಅಂಥವುಗಳನ್ನು ಅಭ್ಯಸಿಸುವವನು ಎಲ್ಲ ದೈತ್ಯ ಸಂಘಗಳಿಗೆ ಅವನೇ ಶ್ರೇಷ್ಠನಾಗಿ ಇರುತ್ತಾನೆ.

**ಇತ್ಯಾದಿ ಕುತ್ಸಿತತಮಾಂಶ್ಚ ಜಗೃಹುಃ ಸ್ವವಿದ್ಯಾಮ- ।**
**ಜ್ಞಾತಏವ ಧೃತರಾಷ್ಟ್ರಮುಖ್ಯೈಃ ಸಮಸ್ತೈಃ ॥**
**ತೇಷಾಂ ಸ್ವಭಾವ ಬಲತೋ ರುಚಿತಾಶ್ಚ ಸೈವ ।**
**ವಿಸ್ತಾರಿತಾಶ್ಚ ನಿಜಬುದ್ಧಿ ಬಲಾದತೋಽಪಿ ॥೪॥**

ಹಿಂದೆ ಹೇಳಿದ ಎಲ್ಲ ರೀತಿಯ ಕುತ್ಸಿತ ನೀತಿಯ ವಿದ್ಯೆಯನ್ನು ಧೃತರಾಷ್ಟ್ರನ ಮಕ್ಕಳೆಲ್ಲರೂ ಗೌಪ್ಯವಾಗಿಯೇ ಅರಿತುಕೊಂಡರು. ಅದು ಅವರ ಸ್ವಭಾವಕ್ಕನುಗುಣವಾಗಿ ರುಚಿಕರವೂ ಆಯಿತು. ಅದನ್ನೇ ಅವರು ಸ್ವಬುದ್ಧಿಬಲದಿಂದ ಗುರುಗಳು ಹೇಳಿದ್ದನ್ನು ವಿಸ್ತರಿಸಿಕೊಂಡರು.

**ಸಂಪೂರ್ಣದುರ್ಮತಿರಥೋ ಧೃತರಾಷ್ಟ್ರಸೂನು ।**
**ಸ್ತಾ ತಪ್ಯಮಾನ ಹೃದಯೋ ನಿಖಿಲಾನ್ಯ ಪಾನಿ ॥**
**ದೃಷ್ಟ್ವಾ ಶ್ರೀಯಂ ಪರಮಿಕಾಂ ವಿಜಯಂ ಚಪಾರ್ಥೇ ।**
**ಪ್ರಾಹೇದಮೇತ್ಯ ಪಿತರಂ ಸಹಸೌ ಬಲೇನ ॥೫॥**

ಇಂಥ ವಿದ್ಯೆಯನ್ನು ಕಲಿತ ನಂತರ, ಧೃತರಾಷ್ಟ್ರನ ಮಗ ದುರ್ಯೋಧನನು, ಪಾಂಡವರ ಸಂಪತ್ತು ಜಯ ಮತ್ತು ಉತ್ತಮವಾದ ಧಾರ್ಮಿಕ ಭಾವನೆಗಳನ್ನು ಕಂಡು ಮನದಲ್ಲಿ ಸಂತಾಪಗೊಂಡನು. ಶಕುನಿಯನ್ನು ಕೂಡಿಕೊಂಡು ಧೃತರಾಷ್ಟ್ರನ ಹತ್ತಿರ ಬಂದು ಹೀಗೆ ಹೇಳಿದನು.

**ಜ್ಯೇಷ್ಠಸ್ಯತೇಽಪಿಹಿವಯಂ ಹೃದಯ ಪ್ರಜಾತಾ ।**
**ನಾರ್ಹತ್ವಮೇವ ಗಮಿತಾ ಭವತ್ಯೈವ ರಾಜ್ಯೇ ॥**
**ಭ್ರಾತುಃ ಕನೀಯಸ ಉತಾಪಾಹಿ ದಾರಜಾತಾ ।**
**ಅನ್ಯೈ ಸ್ತ್ವ ರಾಜ್ಯಪದವೀಂ ಭವತ್ಯೈವನೀತಾಃ ॥೬॥**

ನಾವು, ಹಿರಿಯನಾದ ನಿನ್ನ ಹೊಟ್ಟೆಯಿಂದ ಹುಟ್ಟಿದವರು. ಔರಸ ಪುತ್ರರು. ಇಷ್ಟಿದ್ದು ರಾಜ್ಯದಲ್ಲಿ ನಮಗೆ ಅರ್ಹತೆ ದೊರೆಯಲಿಲ್ಲ. ಕನಿಷ್ಠನಾದ ತಮ್ಮ, ಪಾಂಡುರಾಜ ಆತನ ಹೆಂಡತಿ ಕುಂತಿಯಲ್ಲಿ ಅನ್ಯರಿಂದ ಹುಟ್ಟಿದ ಮಕ್ಕಳಿಗೆ ನಿನ್ನಿಂದಲೇ ರಾಜ್ಯದಲ್ಲಿ ಅಧಿಕಾರ ದೊರೆಯಿತು.

**ರಾಜ್ಯಂ ಮಹಚ್ಚ ಸಮವಾಪ್ಸ್ಯತಿ ಧರ್ಮಸೂನು ।**
**ಸ್ತ್ವತ್ತೋಽಥವಾನುಜ ಬಲಾತ್ಪ್ರಸಭಂ ವಯಂತು ॥**
**ದಾಸಾ ಭವೇಮನಿಜಪಂತುಭಿ ರೇವಸಾಕಂ ಕುಂತೀಸು ತಸ್ಯ ।**
**ಪರತೋಽಪಿ ತದನ್ವಯಸ್ಯ ॥೭॥**

ನಿನ್ನ ಅನುಗ್ರಹ ಬಲದಿಂದ, ಅಥವಾ ತಮ್ಮಂದಿರ ಬಾಹುಬಲದಿಂದ, ಧರ್ಮರಾಜನು, ಬಲತ್ಕಾರದಿಂದ ಸಮಸ್ತ ರಾಜ್ಯವನ್ನು ಪಡೆಯುತ್ತಾನೆ. (ರಾಜ್ಯಕ್ಕೆ ಅಧಿಕಾರಿಯಾಗುತ್ತಾನೆ) ಆಗ ನಾನು ನನ್ನ ಮಕ್ಕಳು ಎಲ್ಲರು ಧರ್ಮರಾಜನ ದಾಸರಾಗ ಬೇಕಾಗುತ್ತದೆ. ಅಷ್ಟೇ ಅಲ್ಲ ಮುಂದೆ ನಮ್ಮ ಸಂತಾನವು ಕುಂತೀ ಪುತ್ರರ ಸಂತಾನಕ್ಕೆ ಪರಂಪರೆಯಾಗಿ ದಾಸರಾಗಬೇಕಾಗುತ್ತದೆ.

**ನಾತ್ಮಾರ್ಥಮಸ್ತಿಮಮ ದುಃಖಮಥಾತಿಶುದ್ಧ ।**
**ಲೋಕಪ್ರಸಿದ್ಧ ಯಶಸಸ್ತವ ಕೀರ್ತಿ ನಾಶಃ ॥**
**ಅಸ್ಮಿನ್ನಿಯತ್ತಮತಿ ದುಃಖಿತೋಽಪಿ ಸರ್ವೇಽ ।**
**ಪೇಟ್ಯಾಮಮರ್ತುಮಥನಃ ಕುರು ಚಾಪ್ಯನುಜ್ಞಾಮ್ ॥೮॥**

ನನ್ನ ಸ್ವಾರ್ಥಕ್ಕಾಗಿ, ರಾಜ್ಯದ ಆಶೆಗಾಗಿ ನನಗೆ ದುಃಖವಿಲ್ಲ. ಆದರೆ ನಿನ್ನ ಲೋಕಪ್ರಸಿದ್ಧಿ ಮತ್ತು ಶುದ್ಧ ಕೀರ್ತಿ ನಾಶವಾಗುವುದಲ್ಲ! ಎಂದು ಆ ಕಾರಣಕ್ಕಾಗಿ ನಮಗೆ ದುಃಖವಾಗಿದೆ. ತಂದೆಯ ಕೀರ್ತಿ ನಾಶ ಕೇಳಿ, ಮಕ್ಕಳು ಬದುಕುವುದು ಅಸಾಧ್ಯ. ಅದಕ್ಕಾಗಿ ನಿನ್ನ ಅಪ್ಪಣೆ ಪಡೆದು ಸಾಯಲು ಸಿದ್ಧರಾಗಿದ್ದೇವೆ. ಕಾರಣ ನೀನು ಅಪ್ಪಣೆಯನ್ನು ಕೊಡು.

**ವಿ. ವಿ. :** ಕಳಿಂಗನ ನೀತಿಯ ಮೊದಲ ಸೂತ್ರ – **ಸ್ವಾರ್ಥವಿದ್ದು ಅದನ್ನು ತೋರಗೊಡಬಾರದು. ಬಹಿರಂಗದಲ್ಲಿ ಇತರರ ಕೀರ್ತಿಯನ್ನು ಬಯಸಿದಂತೆ ಕಂಡಿರಬೇಕು.** (ಪರೋಪಕಾರದ ಸೋಗು)

**ಏವಂ ಸ್ವಪುತ್ರವಚನಂ ಸನಿಶಮ್ಯ ರಾಜಾ ।**
**ಪ್ರೋವಾಚನಾನುಗುಣ ಮೇತದಹೋಮನಸ್ತೇ ॥**
**ಕೋ ನಾಮ ಪಾಂಡುತನಯೇಷು ಗುಣೋತ್ತಮೇಷು ।**
**ಪ್ರೀತಿಂ ನಯಾತಿ ನಿಜವೀರ್ಯ ಭವೋಚ್ಛ್ರಯೇಷು ॥೯॥**

ಮಗನ ಈ ರೀತಿಯ ಮಾತುಗಳನ್ನು ಕೇಳಿದ ರಾಜನು, "ನಿನಗೆ ಈ ಗುಣವು ಶ್ರೇಯಸ್ಕರವಲ್ಲ. ಪಾಂಡವರು ಸ್ವವೀರ್ಯದಿಂದ ರಾಜ್ಯವನ್ನು ಸಂಪಾದಿಸಿದ್ದಾರೆ. ಉತ್ತಮ ಗುಣಗಳನ್ನು ಹೊಂದಿದವರೂ ಆಗಿದ್ದಾರೆ. ಉತ್ಕರ್ಷೆಯನ್ನು ಪಡೆದಿದ್ದಾರೆ. ಇಂಥವರನ್ನು ಕಂಡು ಯಾರು ಸಂತೋಷ ಪಡಲಿಕ್ಕಿಲ್ಲ? ಪ್ರೀತಿಸಲಿಕ್ಕಿಲ್ಲ?" ಎಂದು ಹೇಳಿದನು.

**ತೇಽಪಿ ಸ್ವಭಾವ ಬಲತೋಽಬಲ ಭೂಪ ಭೂತಿಂ ।**
**ಮಯ್ಯಾಕೃಷಂತಿ ನಚವಃ ಪ್ರತಿಷೇಧಕಾಸ್ತೇ ॥**
**ತಸ್ಮಾಚ್ಛಮಂ ವ್ರಜಶುಭಾಯ ಕುಲಸ್ಯ ತಾತ ।**
**ಕ್ಷೇಮಾಯನೋ ಭವತಿ ಪೋ ಬಲವದ್ವಿರೋಧಃ ॥೧೦॥**

ಆ ಪಾಂಡವರು ಸ್ವಪರಾಕ್ರಮದಿಂದ ಎಲ್ಲ ರಾಜರನ್ನು ಗೆದ್ದು, ಅದನ್ನು ತಂದು ನನಗೆ ಸಮರ್ಪಿಸಿದ್ದಾರೆ, ಮೇಲಾಗಿ ಅವರು ನಿನಗೆ ವಿರೋಧಿಗಳು ಅಲ್ಲವೇ ಅಲ್ಲ

ಹೇ ಮಗನೇ! ವಂಶದ ಕ್ಷೇಮಕ್ಕಾಗಿಯಾದರೂ ನೀನು ಶಾಂತನಾಗು. ಅಲ್ಲದೇ ಬಲಿಷ್ಠರ ಕೂಡ ವಿರೋಧ ನಿನಗೆ ಮಂಗಲಕರ ಅಲ್ಲ.

**ಏವಂ ಬ್ರುವತ್ಯಪಿನೃಪೇ ಪುನರಾಹ ಪಾಪ ।**
**ಆಶ್ರಿತ್ಯಸೌಬಲಮತಂ ಯದಿನೈವ ಪಾರ್ಥಾನ್ ॥**
**ಅನ್ಯತ್ರ ಯಾಪಯಸಿ ನಾಗಪುರಾತ್ಪರೇತಾನ್ ।**
**ದೃಷ್ಟ್ವಾಖಿಲಾನಪಿಹಿನೋ ಮುದಮೇಹಿ ಪಾರ್ಥೈಃ ॥೧೧॥**

ಧೃತರಾಷ್ಟ್ರನು ಮೇಲಿನಂತೆ ಬುದ್ಧಿವಾದವನ್ನು ಹೇಳಿದರೂ, ಆ ಪಾಪಿಯಾದ ದುರ್ಯೋಧನನು, ಶಕುನಿಯ ಮಾತಿನಲ್ಲಿಯೇ ಬಲವಾದ ವಿಶ್ವಾಸವನ್ನಿಟ್ಟು, ತಂದೆಯನ್ನು ಕುರಿತು, ಪಾಂಡವರನ್ನು ಯಾವುದೇ ಉಪಾಯದಿಂದ ಹಸ್ತಿನಾಪುರದಿಂದ ಹೊರ ಹಾಕದಿದ್ದರೆ, ನಮ್ಮೆಲ್ಲರನ್ನೂ ಪರಲೋಕದಲ್ಲಿಯೇ ಕಾಣುವಿ (ನಾವು ಸಾಯುವುದು ನಿಶ್ಚಿತ) ಆಗ ನೀನು ಪಾಂಡವರೊಡನೆ ಸಂತೋಷದಿಂದ ಸುಖವಾಗಿರು.

**ಏವಂ ನಿಶಮ್ಯಗದಿತಂ ಸುತಹಾರ್ದ ಪಾಶೈರಾಕೃಷ್ಯ ।**
**ತಾಶುಸನೃಪೋಽರಿಧರೇಚ್ಛಯೈವ ॥**
**ಪ್ರೋವಾಚ ಪುತ್ರಮಪಿ ತೇ ಬಲಿನೋಹಿ ಪಾರ್ಥಾಃ ।**
**ಶಕ್ಯಾಃ ಪುರಾತ್ತುನಚಯಾಪಯಿತುಂ ಕಥಂ ಚಿತ್ ॥೧೨॥**

(ಇದುವರೆಗೆ ಧೃತರಾಷ್ಟ್ರನು ನಿಜ ಸ್ವರೂಪದಲ್ಲಿದ್ದನು. ಈಗ ಆತನಲ್ಲಿ ಕಲಿ ಪ್ರವೇಶವಾಗಿದೆ. ಜೊತೆಯಲ್ಲಿ ಶ್ರೀಹರಿಯ ಇಚ್ಛೆಯೂ ಕೂಡಿದೆ.)

ಮಗನ ಇಂಗಿತವನ್ನು ಅರಿತ ಧೃತರಾಷ್ಟ್ರನು, ಮಗನ ಮೋಹ ಮತ್ತು ಶ್ರೀಹರಿಯ ಇಚ್ಛೆಗೊಳಗಾಗಿ, ಸುತನ ಸ್ನೇಹ ಪಾಶಕ್ಕೆ ಒಳಗಾದನು. ಆದರೂ "ಪಾಂಡವರು ಬಲಿಷ್ಠರು. ಅವರನ್ನು ಹಸ್ತಿನಾವತಿಯಿಂದ ಯಾವ ರೀತಿಯಿಂದಲೂ ಹೊರ ಹಾಕುವುದು ಸಾಧ್ಯವಾಗಲಾರದು" ಎಂದು ಹೇಳಿದನು.

**ಇತ್ಯುಕ್ತ ಆಹಪಿತರಂ ಶಕುನಿಂ ನಿರೀಕ್ಷ್ಯ ।**
**ಸೃಷ್ಟೋಽಮಯಾವಿಧಿರಿಹಾದ್ಯ ಶೃಣುಷ್ವತಂ ಚ ॥**
**ಆಸಂಸ್ತ್ರಯೋದಶಸಮಾ ನಗರಂ ಪ್ರವಿಷ್ಟೇ ।**
**ಷ್ವೇತೇಷು ತಾವದಯಮೇವ ವಿಧಿರ್ಮಯೇಷ್ಟಃ ॥೧೩॥**

ತಂದೆಯೆ ಈ ಪ್ರಕಾರದ ಮಾತುಗಳನ್ನು ಕೇಳಿದ ದುರ್ಯೋಧನನು, ಶಕುನಿಯ ಕಡೆಗೆ ನೋಡುತ್ತ ಹೀಗೆ ಹೇಳಲಾರಂಭಿಸಿದನು. ಈ ಪಾಂಡವರು ಹಸ್ತಿನಾವತಿಯನ್ನು ಪ್ರವೇಶಿಸಿ, ಹದಿಮೂರು ವರ್ಷಗಳು ಆದವು. ಅಂದಿನಿಂದಲೇ ಇವರನ್ನು ಹೊರ ಹಾಕುವ ಉಪಾಯಗಳನ್ನು ನಾನು ಸಿದ್ಧಪಡಿಸಿದ್ದೇನೆ. ಅವುಗಳನ್ನು ಕೇಳು ಎಂದು ತಂದೆಗೆ ವಿವರಿಸಿದನು.

**ದ್ರೌಣೇರ್ಹಿನಾಸ್ತಿ ಸದೃಶೋ ಬಲವಾನ್ಕೃತಾಪೀ ।**
**ಸೋಽಯೇಂಮಯಾ ಬಹುವಿದ್ಯೈಃ ಪರಮೈರುಪಾಯ್ಯೈಃ ॥**
**ನೀತೋವಶಂ ವಶಗತೋಽಸ್ಯಚ ಮಾತುಲೇನ ।**
**ಸಾಕಂ ಪಿತಾತಮನುಚೈಷನದೀ ಪ್ರಸೂತಃ ॥೧೪॥**

ಅಶ್ವತ್ಥಾಮರಿಗೆ ಸಮನಾದ ಬಲಶಾಲಿಗಳು, ಪರಾಕ್ರಮಿಗಳು ಮತ್ತಾರೂ ಇಲ್ಲ. ಅಂಥಾತನನ್ನು ನಾನು ಬಹು ವಿಧದಿಂದ ಶ್ರೇಷ್ಠ ಉಪಾಯಗಳಿಂದ ನನ್ನ ವಶಮಾಡಿ ಕೊಂಡಿದ್ದೇನೆ. ಆತನ ತಂದೆಯಾದ ದ್ರೋಣರು, ಸೋದರ ಮಾವನಾದ ಕೃಪಾಚಾರ್ಯರೂ ಅವರೂ ನನ್ನ ಅಧೀನರಾಗಿದ್ದಾರೆ. ಅಷ್ಟೇ ಅಲ್ಲ, ಗಂಗಾಪುತ್ರರಾದ ಭೀಷ್ಮರೂ ನನ್ನನ್ನು ಅನುಸರಿಸುತ್ತಾರೆ ಎಂದು ವಿವರಿಸಿದನು.

**ಏವಂ ಹಿ ಸೈನಿಕಗಣಾ ಅಪಿದಾನ ಮಾನ್ಯೈಃ ।**
**ಪ್ರಾಯೋವಶಂ ಮಮಗತಾ ಅಪಿಚೈಷ ಕರ್ಣಃ ॥**
**ಅಸ್ತ್ರೇಬಲೇಽಪ್ಯಧಿಕ ಏವ ಸುರೇಂದ್ರ ಸಲಾನೋ ।**
**ರ್ಜೇಷ್ಯೇಚ ಮಂತ್ರಬಲಸ್ತ್ವಹಮೇವ ಭೀಮಮ್ ॥೧೫॥**

ಇದಲ್ಲದೆ ಸೈನಿಕರಿಗೆ ದಾನ ಮಾನಾದಿಗಳನ್ನಿತ್ತು ಅನೇಕರನ್ನು ನನ್ನ ವಶಕ್ಕೆ ತೆಗೆದುಕೊಂಡಿದ್ದೇನೆ. ಕರ್ಣನು ಬಲ ಮತ್ತು ವಿದ್ಯೆಗಳಿಂದ ಅರ್ಜುನನನ್ನು ಗೆಲ್ಲಲು ಸಮರ್ಥನಾಗಿದ್ದಾನೆ. ಅಷ್ಟೇ ಅಲ್ಲ ಅವನನ್ನು ಕೊಲ್ಲುವಂತಹ ಮಂತ್ರಗಳನ್ನೂ ಕಲಿತಿದ್ದಾನೆ. ನಾನೊಬ್ಬನೇ ಭೀಮನನ್ನು ಗೆಲ್ಲಬಲ್ಲೆನು. ನಾನೂ ಅಂತಹ ಮಂತ್ರಗಳನ್ನು ಕಲಿತಿದ್ದೇನೆ.

**ತ್ರಿಂಶಚ್ಛತಂ ಪರಮಕಾಃ ಸುರದುರ್ಲಭಾಶ್ಚ ।**
**ದುರ್ವಾಸ ಸೋಹಿ ಮನವೋಽದ್ಯ ಮಯಾ ಗೃಹೀತಾಃ ॥**
**ಅನ್ಯತ್ರತೇ ಪ್ರವಿಹಿತಾ ನಹಿವೀರ್ಯವಂತಃ ಸ್ಯುರ್ಭೀಮ ।**
**ಇತ್ಯಹಮ ಮೂನ್ನ ನಿಯೋಜಯಾ ಮಿ ॥೧೬॥**

ದೇವತೆಗಳಿಗೂ ದುರ್ಲಭವಾದ, ಮಹಾಶ್ರೇಷ್ಠ, ಮೂರುಸಾವಿರ ಮಂತ್ರಗಳನ್ನು ದುರ್ವಾಸರಿಂದ ನಾನು ಗ್ರಹಿಸಿದ್ದೇನೆ. ಒಮ್ಮೆ ಅವುಗಳನ್ನು ಬಳಸಿದರೆ, ಅವು ಭೀಮನ ಮೇಲೆ ಹೆಚ್ಚು ಪ್ರಭಾವಕಾರಿಯಾಗಿ ಕೆಲಸ ಮಾಡಲಾರವು. ಕಾರಣ ಆ ಮಂತ್ರಗಳನ್ನು ನಾನು ಬೇರೊಂದೆಡೆ ಬಳಸಿಯೇ ಇಲ್ಲ. (ಅವು ಕೇವಲ ಭೀಮನಿಗಾಗಿ ಮೀಸಲಾಗಿದೆ.)

### ಆ ಮಂತ್ರಗಳ ಸಾಮರ್ಥ್ಯ

**ತೇವೀರ್ಯದಾ ವಿಜಯದಾ ಅಪಿ ವಹ್ನಿವಾರಿಸ್ತಂಭಾದಿದಾಃ ।**
**ಸಕಲದೇವ ನಿಕಾಯರೋಧಾಃ ॥**
**ವೃಷ್ಟ್ಯಾದ್ಯಭೀಪ್ಸಿತ ಸಮಸ್ತಕರಾ ಅಮೂಭಿರ್ಜೇಷ್ಯಾಮಿ ।**
**ಭೀಮಮಮು ಮೇಕ ಮಯಾತಯಾಮ್ಯೈಃ ॥೧೭॥**

ಆ ಮಂತ್ರಗಳು ಮಹಾವೀರ್ಯವತ್ತಾದವುಗಳು. ಗೆಲುವನ್ನು ತಂದುಕೊಡ ಬಲ್ಲವು. ಬೆಂಕಿಯಲ್ಲಿ, ನೀರಿನಲ್ಲಿ ಸ್ತಂಭನ ಮಾಡಬಹುದು. (ಬೆಂಕಿ, ನೀರುಗಳ ಪರಿಣಾಮವಾಗಲಾರದು) ಸಕಲ ದೇವತೆಗಳನ್ನು ನಿರೋಧಿಸುವ ಶಕ್ತಿ ಅವುಗಳಿಗುಂಟು. ಮಳೆ ಮೊದಲಾದ ಸಕಲ ಅಭೀಕ್ಷೆಗಳನ್ನು ಪೂರೈಸಬಲ್ಲವು. ಅವುಗಳ ಸಾಮರ್ಥ್ಯ ಕುಂದ ಬಾರದೆಂದು ದಿನಾಲು ಜಪಿಸುತ್ತೇನೆ. ಇವುಗಳಿಂದ ಆ ಭೀಮನೊಬ್ಬನನ್ನೇ ಗೆಲ್ಲುವುದು ನನ್ನ ಗುರಿಯಾಗಿದೆ.

**ಸೌಹಾರ್ದಮೇಷುಯೆದಿವಾತಿತರಾಂ ಕರೋಷಿ ।**
**ತತ್ರಪಿನ್ನೈವಹಿ ಮಯಾಕ್ರಿಯೆತೇ ವಿರೋಧಃ ॥**
**ವತ್ಸ್ಯಂತು ವಾರಣವತೇ ಭವತುಸ್ಮ ರಾಷ್ಟ್ರಂ ।**
**ತೇಷಾಂ ತದೇವಮಮ ನಾಗಪುರಂ ತ್ವದರ್ಥೇ ॥೧೮॥**

ಸೌಹಾರ್ದದಿಂದ ನೀನು ಪಾಂಡವರ ಜೊತೆಯಲ್ಲಿ ಇರಬೇಕೆಂದರೆ, ಅದಕ್ಕೆ ನನ್ನ ವಿರೋಧವಿಲ್ಲ. ಅವರು ವಾರಣವತ ನಗರದಲ್ಲಿ ವಾಸಮಾಡಲಿ. ಆ ಪ್ರಾಂತವೇ ಅವರಿಗೆ ರಾಜ್ಯವಾಗಲಿ. ನಿನ್ನ ಮಾತಿಗೆ ಒಪ್ಪುತ್ತೇನೆ. ಆದರೆ ನಾನು ನಿನ್ನ ಮಗನಾದ ಕಾರಣ ನನಗೆ ಹಸ್ತಿನಾವತಿಯೇ ರಾಜಧಾನಿಯಾಗಬೇಕು.

**ವಿ. ವಿ. :** ವಾರಣವತ ಆ ಕಾಲದಲ್ಲಿ, ಕಾಡು ಪ್ರದೇಶ. ಬಂಜರು ಭೂಮಿ. ಇದರಲ್ಲಿ ದುರ್ಯೋಧನನ ಉದಾರ ಬುದ್ಧಿ ವ್ಯಕ್ತವಾಗುವುದಲ್ಲವೇ?

**ಏವಂ ಸ್ವಪುತ್ರ ಪರಿಪಾಲನತೋಯಶಸ್ತೇ ಭೂಯಾ ।**
**ದ್ವಿನಶ್ಯತಿ ಪರ ಪ್ರಸವಾತಿ ಪುಷ್ಟ್ಯಾ ॥**
**ಜಾತೇ ಬಲೇತವ ವಿರೋಧ ಕೃತಶ್ಚತೇ ಸ್ಯುಃ ।**
**ಸ್ವಾರ್ಥಂ ಹಿತಾವದನುಯಾಂತ್ಯಪಿ ಕೇವಲಂ ತ್ವಾಮ ॥೧೯॥**

ಈ ರೀತಿಯಿಂದ ಹೇಳುತ್ತ, ನಿನ್ನ ಮಕ್ಕಳ ಹಿತ ಮತ್ತು ರಕ್ಷಣೆಯನ್ನು ಮಾಡಿದ್ದಾದರೆ ನಿನಗೆ ಕೀರ್ತಿ ಪ್ರಾಪ್ತವಾಗುವದು. ಅದನ್ನು ಬಿಟ್ಟು ಇತರರ ವಂಶಕ್ಕೆ ಪೋಷಿಸಿಯಾದರೆ, ಅದರಿಂದ ಕೀರ್ತಿಯು ನಶಿಸುವುದು. ಅಲ್ಲದೆ ಅಪಕೀರ್ತಿ ನಿಶ್ಚಯ. ಈಗ ಅವರು ತಮ್ಮ ಸ್ವಪ್ರಯೋಜನಕ್ಕಾಗಿ ನಿನ್ನನ್ನು ಅನುಸರಿಸಿದಂತೆ, ಅಧೀನರಿದ್ದಂತೆ ಕಾಣುತ್ತಾರೆ. ಸ್ವಲ್ಪ ಬಲಶಾಲಿಗಳಾದರೆ ಸಾಕು ನಿನಗೆ ವಿರೋಧ ಮಾಡಲೂ ಹಿಂಜರಿಯುವುದಿಲ್ಲ.

**ಕ್ಷತ್ತೈಕ ಏವಸತತಂ ಪರಿಪೋಷಕೋಽಲಂ ।**
**ತೇಷಾಂ ಮಮ ದ್ವಿಡಥ ಮಂತ್ರ ಬದಲಾದ ಮುಷ್ಯ॥**
**ಪೌರಾಶ್ಚ ಜಾನಪದಿಕಾಃ ಸತತಂ ದ್ವಿಷಂತಿ ।**
**ಮಾಂತೇಷ್ವ ತೀವದ್ಧೃಥ ಸೌಹೃದ ಚೇತಸಶ್ಚ ॥೨೦॥**

ಆ ವಿದುರನೊಬ್ಬನೇ ಅವರಿಗೆ (ಪಾಂಡವರಿಗೆ) ಒಳ್ಳೆಯ ಪೋಷಕನಾಗಿದ್ದಾನೆ. ಅವನು ನನಗೆ ವಿರೋಧಿಯು ಕೂಡ. ಆ ವಿದುರನ ಮಂತ್ರಾಲೋಚನೆಯಿಂದಲೇ

ಪಟ್ಟಣಿಗರು, ಹಳ್ಳಿಗರು ಎಲ್ಲರೂ ನನ್ನನ್ನು ದ್ವೇಷಿಸುತ್ತಾರೆ. ಅಲ್ಲದೆ ಅವರಿಗೆ ಸ್ಥಿರವಾದ ಸೌಹೃದಯಗಳು ಆಗಿದ್ದಾರೆ. ( ಕಾರಣ)

**ಏತೇಷು ದೂರಗಲುತೇಷು ನಿರಾಶ್ರಯತ್ವಾ ।**
**ಸ್ಮಾಮೇವ ದುರ್ಬಲತಯಾ ಪರಿತಃಶ್ರಯಂತೇ ॥**
**ಭೀಷ್ಮಾದಯಶ್ಚ ನಹಿ ತನ್ನಿಕಟೇ ವಿರೋಧಂ ।**
**ಕುರ್ಯುರ್ವಿನಶ್ಯಾತಿ ಗತೇಷುಹಿ ಸೌಹೃದಂತತ್** ॥೨೧॥

ಈ ಪಾಂಡವರನ್ನು ದೂರ ಕಳಿಸಿದರೆ, ನಾಗರಿಕರು, ನಿರಾಶ್ರಿತರಾಗುವರು. ಆಗ ಅವರೆಲ್ಲ ದುರ್ಬಲರಾಗಿ ನನ್ನನ್ನೇ ಆಶ್ರಯಿಸುವರು. ಪಾಂಡವರು ಹತ್ತಿರವಿರುವುದರಿಂದ ಭೀಷ್ಮಾದಿಗಳು ಉಭಯ ಪಕ್ಷಪಾತಿಗಳಂತೆ ಕಾಣುತ್ತಾರೆ. (ಅವರನ್ನು ವಿರೋಧಿಸುವುದಿಲ್ಲ) ಅವರು ದೂರ ಹೋದರೆ ಭೀಷ್ಮರಿಗಿರುವ ಪ್ರೀತಿಯು ನಷ್ಟವಾಗುತ್ತದೆ.

**ವಿ. ವಿ. :** ಪಾಂಡವರನ್ನು ದೂರ ಕಳುಹಿಸಿದರೆ, ಅವರಲ್ಲಿ ಸ್ನೇಹ ಕಡಿಮೆಯಾಗಿ, ಜನರು ನನ್ನನ್ನು ಪ್ರೀತಿಸುವರು. ಇದೇ ಮಾತನ್ನೇ ರಾಮಾಯಣದಲ್ಲಿ ಕೈಕೇಯಿಯು, ವಿಚಾರಿಸಿ (ಆಲೋಚಿಸಿ) ರಾಮನ ವನವಾಸಕ್ಕಾಗಿ ದಶರಥನಿಗೆ ಹೇಳಿದಳು. "ಇದು ಮನೋವೈಜ್ಞಾನಿಕ ಸತ್ಯ'' ಮಾನವನ ಸಹಜ ಸ್ವಭಾವ.

**ಭೇದಃ ಕುಲಸ್ಯಭವಿತಾ ಕುಲನಾಶ ಹೇತು ।**
**ರಸ್ಮಾಭಿ ಶೇಷು ಸಹಿತೇಷು ಪುರೇವಸತ್ಸು ॥**
**ತಸ್ಮಾದುಪಾಯ ಬಲತಃ ಪ್ರತಿಯೊಪ ನೀಯಾ ।**
**ಸ್ತೇ ವಾರಣಾವತ ಮಿತೋ ವಿಹಿತೋಽ ಪ್ಯುಪಾಯಃ** ॥೨೨॥

ಆ ಪಾಂಡವರು ನಮ್ಮೊಡನೆ ಹಸ್ತಿನಾವತಿಯಲ್ಲಿಯೇ ವಾಸಿಸಿದ್ದೇ ಆದರೆ, ಮನೆತನದಲ್ಲಿ ಭೇದ ಹುಟ್ಟುವುದು ಸಹಜ. ಆ ಭೇದವೇ ಕುಲನಾಶಕ್ಕೆ ಕಾರಣವಾಗಬಹುದು. ಅದಕ್ಕಾಗಿ ಪಾಂಡವರನ್ನು ಒಳ್ಳೆಯ ಉಪಾಯದಿಂದ ಹಸ್ತಿನಾಪುರದಿಂದ ದೂರ ಕಳಿಸುವುದು ಯೋಗ್ಯ. ಅದಕ್ಕಾಗಿ ಒಂದು ಒಳ್ಳೆಯ ಉಪಾಯವೂ ನನ್ನಲ್ಲಿ ಸಿದ್ಧವಾಗಿದೆ.

**ವಿಷ್ಣುರ್ಜಯಂತ ಇತಿ ಶಂಭುಸಹಾಯ ಆಸ್ತೇ ।**
**ದೇವೋತ್ಸವಶ್ಚ ಸುಮಹಾನ್ಭವಿತಾತ್ರ ಸುಷ್ಠು ॥**
**ಭಕ್ತಾಶ್ಚತೇಹಿ ನಿತರಾಮರಿ ಶಂಖ ಪಾಣೌ ।**
**ತ್ವಚ್ಚೋದಿತಾಃ ಸಮುಪಯಾಂತಿ– ತಮುತ್ಸವಂದ್ರಾಕ್** ॥೨೩॥

ಆ ವಾರಣಾವತದಲ್ಲಿ ಶಂಭುವಿನ ಸಹಾಯದಿಂದ ಜಯಂತನೆಂಬ ನಾರಾಯಣನು ನೆಲೆಸಿದ್ದಾನೆ. (ಅಲ್ಲಿ ಹರಿ, ಹರರ ಪ್ರಸಿದ್ಧ ದೇವಾಲಯಗಳಿವೆ) ಒಳ್ಳೆಯ ವೈಭವದಿಂದ ಅಲ್ಲಿ ಉತ್ಸವಗಳೂ ಆಗುತ್ತವೆ. ಶಂಖ–ಚಕ್ರಧಾರಿಯಾದ ವಿಷ್ಣುವಿನಲ್ಲಿ ಪಾಂಡವರಿಗೆ ಅತಿಭಕ್ತಿಯೂ ಇದೆ (ಅವರು ಶ್ರೀವಿಷ್ಣುವಿನ ಪರಮ ಭಕ್ತರು) ನೀನು ಪ್ರೇರೇಪಿಸಿದರೆ, ಉತ್ಸವವನ್ನು ನೋಡಲು ಅವರು ಭಕ್ತಿಯಿಂದ ಹೋಗುತ್ತಾರೆ.

ಅಜ್ಞಾಪ್ಯ ಮತ್ಪುರುಷತಾಂ ಪುರುಷೈರ್ಮದಿಯೈಃ ।
ಮಧ್ಯಸ್ಥ ವದ್ಬಹುಗುಣಾ ಉದಿತಾಶ್ಚ ತತ್ರ ॥
ತೇಷಾಂ ಪುರೋಽತ್ರ ಗಮನಾಭಿರುಚಿಶ್ಚ ಜಾತಾ ।
ದ್ರುಷ್ಟುಂ ಪುರಂ ಬಹುಗುಣಂ ನನುಪಾಂಡವಾನಾಮ್ ॥೨೪॥

ನನ್ನ ಕೆಲವು ಭೃತ್ಯರು, ಅವರು ನನ್ನವರು ಎಂದು ಗೊತ್ತಾಗದಂತೆ, ಪಾಂಡವರೊಡಗೂಡಿ, ಶ್ರೀಸಾಮಾನ್ಯರಂತೆ ವಾರಣಾವತ ಉತ್ಸವ, ದೇವಾಲಯ, ಇತ್ಯಾದಿಗಳನ್ನು ವರ್ಣಿಸಿದ್ದಾರೆ. (ಇದರಲ್ಲಿ ನನ್ನ ನಿಂದೆ ಮತ್ತು ಪಾಂಡವರ ವರ್ಣನೆಗಳೂ ಸೇರಿವೆ. ಈಗ ಅವರಿಗೆ ಆ ಪಟ್ಟಣಕ್ಕೆ ಹೋಗಿ ನೋಡುವ ಉತ್ಸುಕತೆಯೂ ಉಂಟಾಗಿದೆ.

ವಿ. ವಿ. : ಮೇಲಿನ ನಾಲ್ಕಾರು ಶ್ಲೋಕಗಳನ್ನು ಗಮನಿಸಿದಾಗ, ದುರ್ಯೋಧನನು, ತಂದೆಯ ಮನವೊಲಿಸಲು ಮಾಡಿದ ಉಪಾಯ, ಪಾಂಡವರ ನಾಶಕ್ಕಾಗಿ ಯೋಚಿಸಿದ, ಯೋಜಿಸಿದ ಕುಯುಕ್ತಿಗಳು ಸ್ಪಷ್ಟವಾಗುತ್ತವೆ. ದುರ್ಯೋಧನನ ನಿಜಸ್ವರೂಪದ (ಕಲಿಯ) ಅರಿವು ಓದುಗರಿಗೆ ಉಂಟಾಗದೆ ಇರದು. ಕುಟುಂಬದ ದೃಷ್ಟಿಯಿಂದ ನೋಡಿದಾಗ, ಕೌರವರು ಪಾಂಡವರು ವೈರಿಗಳಲ್ಲ, ದಾಯಾದಿಗಳು. ಕೌರವರು ಮಾತ್ರ ಆತ ತಾಯಿಗಳು ಎಂದು ಮಾತ್ರ ಹೇಳಬಹುದು.

ಸ್ವರೂಪಗಳ ದೃಷ್ಟಿಯಿಂದ ನೋಡಿದಾಗ ಮಿತ್ರತ್ವ ಇಲ್ಲ. ದೈವೀಸ್ವಭಾವಕ್ಕೂ ಆಸುರೀ ಪ್ರವೃತ್ತಿಗೂ ಹೊಂದಾಣಿಕೆಯಾಗಲಾರದು. ಎಣ್ಣೆ-ಸೀಗೆಕಾಯಿ ಇದ್ದಂತೆ- ವೈರಿಗಳನ್ನು ಗೆಲ್ಲಲು, ಇಲ್ಲವೇ ನಾಶ ಮಾಡಲು ರಾಜ ನೀತಿಯಲ್ಲಿ ಸಾಮ, ದಾನ, ಭೇದ, ದಂಡ ನಾಲ್ಕು ಉಪಾಯಗಳನ್ನು ಹೇಳಲಾಗಿದೆ. ಆದರೆ ದುರ್ಯೋಧನನ ವಿಚಾರಗಳು ಈ ನಾಲ್ಕರಲ್ಲೂ ಬರಲಾರವು. ಇವು ಕಳಿಂಗನ ನೀತಿಗೆ ಮಾತ್ರ ಪೂರಕವೆಂದು ಹೇಳಬಹುದು.

ಇತ್ಯುಕ್ತ ಪ್ರತ್ಯಥಸುತೇನ ತಥೇ ತ್ಯುವಾಚ ।
ಪ್ರಾಪ್ತೇಷು ಪಾಂಡುತನಯೇಷು ತದೈವ ಚೋಚೇ ॥
ಜ್ಞಾತ್ವೈ ವ ತೇಽಪಿ ನೃಪತೇರ್ಹೃದಯಂ ಸಮಸ್ತಂ ।
ಜಗ್ಮುಃ ಪಿತೇತಿ – ಪೃಥಯಾ ಸಹ ನೀತಿ ಹೇತೋಃ ॥೨೫॥

ಮಗನ ಮಾತುಗಳನ್ನು ಕೇಳಿದ ಧೃತರಾಷ್ಟ್ರನು 'ಹಾಗೇ ಆಗಲಿ' ಎಂದನು. ಅದೇ ಕಾಲಕ್ಕೆ ಪಾಂಡವರು ಅಲ್ಲಿಗೆ ಬಂದರು. ಅವರು ದೊಡ್ಡಪ್ಪನ ಇಂಗಿತವನ್ನು ಅರಿತು, ಹಿರಿಯರ ಆಜ್ಞೆಯನ್ನು ಪಾಲಿಸುವುದು ಯೋಗ್ಯ ಮತ್ತು ನ್ಯಾಯ ಎಂಬುದನ್ನು ತೋರಲು ಕುಂತಿಯೊಡನೆ ಹೊರಡಲು ಸಿದ್ಧರಾದರು. ಆಗ,

ಭೀಮಸ್ತದಾಹ ಭವಿತಾತ್ರಹಿ ಭೈಷ್ಯಚಾರ ಇತ್ಯೇವ ।
ಸಮ್ಯಗನುವಿದ್ಯ ನಿಜಂನಕರ್ಮ ॥
ತ್ಯಾಜ್ಯಂತ್ವಿತಿ ಪ್ರತಿಜಗಾದ ನಿಜಾಗ್ರಹಜಾಯ ।
ಯಾಮೋವಯಂ ನಹಿಗೃಹಾತ್ಯಹಿನಃ ಸ್ವಧರ್ಮಃ ॥೨೬॥

ಭೀಮನು ವಾರಣಾವತದ ಸ್ಥಿತಿಯನ್ನು ಬಲ್ಲವನಾಗಿದ್ದನು. ಅದಕ್ಕಾಗಿ ಆತನು, ಅಣ್ಣನನ್ನು ಕುರಿತು, 'ಅಲ್ಲಿಗೆ ಹೋದರೆ ಅನ್ನಕ್ಕಾಗಿ ಭಿಕ್ಷೆ ಬೇಡಬೇಕಾಗಿ ಬರುವುದು'. ಅದು ಕ್ಷತ್ರಿಯರಿಗೆ ಯೋಗ್ಯವಲ್ಲ. ಕ್ಷತ್ರಿಯರು ತಮ್ಮ ಧರ್ಮವನ್ನು ಬಿಡಬಾರದು. ಈ ಮನೆಯಲ್ಲಿರುವುದೇ ನಮ್ಮ ಧರ್ಮ. ಇದನ್ನು ಬಿಟ್ಟು ನಾವು ಅಲ್ಲಿಗೆ ಹೋಗಬಾರದು ಎಂದು ಹೇಳಿದನು.

**ನಿಷ್ಕಾಸ (ಲ) ಯಂತಿಯದಿನೋ ನಿಜಧರ್ಮಸಂಸ್ಥಾ ।**
**ನ್ಯೋತ್ಸಾಸ್ಯಮಹೇಽತ್ರ ನಹಿದಸ್ಯು ವಧೋಽಸ್ಯ ಧರ್ಮಣೆ ॥**
**ಇತ್ಯೂಚಿ ವಾಂಸಮಮುಮಾಹಚಧರ್ಮಸೂನುಃ ।**
**ಕೀರ್ತಿರ್ವಿನಶ್ಯತಿ ಹಿನೋ ಗುರುಭಿ ರ್ವಿರೋಧೇ ॥೨೭॥**

"ನಾವು ನಮ್ಮ ಸ್ವಧರ್ಮದಲ್ಲಿ ರತರಾಗಿದ್ದಾಗ, ಅಂದರೆ ನಾವು ಈ ಮೂರನ್ನು ಬಿಡದೆ ಇದ್ದಾಗ, ಅವರು ಬಲತ್ಕಾರವಾಗಿ ನಮ್ಮನ್ನು ಹೊರಗೆ ಹಾಕಿದರೆ, ಅಲ್ಲಿಯೇ ಯುದ್ಧ ಮಾಡುವೆವು. ದುಷ್ಟರನ್ನು ಅಧರ್ಮಿಗಳನ್ನು ಕೊಂದರೆ ತಪ್ಪಲ್ಲ. ಅದು ಧರ್ಮವೇ" ಎಂದು ಭೀಮನು ಹೇಳಿದಾಗ, ಧರ್ಮರಾಜನು "ಹೀಗೆ ಮಾಡಿದರೆ, ಹಿರಿಯನಾದ ಧೃತರಾಷ್ಟ್ರನೊಂದಿಗೆ ವೈಮನಸ್ಸು ಉಂಟಾಗುವುದು ಜಗಳವಾಗಬಹುದು. ಆದರಿಂದ ನಮ್ಮ ಕೀರ್ತಿ ಕೆಡುವುದು' ಎಂದು ಹೇಳಿದನು.

**ಇತ್ಯುಕ್ತ ವಾಕ್ಯಮಮಂ ಮಗ್ರಜಮನ್ವಗಾತ್ಸಭೀಮಃ ।**
**ಪ್ರದರ್ಶ್ಯ ನಿಜಧರ್ಮಮಥಾ ನುವೃತ್ಯೆ ।**
**ದೋಷೋ ಭವೇದು ಭಯತೋ ಯತ ಏವತೇ ನವಾಚ್ಯಃ ।**
**ಸ್ವಧರ್ಮ ಉತನ ಸ್ಥಿತಿರತ್ರ ಕಾರ್ಯಾ ॥೨೮॥**

ಭೀಮಸೇನ ದೇವರು ಧರ್ಮರಾಜನ ಮುಂದೆ, ಯಾವುದು ಧರ್ಮ, ಯಾವುದು ಅಧರ್ಮ ಎಂಬುದನ್ನು ತುಲನೆ ಮಾಡಿ ಉಕ್ತವಾದದ್ದನ್ನು ಹೇಳಿ, ತಮ್ಮ ನಿಜಧರ್ಮ (ಭಾಗವತ ಧರ್ಮವನ್ನು) ಪ್ರದರ್ಶಿಸಿದರು. ಅಣ್ಣನ ಆಜ್ಞೆಯನ್ನು ಉಲ್ಲಂಘಿಸುವುದೂ ಅದು ದೋಷವೇ. ಪಾಪಯುಕ್ತವೇ. ಅದು ಆಗಬಾರದೆಂದು ಅಣ್ಣನನ್ನು ಅನುಸರಿಸಿದರು.

**ವಿ. ವಿ. :** ಭೀಮಸೇನ ದೇವರ ಹೇಳಿಕೆಯ ಪ್ರಕಾರ ಊರನ್ನು ಬಿಡುವುದು ಸ್ವಧರ್ಮ ತ್ಯಾಗ, ಅಣ್ಣನನ್ನು ಅನುಸರಿಸಿದರೆ ಸ್ವಧರ್ಮ ಬಿಟ್ಟಂತೆ ಆಗಲಿಲ್ಲವೇ? ಅದು ದೋಷವಲ್ಲವೇ? ಸಮಾಧಾನ.

**ಕೀರ್ತ್ಯರ್ಥಮೇವ ನಿಜದರ್ಮ ಪರಿಪ್ರಹಾಣೇ ।**
**ಪ್ರಾಪ್ತೇಽಗ್ರಜಸ್ಯ ವಚನಾತ್ಸ್ಮತಿ ಹಾತು ಮೇವ ॥**
**ಭೀಮಸ್ಯ ದೋಷಯುಭಯಂ ಪ್ರತಿಹಂತು ಮೀಶೋ**
**ಜ್ಯೇಷ್ಠಂ ಚಕಾರ ಹರಿರತ್ರ ಸುತಂ ವೃಷಸ್ಯ ॥೨೯॥**

ಕೀರ್ತಿಯ ರಕ್ಷಣೆ, ಹಿರಿಯರ ಆಜ್ಞೆಪಾಲನೆಗಾಗಿ ಧರ್ಮರಾಜನ ಆಜ್ಞೆಯಾಗಿದೆ. ಅಣ್ಣನ ಆಜ್ಞೆಯನ್ನು ಮೀರಿದರೂ ದೋಷ, ಸ್ವಧರ್ಮವನ್ನು ತ್ಯಾಗ ಮಾಡಿದರೂ ದೋಷ.

ಈ ಉಭಯ ದೋಷಗಳು ಭೀಮನ ಸಮ್ಮುಖದಲ್ಲಿವೆ. ಇವುಗಳ ಪರಿಹಾರಕ್ಕಾಗಿಯೇ ಶ್ರೀಹರಿಯು ಭೀಮನನ್ನು ತಮ್ಮನನ್ನಾಗಿ ಮಾಡಿದ್ದಾನೆ.

**ವಿ. ವಿ. :** ಇಲ್ಲಿ ಭೀಮನು ಧರ್ಮಾಧರ್ಮಗಳನ್ನು ನಿರ್ಣಯಿಸಿ ಹೇಳಿದ್ದು ಒಂದು ಸಲಹೆ ಮತ್ತು ಕರ್ತವ್ಯವೇ ವಿನಃ ಆಜ್ಞೆಯಲ್ಲ. ಇದನ್ನು ಮೀರಿ ಅಣ್ಣನ ಆಜ್ಞೆ ಬಂದಾಗ, ಆಜ್ಞೆ ಪಾಲಿಸುವುದು ಮೊದಲ ಧರ್ಮ. ಭೀಮನು ಅಣ್ಣನ ಆಜ್ಞೆಯನ್ನು ಪಾಲಿಸಿದ್ದಾನೆ. ಅಧರ್ಮದ ದೋಷ ಭೀಮನ ತಲೆಗೆ ಕಟ್ಟುವಂತಿಲ್ಲ. ಬದಲಾಗಿ ಭೀಮನಿಗೆ ಅಣ್ಣನ 'ಆಜ್ಞಾಧಾರಕ' ಎಂಬ ಕೀರ್ತಿಯೂ ಲಭಿಸಿದೆ.

**ಹಂತವ್ಯತಾಮುಪಗತೇಷು ಸುಯೋಧನಾದಿಷ್ವಸ್ಮೋ ।**
**ವಧಾ ನ್ನಹಿ ಭವೇನ್ನಿಜಧರ್ಮ ಏವ ॥**
**ಪೂರ್ವಂ ವಧೇ ನಹಿ ಸಮಸ್ತ ಶಪಿವದೋ ಷಾಸ್ತೇಷಾಂ ।**
**ಪ್ರಯಾಂತಿ ವಿವೃತಿಂಚ ತದರ್ಥತೋಽಪಿ ॥೩೦॥**

ಭೀಮನ ಅಭಿಪ್ರಾಯದಂತೆ – ಸುಯೋಧನಾದಿ ದುಷ್ಟರನ್ನು ಕೊಲ್ಲುವುದೇ ನಿಜಧರ್ಮ. ಅದು ನಿಜ, ಆದರೆ ಪಾಪಿಗಳನ್ನು ಮೊದಲನೇ ಪಾಪ ಕಾರ್ಯ ನಿಮಿತ್ತ ಕೊಂದರೆ, ಅವರು ಮುಂದೆ ಮಾಡಬಹುದಾದ ಪಾಪ ಕಾರ್ಯಗಳಿಗೆ ಆಸ್ಪದವೇ ಇರುವುದಿಲ್ಲ. ಅವು ಜಗತ್ತಿನಲ್ಲಿ ಬೆಳಕಿಗೆ ಬರುವುದಿಲ್ಲ. ಪಾಪದ ಕೊಡ ತುಂಬಬೇಕಲ್ಲವೇ? ಅಲ್ಲದೆ ಒಂದೇ ಅಪರಾಧಕ್ಕಾಗಿ ಮರಣ ದಂಡನೆ ಮಹಾ ಶಿಕ್ಷೆಯಾಗಬಹುದು.

**ಕ್ಷತ್ತಾಥಚಹ ಸುವಚೋಽಂತ್ಯಜಭಾಷಯೈವ ।**
**ಧರ್ಮಾತ್ಮಜಂ ವಿಷ ಹುತಾಶ ಭಯಾತ್ಪ್ರತೀತಾಃ ॥**
**ಅಧ್ವಂತ್ವಿತಿಸ್ಮ ಸತಥೇತಿ – ವಚೋಽಭ್ಯು ದೀರ್ಯ ।**
**ಪ್ರಾಯೋಚ್ಚ ವಾರಣವತಂ ಪೃಥಯಾನು ಜೈಶ್ಚ ॥೩೧॥**

ಪಾಂಡವರು ವಾರಣಾವತಕ್ಕೆ ಹೊರಡಲು ಸಿದ್ಧರಾದಾಗ, ವಿದುರನು, "ಅಗ್ನಿ ಮತ್ತು ವಿಷಗಳ ಭಯದಿಂದ ಜಾಗ್ರತೆರಾಗಿರಿರಿ" ಎಂದು ಅಂತ್ಯಜ ಭಾಷೆಯಲ್ಲಿ, ಮ್ಲೇಂಛ ಭಾಷೆಯಲ್ಲಿ ಸಂಜ್ಞಾರೂಪದಿಂದ ತಿಳಿಸಿದನು. ಲಾಕ್ಷಾಗೃಹದಲ್ಲಿಯೇ ಕುಳಿತುಕೊಳ್ಳಿ ಎಂದೂ ಹೇಳಿದನು. ಅದಕ್ಕೆ ಧರ್ಮರಾಜನು 'ಹಾಗೆಯೇ ಆಗಲಿ' ಎಂದು ಹೇಳಿ, ಕುಂತಿ ಮತ್ತು ತಮ್ಮಂದಿರನ್ನು ಕೂಡಿಕೊಂಡು ವಾರಣಾವತದತ್ತ ನಡೆದನು.

**ವಿ. ವಿ. :** ವಿದುರನು ಲಾಕ್ಷ ಗೃಹದಲ್ಲಿ ತಂಗಲು (ಉಳಿಯಲು) ಏಕೆ ಹೇಳಿದನು? ಸಮಾಧಾನ.

**ತಾಸ್ಥಂತು ಮೇವಚತದಾ ಧೃತರಾಷ್ಟ್ರ ಸೂನು ।**
**ಲಾಕ್ಷಾಗೃಹಂ ಸಪದಿ ಕಾಂಚನ ರತ್ನ ಗೂಢಂ ॥**
**ಕೃತ್ವಾಭ್ಯಯಾತಯೆದ ಮುತ್ರಚ ವಿಷ್ಣು ಹದ್ಯಾ ।**
**ಸ್ವಾಮಾತ್ಯ ಮೇವಚ ಪುರೋಚನ ನಾಮಧೇಯೆಮ್ ॥೩೨॥**

ಆ ಪಾಂಡವರನ್ನು ಕೊಲ್ಲುವುದಕ್ಕಾಗಿಯೇ ದುರ್ಯೋಧನನು, ದಾರಿಯಲ್ಲಿ ಲಾಕ್ಷಾಗೃಹ (ಅರಗಿನ ಮನೆ) ವನ್ನು ಸಿದ್ಧಪಡಿಸಿದ್ದನು. ಅದು ಬಂಗಾರ ಮತ್ತು ರತ್ನ ಗಳಿಂದ ಅಲಂಕೃತವಾಗಿತ್ತು. ಎಲ್ಲಾ (ಸಕಲ) ಸೌಲಭ್ಯಗಳಿಂದ ಕೂಡಿತ್ತು. ಪುರೋಚನ ಎಂಬ ತನ್ನ ಮಂತ್ರಿಗೆ ಸಿಬ್ಬಂದಿ (ಬಡಿಗ ಇತ್ಯಾದಿ) ಯೊಂದಿಗೆ ಗಂಗಾ ತೀರದಲ್ಲಿ ಡೋಣಿ ಮೂಲಕ ಕಳಿಸಿದನು.

**ಪೂರ್ವಂ ಪ್ರಹಸ್ತ ಇತಿ ಯಸ್ತ್ವಭವತ್ಸು ಪಾಪಃ ।**
**ಸೋಽಭೂತ್ಪುರೋಚನ ಇತಿ ಸ್ಮ ಸುಯೋಧನಸ್ಯ ಮಂತ್ರೀ ॥**
**ದುರ್ಯೋಧನಂ ಪ್ರತಿ ವಿಹಾಯ ಭವತ್ಸು ಕಾಶ ॥**
**ಮಾಯಾತ ಇತ್ಯವದ ದೇಷುಸ ಕೂಟವಾಕ್ಯಮ್ ॥೩೩॥**

ಆ ಪುರೋಚನನಾರು?

ರಾಮಾಯಣ ಕಾಲದಲ್ಲಿ ಪ್ರಹಸ್ತನೆಂಬ ರಾಕ್ಷಸನು ಅವನು ಮಹಾಪಾಪಿಷ್ಠನು. ಇಂದು ಅವನೇ ಪುರೋಚನನಾಗಿ, ದುರ್ಯೋಧನನ ಮಂತ್ರಿಯಾಗಿದ್ದಾನೆ. ಅಂಥ ಪುರೋಚನನು, ನನಗೆ ದುರ್ಯೋಧನನ ಸ್ವಭಾವ ಸರಿಬಂದಿಲ್ಲ. ಅದಕ್ಕಾಗಿ ಅವನನ್ನು ಬಿಟ್ಟುಬಂದಿದ್ದೇನೆ. ಈಗ ನಿಮ್ಮ ಮಂತ್ರಿಯಾಗಿರುತ್ತೇನೆ" ಎಂದು ಕಪಟದಿಂದ ನುಡಿದನು.

**ದಿವ್ಯಂ ಗೃಹಂಚ ಭವತಾಂ ಹಿ ಮಯೋಪನೀತಂ ।**
**ಪ್ರೀತ್ಯೈವ ಪಾಪ ಮಾನುಯಾತು ಮಹಂ ನಶಕ್ತಃ ।**
**ಯುಷ್ಮಾಸು ಧರ್ಮಧೃತಿಮತ್ಸು ಸದಾನಿವತ್ಸ್ಯೇ ।**
**ಇತ್ಯೂಚಿ ವಾಂ ಸಮಮುಮಾ ಹುರಹೋಸು ಭದ್ರಮ್ ॥೩೪॥**

"ಸುಂದರ ಭವ್ಯವಾದ ಒಂದು ಮನೆಯನ್ನು ನಿಮಗಾಗಿ ನಾನು ಪ್ರೀತಿಯಿಂದ ತಂದಿದ್ದೇನೆ. ಆ ಪಾಪಿಯಾದ ದುರ್ಯೋಧನನ ಹತ್ತಿರ ಇರಲು ನನಗೆ ಇನ್ನು ಸಾಧ್ಯವಿಲ್ಲ. ಧರ್ಮ ಮತ್ತು ಧೃತಿಯಿಂದ ಕೂಡಿದ ನಿಮ್ಮಲ್ಲಿಯೇ ನಾನು ಸದಾ ವಾಸಿಸುತ್ತೇನೆ" ಎಂದನು. ಅದಕ್ಕೆ ಅವರು, ಓಹೋ! ಬಹಳ ಒಳ್ಳೆಯದಾಯಿತು ಎಂದು ಆಶ್ಚರ್ಯದಿಂದ ನುಡಿದರು.

**ದೃಷ್ಟ್ವೈವಜಾತುಷ ಗೃಹಂ ವಸಯೋಸಮೇತಂ ।**
**ತದ್ಗಂಧತೋ ವೃಷಸುತಃ ಪವಮಾನ ಜಾತಂ ॥**
**ತಂಚಾತಿ ಪಾಪ ಮುಮದತ್ಯು ಮುಖ್ಯೈಷ ಪಾಪೋ ।**
**ಹಂತುಂ ನ ಇಚ್ಛತಿ ಸದಾಭವಚ ಪ್ರತೀತಃ ॥೩೫॥**

ಆ ಮನೆಯನ್ನು ನೋಡಿದ ಕೂಡಲೇ, ಅದರ ಗಂಧ (ವಾಸನೆ) ದಿಂದ ಇದು ಅರಗು ಮತ್ತು ಮೀನಿನ ಎಣ್ಣೆಯಿಂದ ಸಿದ್ಧಪಾಗಿದೆ ಎಂದು ಧರ್ಮರಾಜನು ಅರಿತನು. ಆತನು ಭೀಮನನ್ನು ಕುರಿತು, "ಈ ಪುರೋಚನನು ಮಹಾ ಪಾಪಿಷ್ಠನು. ನಮ್ಮನ್ನು ಕೊಲ್ಲಲೆಂದೇ ಬಂದಿದ್ದಾನೆ. ನೀನು ಜಾಗರೂಕನಾಗಿರು" ಎಂದು ಹೇಳಿದನು.

**ಇತ್ತ**
**ಕ್ಷತ್ತಾಥ ನೀತಿಬಲತೋಽಖಿಲ ಲೋಕವೃತ್ತಂ ಜಾನನ್ ।**
**ಸಚಾರಮುಖಿತಃ ಖನಕಾಯ ಚೋಚೋ ॥**
**ಉಕ್ತ್ವೈವ ಧರ್ಮತನಯಾಯ ಮದೀಯ ವಾಕ್ಯಂ ।**
**ಪೂರ್ವೋಕ್ತಮಾಶು ಕುರುತತ್ರ ಬಲಂ ಸುದೂರಮ್ ॥೩೬॥**

ಇತ್ತ ವಿದುರನು, ತನ್ನ ನೀತಿ ಬಲದಿಂದಲೂ, ಲೋಕಾನುಭವದಿಂದಲೂ, ಭೃತ್ಯನ ಮುಖದಿಂದಲೂ, ಕೌರವನ ಕಪಟವನ್ನು ಅರಿತು, ಒಬ್ಬ (ಖನಕಾಯ) ಅಗಿಯುವ ಕೆಲಸ ಮಾಡುವ ಕೂಲಿಯನ್ನು ಕರೆದು, "ನಾನು ಪೂರ್ವದಲ್ಲಿ ಧರ್ಮರಾಜನಿಗೆ ಹೇಳಿದ ವಾಕ್ಯ ಅದೇ ಭಾಷೆಯಲ್ಲಿಯೇ ಹೇಳಿ, ಆ ಮನೆಯಿಂದ ಹೊರ ಹೋಗಲು ಬಿಲಮಾರ್ಗ ಸಿದ್ಧಪಡಿಸಲು ಕಳಿಸಿದನು.

ವಿ. ವಿ. : ಪೂರ್ವ ವಾಕ್ಯ, ಮೊದಲ ಭಾಷೆ, ಇವುಗಳಿಂದ ಆ ಖನಕಾರನು ವಿದುರನ ದೂತನೆಂದು ಧರ್ಮರಾಜನು ತಿಳಿದುಕೊಂಡನು. ಸಾಮಾನ್ಯವಾಗಿ ನೋಡುವವರಿಗೆ ಇವನು ಮನೆಯ ಸುತ್ತ ಕಂಪೌಂಡಿಗಾಗಿ ಅಗಿಯುತ್ತಾನೆ ಎಂದು ಭಾಸವಾಗುತ್ತಿತ್ತು.

**ಚಕ್ರೇಸಚೈವ ಮಥವರ್ತ್ಮ ವೃತ್ತಿಚ್ಛತೇನ ।**
**ದ್ವಾರಂಚ ತಸ್ಯ ಸಪಿಧಾಯಯೆಯೌ ಸ್ವಹಂಸ್ಸಂ ॥**
**ಭೀಮಃ ಪುರೋಚನ ಉಭಾವಪಿ ತೌ ವಧಾಯ ।**
**ಛಿದ್ರಾರ್ಥಿನೌ ಮಿಥ ಉತೋಷ ತುಂಬ್ದ ಕಾರ್ಧಮ್ ॥೩೭॥**

ಆ ಖನಕನು ವಿದುರನು ಹೇಳಿದ ರೀತಿಯಲ್ಲಿಯೇ ಎಲ್ಲವನ್ನು ತಿಳಿಸಿ, ಊರ ಸುತ್ತಲೂ ಆವರಣ ಮಾಡುವ ನೆಪದಿಂದ, ಅಲ್ಲಿಂದ ಬಹುದೂರದ ವರೆಗೆ ಬಿಲಮಾರ್ಗ ವನ್ನು ಮಾಡಿದನು. ಆ ಬಿಲಕ್ಕೆ ಒಂದು ಒಂದು ದ್ವಾರವನ್ನೂ ಸಿದ್ಧಮಾಡಿ, ಮುಚ್ಚಿ ತನ್ನ ಮನೆಗೆ ನಡೆದನು. ನಂತರ ಭೀಮ ಮತ್ತು ಪುರೋಚನ ಇಬ್ಬರೂ ಪರಸ್ಪರ ಒಬ್ಬರನ್ನೊಬ್ಬರು ಕೊಲ್ಲಲು ಅವಕಾಶಕ್ಕಾಗಿ ಕಾಯುತ್ತ ಅರ್ಧವರುಷ ಅಂದರೆ ಆರು ತಿಂಗಳ ಕಾಲ ಕಳೆದರು. 'ದೈವೇಚ್ಛೆ'

**ತಸ್ಯಾಗ್ರಜಾಚಸಹಿತಾ ಸುತ ಪಂಚಕೇನ ।**
**ತತ್ರಾಗಮತ್ತದನು ಮಾರುತಿರೇಷ ಕಾಲಃ ॥**
**ಇತ್ಥಂ ವಿಚಿಂತ್ಯ ಸನಿಶಾಮ್ಯಚ ತಾನ್ಸ್ವ ಸುಪ್ತಾನ್ ।**
**ಭ್ರಾತೃಂಶ್ಚ ಮಾತರಮಥಾ ಶು ಬಿಲೇನ್ಯ ಧಾತ್ಸ್ವಾರ್ ॥೩೮॥**

ಒಂದು ದಿನ ಪುರೋಚನನ ಅಕ್ಕ ತನ್ನ ಐದು ಮಕ್ಕಳ ಸಹಿತವಾಗಿ ಅಲ್ಲಿಗೆ ಬಂದಳು. ಅವಳು ಬಂದದ್ದನ್ನು ಕಂಡ ಭೀಮನು 'ಇದೇ ತಕ್ಕ ಸಮಯ' ಎಂದು ನಿಶ್ಚಯಿಸಿದನು. ಪುರೋಚನ, ಆತನ ಅಕ್ಕ, ಮಕ್ಕಳು ಎಲ್ಲರೂ ನಿದ್ರಿಸಿರುವುದನ್ನು ನೋಡಿದನು. ತನ್ನ ಸಹೋದರರನ್ನು, ತಾಯಿಯನ್ನು ಆ ಬಿಲದ ದ್ವಾರ ಹೊರಗೆ ಕಳಿಸಿದನು.

**ತಂ ಭಾಗಿನೇಯ ಸಹಿತಂ ಭಗಿನೀಂ ಚತಸ್ಯ ಪಾಪಾಂ ।**
**ದದಾಹ ಸಗೃಹಾಂ ಪವಮಾನ ಸೂನುಃ ॥**
**ಸಾ ಹ್ಯಾಗತಾಹಿ ಗರತೇನ ನಿಹಂತು ಮೇತಾ ನ್ಭೀಮಸ್ಯ ।**
**ಪೂರ್ವಭುಜಿತೋನಶಶಾಕ ಚೈತತ್ ॥೩೯॥**

ಆ ಪುರೋಚನನನ್ನು, ಆತನ ಅಕ್ಕ, ಆಕೆಯ ಮಕ್ಕಳು ಎಲ್ಲರನ್ನು ಸೇರಿಸಿಯೇ ಆ ಪಾಪಿಗಳ ಪಾಪವನ್ನು ಕೂಡಿಸಿ, ಭೀಮಸೇನನು ಆ ಅರಗಿನ ಮನೆ ಸಹಿತ ಸುಟ್ಟುಬಿಟ್ಟನು ಅವಳು ಕೂಡ ಪಾಂಡವರನ್ನು ಕೊಲ್ಲುವುದಕ್ಕಾಗಿಯೇ ವಿಷಪೂರಿತ ಆಹಾರ ತಂದಿದ್ದಳು ಅದನ್ನರಿತ ಭೀಮನು, ಮೊದಲು ತಾನೇ ಭುಂಜಿಸಿ, ಜೀರ್ಣಿಸಿಕೊಂಡನು. ಆ ವಿಷದಿಂದ ಪಾಂಡವರನ್ನು ಕೊಲ್ಲಲು ಶಕ್ಯವಾಗಲಿಲ್ಲ.

**ವಿ. ವಿ. :** ಮಕ್ಕಳ ಸಹಿತವಾಗಿ ಬಂದ ಅಕ್ಕನನ್ನು ಕೊಲ್ಲಲು ಕಾರಣ.

**ತಪ್ತಂ ತಯಾಸಸುತಯಾ ಚ ತಪೋನಿತಾಂ ತಂ ।**
**ಸ್ಯಾಂ ಸೂನುಭಿಃ ಸಹಬಿಲಾದದಿತಿ ಸ್ತಥಾ ಚಾತ್ ॥**
**ತಸ್ಯಾ ಅದಾಚ್ಛ ಹಿರಿಶೋಯದಿ ಪುತ್ರಕೈಸ್ತ್ವಂ**
**ಯುಕ್ತಾನಯೊಸಿ ಮೃತಿಮೇಷ ವರಸ್ತವೇತಿ ॥೪೦॥**

ಆ ಪುರೋಚನನ ಅಕ್ಕ, "ತಾನು ಅದಿತಿಯಾಗಬೇಕು. ತನ್ನ ಮಕ್ಕಳೂ ದೇವತೆಗಳಾಗಬೇಕು" ಎಂದು ಮಹರುದ್ರದೇವರನ್ನು ಕುರಿತು ಕಠಿಣ ತಪಸ್ಸನ್ನು ಮಾಡಿದ್ದಳು. ಅದಕ್ಕೆ ರುದ್ರದೇವರು, ಒಂದು ವರ್ಷದೊಳಗೆ ನೀನು, ನಿನ್ನ ಮಕ್ಕಳ ಸಹಿತ ಸಾಯದಿದ್ದರೆ, ನಿನ್ನ ಇಚ್ಛೆ ಫಲಿಸುವುದು" ಎಂದು ವರವಿತ್ತಿದ್ದರು.

**ವಿ. ವಿ. :** ಇಲ್ಲಿ ಕೆಲವು ವಿಚಾರ –

೧) ಪುರೋಚನನ ಅಕ್ಕ ದುಷ್ಟ–ಸಾತ್ವಿಕ ಗುಣದವಳಲ್ಲ. ಅವಳ ಕಾರ್ಯ ಮತ್ತು ಉದ್ದೇಶಗಳಿಂದಲೇ ಸ್ಪಷ್ಟವಾಗುತ್ತದೆ. ಇಂಥವಳು ಕೇವಲ ದೇವತೆಯಲ್ಲಿ, ಅದಿತಿಯಾಗ ಬೇಕೆಂದು ಬಯಸಿದಳು. ಅಷ್ಟೇಅಲ್ಲ ತನ್ನ ಮಕ್ಕಳೂ ದೇವತೆಗಳಾಗಬೇಕೆಂದು ಕೋರಿದಳು.

ಇದು ಅಶಕ್ಯ ಪರಮಾತ್ಮನ ಇಚ್ಛೆಗೆ ವಿರುದ್ಧವೂ ಕೂಡ. ಸಾತ್ವಿಕರೇ ತಮ್ಮ ಯೋಗ್ಯತೆಗೆ ಮೀರಿ ಇಚ್ಛಿಸಿ, ತಪಸ್ಸು ಮಾಡಿದರೆ ಪರಮಾತ್ಮ ಸಹಿಸುವುದಿಲ್ಲ. ಯಾವುದೋ ಕಾರಣದಿಂದ ಆ ಪುಣ್ಯವನ್ನು ಹ್ರಾಸಗೊಳಿಸಿ, ಅವರ ಉದ್ದೇಶ ಪೂರ್ತಿಗೊಳಿಸುವುದಿಲ್ಲ. ಇಲ್ಲಿ ಇವಳು ಮೂಲತಃ ಆಸುರೀ ಸ್ವಭಾವದವಳು. ಅವಳ ಮಕ್ಕಳೂ ಅಷ್ಟೇ!

೨) ರುದ್ರದೇವರು ವರವನ್ನು ಕೊಡುವಾಗಲೇ, ಭವಿಷ್ಯವನ್ನು ನುಡಿದಿದ್ದಾರೆ. ಅದೂ ಒಂದು ವರ್ಷದ ಗಡುವನ್ನಿಟ್ಟಿದ್ದಾರೆ. ಅಂತೆಯೇ 'ದೈವವು' ಅವಳನ್ನು ಆರು ತಿಂಗಳ ಒಳಗಾಗಿಯೇ ಇಲ್ಲಿಗೆ ಎಳೆದು ತಂದಿತು.

**ದೈವ ಸಂಕಲ್ಪಕ್ಕೆ ವಿರುದ್ಧವಾಗಿ ಪ್ರಯತ್ನಿಸಿದರೆ, ಅದರ ಪರಿಣಾಮ ಇಷ್ಟೇ.**

ಜಾನನ್ನಿದಂ ಸಕಲಮೇವಚ ಭೀಮಸೇನೋ ।
ಹತ್ವಾ ಸುತೈಸ್ಸಹ ಕುಬುದ್ಧಿ ಮಿಮಾಂಪಿ ತಂ ಚ ॥
ಭ್ರಾತೃಂಶ್ಚ ಮಾತರಮುದೂಹ್ಯ ಯಯೌ ಬಿಲಾತ್ಯ ।
ನಿರ್ಗತ್ಯ ಭೀತಿ ವಶತೋಽಬಲತಾಂ ಪ್ರಯಾತಾನ್ ॥೪೧॥

ಭೀಮನು ಇದೆಲ್ಲವನ್ನು ಬಲ್ಲವನಾಗಿದ್ದನು. ಅಂತೆಯೇ 'ಸರ್ವಜ್ಞನು' ಆದಕ್ಕಾಗಿಯೇ ಕುಬುದ್ಧಿಯಿಂದ ಬಂದ ಪುರೋಚನನ ಅಕ್ಕನನ್ನು, ಆಕೆಯ ಮಕ್ಕಳ ಸಹಿತವಾಗಿಯೇ ಭಸ್ಮ ಮಾಡಿದನು. ಅವಳ ಬಂಧುವೂ ನಾಶ ಹೊಂದಿದನು. ಈ ದೃಶ್ಯವನ್ನು ಕಂಡು ಭಯಗೊಂಡ ಸಹೋದರರರನ್ನು, ತಾಯಿಯನ್ನೂ ಹೊತ್ತುಕೊಂಡು ಭೀಮನು ಆ ಬಿಲಮಾರ್ಗದಿಂದ ಹೊರಗೆ ಹೋದನು. ಪಾಂಡವರಿಗೆ ಭಯಗೊಳ್ಳಲು ಕಾರಣ,

ಜ್ಞಾತ್ವಾ ಪುರೋಚನ ವಧಂ ಯದಿ ಭೀಷ್ಮ ಮುಖ್ಯೈ,
ರ್ವೈಚಿತ್ರವೀರ್ಯತನಯಾ ಅಭಿಯೋಧ ಯೇಯುಃ ॥
ಕಿಂ ನೋ ಭವೇದಿತಿ ಭಯಂ ಸುಮಹದ್ವಿವೇಶ ।
ಭೀಮಂ ತ್ವೃತೇಚ ತನಯಾನ್ಯಕಲಾನ್ಪೃಥಾಯಾಃ ॥೪೨॥

ಪುರೋಚನನು ಹತನಾದ ಸಮಾಚಾರವನ್ನು ತಿಳಿದು, ದುರ್ಯೋಧನನು, ಭೀಷ್ಮ ಮುಖ್ಯರಾದವರನ್ನು ಕೊಂಡು ಬಂದು ಯುದ್ಧ ಮಾಡಿದರೆ, ನಮ್ಮ ಗತಿ ಏನು? (ನಮಗೆ ಏನಾಗಲಿಕ್ಕಿಲ್ಲ) ಎಂದು ಯೋಚಿಸಿ ಭೀಮನನ್ನುಳಿದು, ಕುಂತಿ ಮತ್ತು ಇತರ ಪಾಂಡವರು ಮಹತ್ತರವಾದ ಭೀತಿಗೊಳಗಾದರು. ಅಲ್ಲದೇ,

ಭೀಮೋಽಭಯೋಽಪಿ ಗುರುಭಿಃ ಸ್ವಮುಖೇನ ಯುದ್ಧ ।
ಮಪ್ರೀಯಮಾಣ ಉತಧರ್ಮಜ ವಾಕ್ಯ ಹೇತೋಃ ॥
ಊಹ್ಯೈವತಾನಪಿಯಯೌ ದ್ಯುನದೀಂಚ ತೀರ್ತ್ವಾ
ಕ್ಷತ್ರಾತಿ ಸೃಷ್ಟಮಧಿರುಹ್ಯ ಜಲಪ್ರಯಾಣಮ್ ॥೪೩॥

ವಿಶ್ವಾಸಿತಾ ವಿದುರ ಪೂರ್ವವಚೋ ಭಿರೇವ ।
ದಾಶೋದಿತಾಭಿರಧಿ ರುಹ್ಯಚ ಭೀಮ ಸೃಷ್ಟಂ ॥
ಸರ್ವೇಯಯುರ್ವ ನಮಥಾ ಭ್ಯುದಿತೇ ಚ ಸೂರ್ಯೇ
ದೃಷ್ಟ್ವೈವ ಸಪ್ತಮೃತಕಾ ನ್ರುರುದುಶ್ಚ ಪೌರಾಃ ॥೪೪॥

ಭೀಮನೇನೋ ಭಯವಿಲ್ಲದವನು ನಿಜ. ಆದರೂ, ಗುರುಗಳು ಸಮ್ಮುಖದಲ್ಲಿ ನಿಂತಾಗ ಯುದ್ಧಮಾಡುವುದು ಅಪ್ರಿಯ ಹಾಗೂ ಅಧರ್ಮ ಎಂದು ತಿಳಿದು ಸುಮ್ಮನಾದರೆ ನಮ್ಮ ಗತಿ ಏನು? ಆದರೂ ಧರ್ಮದಿಂದ ನಡೆಯಲು ಅಶಕ್ತರಾದ ನಮ್ಮನ್ನು ಹೊತ್ತು ಕೊಂಡು ಹೊರಟಿದ್ದಾನಲ್ಲ, ಎಂದು ಯೋಚಿಸುತ್ತ ಗಂಗಾ ನದಿಯ ವರೆಗೆ ಬಂದರು.

ಅಲ್ಲಿ ವಿದುರನು ಮೊದಲೇ ನಾವಿಕರನ್ನು ಸಿದ್ಧಮಾಡಿ ಇಟ್ಟಿದ್ದನು. ವಿದುರನ ಮಾತಿನ ಮೇಲೆ ವಿಶ್ವಾಸವಿಟ್ಟು ನಾವೆಗಳ ಮೂಲಕ ಗಂಗೆಯನ್ನು ದಾಟಿದರು.

ನಡೆಯಲು ಅಶಕ್ಯರಾದ ಅವರು ಪುನಃ ಭೀಮನ ಹೆಗಲನ್ನು ಏರಿ ಅರಣ್ಯ ಮಾರ್ಗವಾಗಿ ಮುನ್ನಡೆದರು. ಇತ್ತ ವಾರಣಾವತದಲ್ಲಿ, ಬೆಳಗಾದ ನಂತರ, ಪೌರ ಜನರು ಏಳು ಜನ ಸುಟ್ಟು ಸತ್ತದ್ದನ್ನು ನೋಡಿ ಮಿಡುಕಿದರು.

ಹಾ ಪಾಂಡವಾನ ದಹೇಷುಃ ಧಾರ್ತರಾಷ್ಟ್ರೋ ।
ಧರ್ಮಸ್ಥಿತಾ ನ್ಸ್ಯ ಮತಿರೇವ ಪುರೋಚನೇನ ॥
ಸೋಽಪ್ಯೇಷದಗ್ಧ ಇಹದೈವವ ಶಾತ್ಸು ಪಾಪಃ
ಕೋನಾಮ ಸತ್ಸುವಿಷಮೇ? ಪ್ರಭವೇತ್ಸುಖಾಯೆ ॥೪೫॥

ಅಯ್ಯೋ ದೇವ! ಧರ್ಮ ಮಾರ್ಗದಲ್ಲಿ ನಡೆವ ಪಾಂಡವರನ್ನು ಆ ದುಷ್ಟ ಬುದ್ಧಿಯುಳ್ಳ ದುರ್ಯೋಧನನು, ಪುರೋಚನನಿಂದ ಸುಡಿಸಿ ಕೊಂದನು. ಆ ಪಾಪಿಯಾದ ಪುರೋಚನನು ಇಲ್ಲಿ ಸುಟ್ಟು ಬಿದ್ದಿರುವನಲ್ಲ! "ಸಜ್ಜನರನ್ನು ದ್ವೇಷಿಸುವವನು, ಯಾವನು ತಾನೇ ಸುಖವಾಗಿರಬಲ್ಲನು?" ಎಂದು ಮಿಡುಕಿದರು.

ಪೌರೇಭ್ಯ ಏವಮಖಿಲಂ ನನುಭೀಷ್ಮ ಮುಖ್ಯಾ ।
ವೈಚಿತ್ರವೀರ್ಯ ಸಹಿತಾಸ್ತು ನಿಶಮ್ಯ ಹೇತಿ ॥
ಊಚುಃ ಸುದುಃಖಿತಧಿಯೋಽಥ ಸುಯೋಧನಾದ್ಯಾಃ ।
ಕ್ಷತ್ತಾ ಮೃಕ್ಷ್ಮೈ ರುರುದುರ್ಯುಯು ಜಲಶ್ಚ ಕರ್ಮ ॥೪೬॥

ಪೌರಜನರಿಂದ ಸಕಲ ವರ್ತಮಾನವನ್ನು ಕೇಳಿದ ಭೀಷ್ಮರು, ಧೃತರಾಷ್ಟ್ರ ಮೊದಲಾದವರು ಬಹುವಾಗಿ ದುಃಖಿಸಿದರು. ದುರ್ಯೋಧನ ಮೊದಲಾದವರು ದುಃಖವಿಲ್ಲದಿದ್ದರೂ ಕೂಡ ಅತ್ತಂತೆ ಮಾಡಿದರು. ವಿದುರನು ಕೂಡ ಎಲ್ಲರ ಜೊತೆಯಲ್ಲಿ ತಾನೂ ಅತ್ತಂತೆ ನಟಿಸಿದನು. ಮುಂದೆ ಸ್ನಾನ, ತಿಲಾಂಜಲಿ ಇತ್ಯಾದಿ ಕರ್ಮಗಳನ್ನು ಮಾಡಿದರು.

ಭೀಮೋಽಪ್ಯುದೂಹ್ಯ ವನಮಾಪ ಹಿಡಿಂಬಕಸ್ಯ ।
ಭ್ರಾತೃನ್ಸಪೃಥಾಂಚ ತೃಷಿತೈರಭಿಯೋಚಿತಶ್ಚ॥
ಪಾನೀಯ ಮುತ್ತರ ಪಟೇಽಂಬುಜ ಪತ್ರನಧಂ ।
ದೂರಾದುದೂಹ್ಯ ದದೃಶೇ ಸ್ವಪತೋಽಥತಾಂಶ್ಚ ॥೪೭॥

ಭೀಮಸೇನನು ಎಲ್ಲರನ್ನು ಹೊತ್ತು, ಹಿಡಿಂಬಕನ ವನಕ್ಕೆ ಬಂದನು. ತಾಯಿ ಮತ್ತು ಸಹೋದರರು ನೀರನ್ನು ಬೇಡಿದರು. ಕೂಡಲೇ ಭೀಮನು ಸ್ವಲ್ಪ ದೂರ ಹೋಗಿ, ತನ್ನ ಉತ್ತರೀಯದಲ್ಲಿ ಕಮಲ ಪತ್ರವನ್ನಿಟ್ಟು, ಅದರಲ್ಲಿ ನೀರನ್ನು ತಂದನು. ಅಷ್ಟರಲ್ಲಿ ಅವರು ನಿದ್ರಿಸಿರುವುದನ್ನು ದೂರದಿಂದಲೇ ಕಂಡನು.

ರಕ್ಷಾರ್ಥಮೇವ ಪರಿಜಾಗ್ರತಿ ಭೀಮಸೇನೇ ।
ರಕ್ಷಃ ಸ್ವಸಾರ ಮಭಿಯೋಪಯೆತೇ ಹಿಡಿಂಬೀಂ ॥
ಸಾರೂಪಮೇತ್ಯ ಶುಭಮೇವದದರ್ಶ ಭೀಮಂ ।
ಸಾಕ್ಷಾತ್ಕಮಸ್ತ ಶುಭಲಕ್ಷಣ ಸಾರಭೂತಮ್ ॥೪೮॥

ಭೀಮಸೇನನು, ನಿದ್ರಿಸಿರುವ ತಾಯಿ ಮತ್ತು ಸಹೋದರರ ರಕ್ಷಣೆಗಾಗಿ ಜಾಗ್ರತನಾಗಿ ಕಾಯುತ್ತ ಕುಳಿತಿದ್ದನು. ಅತ್ತ ರಾಕ್ಷಸನಾದ ಹಿಡಂಬನು, ತನ್ನ ಆಹಾರಕ್ಕಾಗಿ ಅವರನ್ನು ತರಲು ಹಿಡಿಂಬಿಯನ್ನು ಕಳಿಸಿದನು. ಅವಳು ಸುಂದರ ರೂಪವನ್ನು ಧರಿಸಿ, ಸರ್ವಲಕ್ಷಣ ಯುಕ್ತವಾದ ಭೀಮಸೇನನ ಸಮೀಪಕ್ಕೆ ಬಂದಳು. (ಅವಳ ನಿಜ ರೂಪ)

**ಸಾರಾಕ್ಷಸೀತನುವಾಪ ಸುರೇಂದ್ರಲೋಕ ।**
**ಶ್ರೀರೇವ ಶಕ್ರದಯಿತಾತ್ಪ ಪರ್ಧೈವ ಶ ಚ್ಯಾಃ ॥**
**ಶಾಪಾತ್ ಸ್ಪೃಧಾಪತಿಮವಾಪ್ಯ ಚ ಮಾರುತಿಂ**
**ಸಾ ಪ್ರಾಪ್ಸ್ಯಂ ನಿಜಾಂ ತನುಮಯಾಚತ ಭೀಮಸೇನಮ್ ॥೪೯॥**

ಆ ಸ್ತ್ರೀಯು ನಿಜವಾದ ರಾಕ್ಷಸಿಯಲ್ಲ. ಅವಳು ಅಮರಾವತಿ ಸಂಪತ್ತಿಗೆ ಅಭಿಮಾನಿಯಾದ 'ಶ್ರೀ' ಎಂಬ ಅಪ್ಸರೆ. (ಸಾಕ್ಷಾತ್ ಲಕ್ಷ್ಮೀಯೂ ಅಲ್ಲ) ಒಂದು ದಿನ ಇಂದ್ರನ ಮಡದಿಯಾದ ಶಚಿಯೊಡನೆ ರೂಪದಲ್ಲಿ ಸ್ಪರ್ಧೆಗಿಳಿದಳು. ಇದನ್ನು ಕಂಡ ಶಚಿ, ನೀನು ರಾಕ್ಷಸಿಯಾಗು ಎಂದು ಶಾಪವಿತ್ತಳು. ಈಗ ಅವಳು ರಾಕ್ಷಸಿ. ಮಾರುತಿಸ ಸಂಗದಿಂದ ಪುನೀತಳಾಗಬೇಕೆಂದು ಬಂದಿದ್ದಳು.

**ತಾಂ ಭೀಮ ಆ ಹಕಮನೀಯತನುಂ ನ ಪೂರ್ವಂ ।**
**ಜ್ಯೇಷ್ಠಾ ಮಷ್ಯೆಯಿವ ನಿತಾಂತನಹಿ ಧರ್ಮವಿಷ ॥**
**ಸಾ ಚಾಹ ಕಾಮವಶಗಾ ಪುನರೇತ ದೇವ**
**ಸ್ಯಾವೇಶಯುಗ್ಧಿ ಮರುದಗ್ರ್ಯ ಪರಿಗ್ರಹಸ್ಯ ॥೫೦॥**

ಭೀಮಸೇನನು ಆ ಸುಂದರಿಯನ್ನು ಕುರಿತು "ಹಿರಿಯನಾದ ಅಣ್ಣ ಇದ್ದಾಗ ನಾನು ಮೊದಲು ಮದವೆಯಾಗುವುದು ಸರಿಯಲ್ಲ. ಅದು ಧರ್ಮವೂ ಅಲ್ಲ" ಎಂದು ಹೇಳಿದರೂ ಬಿಡಲಿಲ್ಲ. ಮೇಲುನೋಟಕ್ಕೆ ಆಕೆ ಕಾಮವಶಳಾದಂತೆ ಕಂಡರೂ, ಆಕೆಯಲ್ಲಿ ಭಾರತಿದೇವಿಯರ ಆವೇಶವಿದ್ದಿತು. ಕಾರಣ ಪರಿಗ್ರಹಿಸಲು ಮತ್ತೊಮ್ಮೆ ಪ್ರಾರ್ಥಿಸಿದಳು.

**ಅವಳಲ್ಲಿ ಭಾರತಿದೇವಿಯರ ಆವೇಶ ಬರಲು ಕಾರಣ!**

**ಸಾ ಭಾರತೀ ವರಮಿಮಂ ಪ್ರದದಾವ ಮುಷ್ಯೆ, ।**
**ಸ್ವಾದೇಶಮಾತ್ಮ ದಯಿತಸ್ಯಚ ಸಂಗಮೇನ ।**
**ಶಾಪಾದ್ವಿಮುಕ್ತಿಮತೀವ್ರತಪಃ ಪ್ರಸನ್ನಾ ।**
**ತೇನಾಹಸಾ ನಿಜತನುಂ ಪವಮಾನ ಸೂನೋಃ ॥೫೧॥**

ಶಚಿಯಿಂದ ಶಾಪ ಬಂದ ಕೂಡಲೇ, ಆ ಅಪ್ಸರೆಯು, ಭಾರತಿದೇವಿಯರನ್ನು ಕುರಿತು ಕಠಿಣವಾದ ತಪಸ್ಸಾನ್ನಾಚರಿಸಿದಳು. ಅದರಿಂದ ಸಂತುಷ್ಟಳಾದ ಭಾರತಿ ತನ್ನ ಆವೇಶಯುಕ್ತವಾದ ಸನ್ನಿಧಾನವನ್ನು ನೀಡಿದಳು. ಮತ್ತು ವಾಯುಪುತ್ರನಾದ ಭೀಮಸೇನ ನನ್ನು ವರಿಸುವಂತೆ ವರವನ್ನಿತ್ತಳು. ಅದರಿಂದ ನಾನು ಶಾಪದಿಂದ ಮುಕ್ತಳಾಗುವೆನು ಎಂದು ಬಗೆದು ಮೂಲರೂಪದಿಂದ ಭೀಮನನ್ನು ಕಂಡು ಮದುವೆಗಾಗಿ ಪ್ರಾರ್ಥಿಸಿದಳು.

ಇಷ್ಟಾದರೂ ಭೀಮನು ಮಣಿಯಲಿಲ್ಲ. ಆಗ,

ಜ್ಞಾನಂಚನೈಜ ಮಭಿದರ್ಶಯಿತುಂ ಪುನಶ್ಚ ।
ಪ್ರಾಹೇಶ್ವರೋಽಖಿಲ ಜಗದ್ಗುರುರಿಂದಿರೇಶಃ ॥
ವ್ಯಾಸಸ್ವರೂಪ ಇಹಚೇತ್ಯ ಪರಶ್ವ ಏವ ।
ಮಾಂ ತೇ ಪ್ರದಾಸ್ಯತಿ ತದಾ ಪ್ರಕರೋಷಿಮೇಽರ್ಥ್ಯಮ್ ॥೫೨॥

ತನ್ನ ಬಗೆಗೆ ನಿಜವಾದ ತಿಳುವಳಿಕೆಯನ್ನು ನೀಡಲು, ಜಗತ್ತಿಗೆ ಶ್ರೇಷ್ಠವಾದ ಇಂದಿರಾಪತಿಯು, ವ್ಯಾಸರೂಪದಿಂದ ನಾಳೆಯೇ ಇಲ್ಲಿಗೆ ಬರುತ್ತಾರೆ. ಅವರೇ ನನ್ನನ್ನು ನಿನಗೆ ಕೊಟ್ಟು ಮದುವೆ ಮಾಡುವರು. ಆಗ ನೀವೇ ನನ್ನ ಇಷ್ಟವನ್ನು ಪೂರ್ತಿ ಮಾಡುವಿರಿ ಎಂದು ಹೇಳಿ ನಿಂತುಬಿಟ್ಟಳು.

ಕಾಲೇ ತದೈವ ಕುಪಿತಃ ಪ್ರಿಯಯೌ ಹಿಡಿಂಬೋ
ಭೀಮಂ ನಿಹಂತುಮಪಿ ತಾಂಚನಿಜಸ್ವಸಾರಂ ॥
ಭಕ್ಷಾರ್ಥಮೇವಹಿಪುರಾ ಸತುತ್ಸಾಂನ್ಯಯುಂಕ್ತ ।
ನೇತುಂಚತಾನಥ ಸಮಾಸದದಾಶು ಭೀಮಮ್ ॥೫೩॥

ಆ ಸಮಯಕ್ಕೆ ಸರಿಯಾಗಿ ಕುಪಿತನಾದ ಹಿಡಿಂಬನು ಓಡಿಬಂದನು. ಅವನು ಭೀಮನನ್ನು ಜೊತೆಯಲ್ಲಿ ತನ್ನ ತಂಗಿಯಾದ ಹಿಡಿಂಬಿಯನ್ನೂ ಕೊಲ್ಲಲು ಸಿದ್ಧನಾದನು. ಏಕೆಂದರೆ, ಆ ಪಾಂಡವರನ್ನು ತಿನ್ನಲು ತರಬೇಕೆಂದು ಹಿಡಿಂಬಿಯನ್ನೇ ಯೋಚಿಸಿ ಕಳಿಸಿದ್ದನಲ್ಲವೇ?

ಸಾ ಭೀಮಮೇವ ಶರಣಂ ಪ್ರಜಗಾಮ ।
ತಾಂಚ ಭ್ರಾತೃಂಶ್ಚ ಮಾತರಮಥಾ ವಿತು ಮಭ್ಯಯೊತ್ತಂ ॥
ಭೀಮಃ ಸುದೂರ ಮಪಕೃಷ್ಯ ಸಹೋದರಾಣಾಂ ।
ನಿದ್ರಾಪ್ರಭಂಗ ಭಯತೋಽಯುಯುಧೇಽಮುನಾಚ ॥೫೪॥

ಈಗ ಆ ಹಿಡಿಂಬಿಯು ಭೀಮನಿಗೇ ಶರಣಾಗತಳಾದಳು. ಅವಳನ್ನು ಸಹೋದರರನ್ನು, ತಾಯಿಯನ್ನು ರಕ್ಷಿಸಲೆಂದು ಭೀಮನು ಹಿಡಿಂಬನಿಗೆ ಎದುರಾದನು. ಆದರೂ ಸಹೋದರರಿಗೆ ನಿದ್ರಾಭಂಗವಾಗಬಾರದೆಂದು ಆ ರಾಕ್ಷಸನನ್ನು ಬಹುದೂರ ಎಳೆದು ಕೊಂಡು ಹೋಗಿ ಯುದ್ಧಕ್ಕೆ ಸಿದ್ಧನಾದನು.

ತೌ ಮುಷ್ಟಿಭಿಸ್ತರು ಭರಶ್ನಭಿರದ್ರಿಭಿಶ್ಚ ।
ಯದ್ವಾ ನಿತಾಂತರವತಃ ಪ್ರತಿಬೋಧಿತಾಂ ಸ್ತಾನ್ ॥
ಸಂಚಕ್ರತುಸ್ತದನು ಸೋದರ ಸಂಭ್ರಮಂತಂ ।
ದೃಷ್ಟ್ವೈವ ಮಾರತಿರಹನ್ನುರಸಿಸ್ಮರಕ್ಷಃ ॥೫೫॥

ಆ ಇಬ್ಬರು (ಹಿಡಿಂಬ ಹಾಗೂ ಭೀಮ) ಮೊದಲು ಮುಷ್ಟಿಯಿಂದ, ನಂತರ ಗಿಡಗಳಿಂದ, ಆ ಮೇಲೆ ಬೆಟ್ಟಗಳಿಂದ ಕೊನೆಗೆ ಕಲ್ಲುಗಳ್ನು ತೂರಾಡಿ ಯುದ್ಧ ಮಾಡಿದರು.

ಯುದ್ಧದ ಸಂದರ್ಭದಲ್ಲಿ ಗಟ್ಟಿಯಾಗಿ ಕೂಗಿದ್ದನ್ನು ಕೇಳಿ, ಸಹೋದರರು ಎಚ್ಚೆತ್ತರು. ಗಾಬರಿಯಾದರು. ಭೀಮನು ಅವರ ಭಯವನ್ನು ಕಂಡನು. ಕೂಡಲೇ ಆ ರಾಕ್ಷಸನ ಎದೆಗೆ ಗಟ್ಟಿಯಾಗಿ ಹೊಡೆದನು.

**ತದ್ಭೀಮ ಬಾಹುಬಲ ತಾಡಿತ ಮೀಶವಾಕ್ಯಾ ।**
**ತ್ಸರ್ವೈರಜೇಯಮಪಿ ಭೂಮಿತತೀ ಪಪಾತ ॥**
**ವಕ್ತ್ರ ಪ್ರವದ್ಬಹುಲ ಶೋಣಿತಮಾಪ ಮೃತ್ಯುಂ ।**
**ಪ್ರಾಯಾತ್ತಮೋಂಧಮಪಿ ನಿತ್ಯಮಥ ಕ್ರಮೇಣ ॥೫೬॥**

ಆ ಹಿಡಿಂಬನು, ಮಹಾರುದ್ರದೇವರಿಂದ 'ಸರ್ವರಿಂದಲೂ ಅಜೇಯ' ಎಂಬ ವರವನ್ನು ಪಡೆದಿದ್ದರೂ, ಭೀಮನ ಬಾಹುಬಲ ಹಾಗೂ ಸಾಮರ್ಥ್ಯಕ್ಕೆ ಮಣಿದು, ಹೊಡೆತ ತಿಂದು ಭೂಮಿಯ ಮೇಲೆ ಬಿದ್ದನು. ಮುಖದಿಂದ ರಕ್ತ ಸುರಿಯಹತ್ತಿತು. ಮೃತ್ಯುವನ್ನೂ ಅಪ್ಪಿದನು. ಕ್ರಮೇಣ ಅವನಿಗೆ ಅಂಧಂತಮಸ್ಸೂ ಆಯಿತು.

**ಹತ್ವೈವಶರ್ವವರ ರಕ್ಷಿತ ರಾಕ್ಷಸಂ ತಂ ।**
**ಸರ್ವೈರವಧ್ಯಮಪಿ ಸೋದರ ಮಾತೃಯುಕ್ತ:॥**
**ಭೀಮೋಯಯೌ ತದನುಸಾ ಪ್ರಯಯೌ ಹಿಡಿಂಬೀ ।**
**ಕುಂತೀಂ ಯುಧಿಷ್ಠಿರ ಮಥಾಸ್ಯ ಕೃತೇಯಯಾಚೇ ॥೫೭॥**

ಮಹಾರುದ್ರದೇವರಿಂದ ಅಜೇಯ ವರ ಪಡೆದ ಆ ರಾಕ್ಷಸನನ್ನು ಭೀಮನು ಕೊಂದನು. ನಂತರ ಸಹೋದರರನ್ನು ಮಾತೆಯನ್ನು ಕೂಡಿಕೊಂಡು ಮುಂದೆ ನಡೆದನು. ಆಗಲೂ ಆ ಹಿಡಿಂಬಿ ಅವರ ಹಿಂದೆಯೇ ನಡೆದಳು. ಭೀಮನಿಂದ ತನ್ನ ಇಚ್ಛೆಯ ಪೂರ್ತಿಗಾಗಿ ಕುಂತಿ ಮತ್ತು ಧರ್ಮರಾಜನನ್ನೂ ಯಾಚಿಸಿದಳು.

**ತಾಭ್ಯಾಮನೂಕ್ತಮಪಿಯನ್ನ ಕರೋತಿ ಭೀಮ: ।**
**ಪ್ರಾದುರ್ಬಭೂವ ನಿಖಿಲೋರು ಗುಣಾಭಿ ಪೂರ್ಣ: ॥**
**ವ್ಯಾಸಾತ್ಮಕೋ ಹರಿದನಂತ ಸುಖಾಂಬುರಾಶಿ**
**ರ್ವಿದ್ಯಾಮರೀಚಿ ವಿತತ: ಸಕಲೋತ್ತಮೋಽಲಮ್ ॥೫೮॥**

ಕುಂತಿ ಮತ್ತು ಧರ್ಮರಾಜನ ಮಾತುಗಳನ್ನು ಭೀಮನು ಕೇಳದಿರುವಾಗ, ಸಕಲ ಲೋಕಕ್ಕೆ ಶ್ರೇಷ್ಠನು, ಜ್ಞಾನಾದಿಗಳಿಂದ ಪೂರ್ಣನು, ಅನಂತ ಸುಖಗಳಿಗೆ ಆಗರನಾದವನು, ವಿದ್ಯೆಗಳೆಂಬ ಕಿರಣಗಳಿಂದ ಸೂರ್ಯನಂತೆ ಶೋಭಿಸುವವನು, ಆದ ಸಾಕ್ಷಾತ್ ಶ್ರೀಹರಿಯೇ ವ್ಯಾಸರೂಪದಿಂದ ಪ್ರಕಟನಾದನು.

**ದೃಷ್ಟ್ವೈವ ತಂ ಪರಮಮೋದಿನ ಆಶುಪಾರ್ಥಾ ।**
**ಮಾತ್ರಾ ಸಹೈವ ಪರಿಪೂಜ್ಯ ಗುರುಂ ವಿರಿಂಚೇ ॥**
**ಉಲ್ಲಾಲಿ ತಾಶ್ಚ ಹರಿಣಾ ಪರಮಾತಿ ಪಾರ್ದಪ್ರೋತ್ಫುಲ್ಲ ।**
**ಪದ್ಮ ಧಯೇನೇನ ತದೋಪವಿಷ್ಟಾ: ॥೫೯॥**

ಆಗ ತಾಯಿಯೊಡಗೂಡಿದ ಎಲ್ಲ ಪಾಂಡವರು ಬ್ರಹ್ಮನ ಗುರುವಾದ ವ್ಯಾಸರನ್ನು ಕಂಡು ಹರ್ಷಚಿತ್ತರಾದರು. ಅವರನ್ನು ಭಕ್ತಿಪೂರ್ವಕವಾಗಿ ಸತ್ಕರಿಸಿದರು. ಅದಕ್ಕೆ ಸಂತುಷ್ಟರಾದ ವ್ಯಾಸರು, ಅವರ ಕೃಪಾದೃಷ್ಟಿಗೆ ಪಾತ್ರರಾದ ಪಾಂಡವರು ಹತ್ತಿರದಲ್ಲಿಯೇ ಕುಳಿತುಕೊಂಡರು.

**ತಾನ್ಭಕ್ತಿನಮ್ರಶಿರಸಃ ಸಮುಂದೀಕ್ಷ್ಯ ಕೃಷ್ಣೋ ।**
**ಭೀಂಜಗಾದನತ ಆಶು ಹಿಡಿಂಬಯೋಚ ॥**
**ಏತಾರ ಗೃಹಾಣಯುವತೀಂ ಸುರಪದ್ಮ ಶೋಭಾಂ ।**
**ಜಾತೇ ಸುತೇಸಹಸುತಾ ಪ್ರತಿಯೊತು ಚೈಷಾ** ॥೬೦॥

ಆಗ ಹಿಡಿಂಬಿಯೂ ಬಂದು ನಮಸ್ಕರಿಸಿದಳು. ವ್ಯಾಸರು ಭಕ್ತಿಯಿಂದ ಶಿರಬಾಗಿದ ಪಾಂಡವರನ್ನೂ ಕಂಡರು. ಭೀಮನನ್ನು ಕರೆದು "ಅಮರಾವತಿ ಸಂಪತ್ತಿಗೆ ಅಲಂಕಾರ ಭೂತಳಾದ, ಈ ತರುಣಿಯನ್ನು ನೀನು ಮದುವೆಯಾಗು. ಒಬ್ಬ ಮಗನಾದ ಕೂಡಲೇ ಈಕೆ ತನ್ನ ಮಗನೊಂದಿಗೆ ಹೊರಟುಹೋಗುತ್ತಾಳೆ" ಎಂದರು.

**ಏವಂ ಬ್ರುವತ್ಯ ಗಣಿತೋರುಗುಣೇರಮೇತೇ ।**
**ಓಮಿತ್ಯುದೀರ್ಯ ಕೃತವಾಂಶ್ಚ ತಥೈವ ಭೀಮಃ ॥**
**ಸ್ಕಂಧೇನ ಚೋಹ್ಯವಿಬುಧಾ ಚರಿತ ಪ್ರದೇಶಾನ್ಭೀಮಂ**
**ಪ್ರಿಯಾತ್ಯುದಯೆ ಏವರವೇರ್ಹಿಡಿಂಬೀ** ॥೬೧॥

ಆಗಣಿತ ಗುಣಗಳಿಂದ ಕೂಡಿದ ಇಂದಿರೇಶನು ಈ ರೀತಿ ಹೇಳಿದುದನ್ನು ಕೇಳಿ, ಭೀಮನು 'ಓಂ' ಎಂದು ಒಪ್ಪಿಗೆಯನ್ನಿತ್ತು (ಹಾಗೇ ಆಗಲಿ ಎಂದು ಹೇಳಿ) ಮದುವೆ ಯಾದನು. ದಿನಾಲು ಹಿಡಿಂಬಿಯು ಭೀಮನನ್ನು ಸೂರ್ಯೋದಯವಾದ ಕೂಡಲೇ ಹೆಗಲಮೇಲೆ ಹೊತ್ತು ದೇವತೆಗಳಿಗೆ ಸಂಚಾರಕ್ಕೆ ಯೋಗ್ಯವಾದ ಉದ್ಯಾನಗಳಿಗೆ ಹೋಗುತ್ತಿದಳು.

**ಸಾನಂದನಾದಿಷು ವನೇಷು ವಿಹೃತ್ಯತೇನ ।**
**ಸಾಯೆಂ ಪ್ರಯ್ಯಾತಿ ಪೃಥಯಾ ಸಹಿತಾಂಶ್ಚ ಪಾರ್ಥಾನ್ ॥**
**ಏವಂ ಯಯೊಾವಪಿ ತಯೋರಿಹ ವತ್ಸರಾರ್ಧೋ ।**
**ಜಾತಶ್ಚಸೂನು ರತಿವೀರ್ಯಬಲೋಪಪನ್ನಃ** ॥೬೨॥

ಆ ಹಿಡಿಂಬಿಯು ನಂದನವನ, ಇನ್ನಿತರ ಸುಂದರ ವನಗಳಲ್ಲಿ ಭೀಮನಿಂದ ವಿಹರಿಸಿ ಕೂಡಿಕೊಂಡು (ಓಡಾಡಿ) ಸಂಜೆಯ ಹೊತ್ತಿಗೆ ಕುಂತಿ ಮತ್ತು ಪಾಂಡವರು ಇದ್ದ ಸ್ಥಳಕ್ಕೆ ಹಿಂದಿರುಗುತ್ತಿದ್ದಳು. ಈ ರೀತಿ ಆರು ತಿಂಗಳ ಕಾಲ ಉರುಳಿತು. ಅವರಿಗೆ ಪರಾಕ್ರಮಿ ಮತ್ತು ವೀರನಾದ ಮಗನು ಹುಟ್ಟಿದನು.

**ದೇವೋಽಪಿ ರಾಕ್ಷಸತನುರ್ನಿರ್ಯತಿಃ ಪುರಾಯ ।**
**ಆವೇಶಯುಕ್ತ ಗಿರಿಶಸ್ಯ ಘಟೋತ್ ಕಚಾಖ್ಯಃ ॥**
**ಪೂರ್ವಂ ಘಟೋಽಪ ಮಮುಷ್ಯ ಶಿರೋಬಭೂವ ।**
**ಕೇಶಾ ನಿಮೇಷತ ಉದಾಸುರತೋಽಹಿ ನಾಮ** ॥೬೩॥

ಪೂರ್ವದಲ್ಲಿ ದೇವತೆಯಾಗಿದ್ದೂ, ರಾಕ್ಷಸ ತನುವಿನಲ್ಲಿದ್ದ 'ನಿರ್ಋತಿ' (ನೈಋತ್ಯ ದಿಕ್ಕಿಗೆ ಅಧಿಪತಿ) ಇಂದು ಗಿರೀಶನ ಆವೇಶದಿಂದ ಕೂಡಿ ಹುಟ್ಟಿದ್ದಾನೆ. ಅವನಿಗೆ ಹುಟ್ಟಿದಾಗ ಗಡಿಗೆ (ಮಡಿಕೆ) ಯಂತೆ ತಲೆ ದೊಡ್ಡದಾಗಿದ್ದಿತು. ಕೂದಲಿಲ್ಲ. ಹುಟ್ಟಿದ ಕೆಲವೇ ನಿಮಿಷಗಳಲ್ಲಿ ದಟ್ಟವಾದ ಕೂದಲು ಬೆಳೆದವು. ಆ ಕಾರಣದಿಂದ ಆ ಮಗುವಿಗೆ 'ಘಟೋತ್ಕಚ' ಎಂದೇ ಕರೆದರು.

**ಜಾತೇ ಸುತೇ ಸಮಯತೋ ಭಗವತ್ಕೃತಾತ್ಸ ।**
**ಭೀಮೋ ಜಗಾದ ಸಸುತಾಂ ಗಮನಾಯ ತಾಂ ಚ ॥**
**ಸ್ಮೃತ್ಯಾಭಿಯಾನ ಉಭಯೋರಪಿ ಸಾಪ್ರತಿಜ್ಞಾಂ ।**
**ತೇಷಾಂ ವಿಧಾಯೆಚ ಯಯೌ ಸುರಲೋಕಮೇವ ॥೬೪॥**

ಮಗನು ಹುಟ್ಟಿದ ಕೂಡಲೇ, ಹಿಡಿಂಬೆಯು ವೇದವ್ಯಾಸರ ವಾಕ್ಯದಂತೆ ಮಗನೊಂದಿಗೆ ಹೊರಡಲು ಸಿದ್ಧಳಾದಳು. ಆಗ ಭೀಮನು, ಸ್ಮರಿಸಿದ ಮಾತ್ರದಲ್ಲಿ ನೀವಿಬ್ಬರು (ತಾಯಿ+ಮಗ) ಬರಬೇಕು ಎಂದು ಆಜ್ಞಾಪಿಸಿದರು. ಅದಕ್ಕೆ ಹಿಡಿಂಬಿಯು ಅದೇ ರೀತಿಯಾಗಿ ಅವರೆದುರು ಪ್ರತಿಜ್ಞೆಗೈದು ದೇವಲೋಕಕ್ಕೆ ತೆರಳಿದಳು.

**ವಿ. ವಿ. :** ಮೇಲಿನ ಘಟನೆಯನ್ನು ಓದಿದಾಗ ಓದುಗರ ಮನದಲ್ಲಿ ಕೆಳವು ವಿಚಾರಗಳು ಹೊಳೆಯುವದು ಸಹಜ.

೧) ಪಾಂಡವರು ದೇವತೆಗಳು. ಸದ್ಯ ಮಾನವರು ಹಿಡಿಂಬಿ, ಹಿಡಿಂಬನ ತಂಗಿ ರಾಕ್ಷಸಿ. ಇವರಲ್ಲಿ ವಿವಾಹ ಸಾಧ್ಯವೇ? ಅಂತರ್ಜಾತಿ ವಿವಾಹವೇ?

೨) ಭೀಮನು ಮೊದಲು ನಿರಾಕರಿಸಿದ, ಅಣ್ಣನಿಗಿಂತಲೂ ಮೊದಲು 'ವಿವಾಹ' ಅಧರ್ಮ. ಅದು ಅಶಕ್ಯ ಎಂದು ಹೇಳಿದ. ಪುನಃ ಮದುವೆಯಾದ. ಅಧರ್ಮವಾಗಲಿಲ್ಲವೇ?

೩) ಆರು ತಿಂಗಳಿಗಾಗಿಯೇ ವಿವಾಹವೇ? ಅದು ಧರ್ಮಸಮ್ಮತವೇ?

೪) ಈ ಘಟನೆಯ ಹಿನ್ನೆಲೆಯಾದರೂ ಏನು?

ನಿಜ. ಪ್ರಜ್ಞಾವಂತ ಓದುಗರಲ್ಲಿ ಇಂತಹ ಪ್ರಶ್ನೆಗಳು ಏಳುವುದು ಸಹಜ.

೧) ಮೊದಲನೆಯ ಪ್ರಶ್ನೆಗೆ ಶ್ರೀಮದಾಚಾರ್ಯರೇ ಸ್ಪಷ್ಟವಾಗಿ ಉತ್ತರಿಸಿದ್ದಾರೆ. ಹಿಡಿಂಬಿಯ ಪೂರ್ವವೃತ್ತಾಂತವನ್ನು ತಿಳಿಸಿದ್ದಾರೆ. ಅವಳು ರಾಕ್ಷಸಿಯಲ್ಲ ಎಂದು ಖಚಿತ ಪಡಿಸಿ ರಾಕ್ಷಸ ಜನ್ಮಕ್ಕೆ ಕಾರಣಗಳೂ ಇತ್ತಿದ್ದಾರೆ. (ಇಂತಹ ಘಟನೆಗಳು ಪುರಾಣಗಳಲ್ಲಿ ಸಿಗುವುದುಂಟು) ಹಿಡಿಂಬಿಯು ಭಾರತಿದೇವಿಯರನ್ನು ತಪಸ್ಸಿನಿಂದ ಒಲಿಸಿ, ಅವರ ಅನುಗ್ರಹ ಪಡೆದಿದ್ದಾಳೆ. ಭಾರತಿದೇವಿಯ ಅಂಶದಿಂದೊಡಗೂಡಿ ಹುಟ್ಟಿದ್ದಾಳೆ. ಅಂತೆಯೇ ಅವರು ಭೀಮರಿಗೆ ಮಾತ್ರ ಮದುವೆಯಾಗಲು ಕೇಳಿದ್ದಾಳೆ. ಇಂಥ ವಿಚಾರಗಳನ್ನು ಶ್ರೀಮದಾಚಾರ್ಯರ ಹೊರತು ಸರ್ವಜ್ಞರಾದ ಶ್ರೀ ವೇದವ್ಯಾಸರು ಇದೆಲ್ಲವನ್ನು ಬಲ್ಲವರಾಗಿದ್ದರು. ಅಂತೆಯೇ ಭೀಮನಿಗೆ ವಿವಾಹಕ್ಕಾಗಿ ಒತ್ತಾಯಿಸಿದ್ದಾರೆ.

ಭಿಕ್ಷಾಮಟೆತ್ಸು ಸತತಂ ಪ್ರತಿಹುಂಕೃತೇನ ।
ಭೀಮೋವಿಶಾಂ ಸದನ ಏವ ಗೃಹ ಪ್ರಮಾಣಂ ॥
ಭಾಂಡಂ ಕುಲಾಲವಿಹಿತಂ ಪ್ರತಿಗೃಹ್ಯಗಚ್ಛ ।
ತ್ಯಾಶಂಕಯೊವಗ ಮನಸ್ಕ ತಮಾಹಧರ್ಮಃ ॥೬೭॥

ಭೀಮನು ಯಾವಾಗಲೂ ಭಿಕ್ಷೆ ಬೇಡಲು ಹೋಗುತ್ತಿದ್ದನು. ಕುಂಬಾರನು ಇತ್ತ, ವಿಶಾಲ ಮಡಿಕೆಯನ್ನು ಹಿಡಿದು ಪ್ರತಿ ಮನೆಯ ಮುಂದೆ ಹುಂಕಾರ ಮಾಡುತ್ತಿದ್ದನು. ಭೀಮನು ಬಂದ ಸುಳಿವು ದೊರೆತ ಕೂಡಲೇ, ಜನರು ಅಂಜಿ ಭಿಕ್ಷೆ ತರುತ್ತಿದ್ದರು.ಇವನು ಭೀಮನೆಂಬ ಶಂಕೆ ಬಾರದಿರಲಿ ಎಂದು ಧರ್ಮನು ಹೀಗೆ ಹೇಳಿದನು.

ಸ್ಥೂಲಂಹಿಸದ್ಮ ಪೃಥಿವೀ ಸಹಿತಂ ತ್ವರಕ್ಷ ।
ಉದ್ಧೃತ್ಯವಹ್ನಿ ಮುಖತಸ್ತು ತದೇಕದೋಷ್ಣಾ ॥
ಭಾಂಡಂತದರ್ಥಮುರುಕುಂಬಕರೇಣ ದತ್ತಂ ।
ಭಿಕ್ಷಾಂಚ ತೇನಚರಸಿ ಪ್ರತಿ ಹುಂಕೃತೇನ ॥೬೮॥

ಎಲೈ ಭೀಮ! ಕುಂಬಾರನ ಮನೆಗೆ ಬೆಂಕಿ ಹತ್ತಿದಾಗ, ನೀನು ಒಂದೇ ಕೈಯಿಂದ, ಮನೆಯ ಸಹಿತವಾಗಿ ಅಲ್ಲಿ ಭೂಮಿಯನ್ನೇ ಮೇಲೆತ್ತಿ ಮನೆಯನ್ನು ಅಗ್ನಿಯ ಮುಖದಿಂದ ರಕ್ಷಿಸಿದಿ. ಆ ಕಾರಣಕ್ಕಾಗಿ ಕುಂಬಾರನು ನಿನಗೆ ಇಂಥ ಮಡಿಕೆಯನ್ನು ಕೊಟ್ಟಿದ್ದಾನೆ. ಆ ಪಾತ್ರೆಯನ್ನು ಹಿಡಿದು ನೀನು ಹೊಂಕರಿಸುತ್ತ ಭಿಕ್ಷೆಯನ್ನು ಬೇಡುತ್ತಿ.

**ವಿ. ವಿ. :** ಈ ಒಂದು ಶ್ಲೋಕದಲ್ಲಿ ಶ್ರೀಮದಾಚಾರ್ಯರು, ಧರ್ಮರಾಜನ ಮುಖದಿಂದ, ಭೀಮನ ಬಲ ಪರೋಪಕಾರ ಬುದ್ಧಿ ಮತ್ತು ಧರ್ಮನಿಷ್ಠೆ ಇತ್ಯಾದಿಗಳನ್ನು ಹೊರತಂದಿದ್ದಾರೆ.

ಧರ್ಮಸ್ಯತೇಸುನಿಯತೇರ್ಬಲತಶ್ಚ ಬೋಧೋ ।
ಭೂಯಾತ್ಸುಯೋಧನ ಜನಸ್ಯ ತತೋಭಯಂ ಮೇ ॥
ಮಾತ್ರಾಸಹೈವ ವಸಫಲ್ಗುನ ಪೂರ್ವಕೈಸ್ತ್ವ ।
ಮಾನೀತ ಮೇವ ಪರಿಭುಂಕ್ಷ್ವ ನತು ವ್ರಜೇಥಾಃ ॥೬೯॥

"ನಿನ್ನ ಧರ್ಮನಿಷ್ಠೆ, ಅದನ್ನು ಬಿಡದಿರುವ ಸ್ವಭಾವ ಮತ್ತು ಸಾಮರ್ಥ್ಯ, ಇವು ದುರ್ಯೋಧನನು ತನ್ನ ಜನರ ಮೂಲಕ ಅರಿಯುವನೆಂಬ ಭಯವು ನನಗಿದೆ. ಕಾರಣ ನೀನು ತಾಯಿಯ ಜೊತೆಯಲ್ಲಿಯೇ ಮನೆಯಲ್ಲಿದ್ದು ಬಿಡು. ಅರ್ಜುನನೇ ಮೊದಲಾದ ಇತರ ಸಹೋದರರು ತಂದದ್ದನ್ನೇ ಸೇವಿಸುತ್ತ ಹಾಯಾಗಿರು. ನೀನು ಹೋಗಲೇಬೇಡ" ಎಂದು ಧರ್ಮರಾಜನು ಭೀಮನಿಗೆ ಬುದ್ಧಿವಾದವನ್ನು ಹೇಳಿದನು.

ಇತ್ಯುಕ್ತ ಆಶುಸಚಕಾರ ತಥೈವ ಭೀಮಸ್ತೇಽಪಿ ।
ಸ್ವಧರ್ಮ ಪರಿರಕ್ಷಣ ಹೇತು ಮೌನಾಃ ॥
ಭಿಕ್ಷಾಂ ಚರಂತ್ಯಥ ಚತುರ್ಷ್ವಪಿ ತೇಷುಯಾತೇ ।
ಕ್ವೇಕತ್ರ ಮಾತೃಸಹಿತಃ ಸಕದಾಚಿದಾಸ್ತೇ ॥೭೦॥

ಧರ್ಮರಾಜನು ಹಾಗೆ ಹೇಳಿದಾಗ ಭೀಮನು 'ಹಾಗೇ ಆಗಲಿ' ಎಂದು ಸುಮ್ಮನಾದನು. ತನ್ನ ಧರ್ಮದ ರಕ್ಷಣೆಗೆ ಅನುಕೂಲವಾಯಿತು ಎಂಬ ಉದ್ದೇಶದಿಂದ ಮೌನವನ್ನು ತಾಳಿದನು. ಭೀಮನನ್ನು ಬಿಟ್ಟು ನಾಲ್ಕು ಜನ ಪಾಂಡವರು ಭಿಕ್ಷೆಗಾಗಿ ನಡೆದರು. ಭೀಮನು ಮಾತ್ರ ಒಂದೇ ಸ್ಥಳದಲ್ಲಿ ತಾಯಿಯ ಜೊತೆಯಲ್ಲಿದ್ದಾನೆ.

**ವಿ. ವಿ. :** ಪರರನ್ನು ಯಾಚಿಸುವುದು ಭಾಗವತ ಧರ್ಮವಲ್ಲ.

**ತತ್ಕಾಲ ಏವರುದಿತಂ ನಿಜವಾಸಹೇತೋ ।**
**ರ್ವಿಪ್ರಸ್ಯ ದಾರಸಹಿತಸ್ಯ ನಿಶಮ್ಯ ಭೀಮಃ ॥**
**ಸ್ತ್ರೀ ಬಾಲಸಂಯುತಗೃಹೇ ಸುತಲಾಲ ನಾದೌ ।**
**ಲಜ್ಜೇದಿತಿಸ್ಮ ಜನನೀ ಮವದನ್ನ ಚಾಗಾತ್ ॥೭೧॥**

ಅದೇ ಕಾಲದಲ್ಲಿ, ಭೀಮಸೇನದೇವರು ಯಾವ ಮನೆಯಲ್ಲಿದ್ದರೊ ಆ ಮನೆ (ಯಜಮಾನ) ಬ್ರಾಹ್ಮಣ, ತನ್ನ ಹೆಂಡತಿಯೊಡನೆ ರೋದಿಸುವುದನ್ನು ಕೇಳಿದರು. ಮಕ್ಕಳಿಂದ ಕೂಡಿದ ಮನೆಯಲ್ಲಿ, ತಾಯಿಯು ಮುದ್ದಾಟವಾಡುತ್ತ ಮಕ್ಕಳಿಗೆ ಸ್ತನಪಾನ ಮಾಡಿಸುವ ಸಮಯದಲ್ಲಿ ಪರರು ಒಳಗೆ ಹೋಗಬಾರದು ಹೋದರೆಅವರು ನಾಚುತ್ತಾರೆ. ಆದಕ್ಕಾಗಿ ತಾವು ಹೋಗದೆ ತಾಯಿಗೆ ವಿಷಯ ತಿಳಿದುಕೊಂಡು ಬಾ ಎಂದು ಹೇಳಿದರು.

**ವಿ. ವಿ. :** ಭೀಮನ ಈ ಮಾತಿನಲ್ಲಿ ಭಾರತೀಯ ಸಂಸ್ಕೃತಿ ಎದ್ದು ಕಾಣುವುದಿಲ್ಲವೇ? ಸ್ತ್ರೀಯರಿಗೆ, ಬಾಲಕರಿಗೆ ಆಗಿನ ಕಾಲದಲ್ಲಿ ಯಾವ ಸ್ಥಾನವಿದ್ದಿತು ಎಂದು ವ್ಯಕ್ತವಾಗುತ್ತದೆ.

**ಜಾನೀಹಿ ವಿಪ್ರರುದಿತಂ ಇತ್ಯ ತಚ್ಚಯೋಗ್ಯಂ ।**
**ವಿಧಾಸ್ಯ ಇತಿ ಸಾಪ್ರಯಯೌ ಚಶೀಘ್ರಂ ।**
**ಸಾಸಂವ್ಯತ್ಯೈವ ಸಕಲಂ ವಚನಂ ಗೃಹೇಽಸ್ಯಶುಶ್ರಾವ**
**ವಿಪ್ರವರ ಆಹ ತದಾ ಪ್ರಿಯಾಂ ಸಃ ॥೭೨॥**

"ಆ ಬ್ರಾಹ್ಮಣನು ಯಾವ ಕಾರಣದಿಂದ ಅಳುತ್ತಾನೆಂಬುದನ್ನು ತಿಳಿದುಕೋ, ಆದಕ್ಕೆ ಪ್ರತಿಕಾರವನ್ನು ನಾನು ಮಾಡುತ್ತೇನೆ" ಎಂದು ತಾಯಿಗೆ ಹೇಳಿದನು. ಆ ತಾಯಿ ಕೂಡಲೇ ಹೋಗಿ ಮರೆಯಲ್ಲಿ ನಿಂತು ಅವರಾಡುವ ಎಲ್ಲ ಮಾತುಗಳನ್ನು ಕೇಳಿದಳು. ಆಗ ಬ್ರಾಹ್ಮಣನು ತನ್ನ ಹೆಂಡತಿಗೆ ಹೀಗೆ ಹೇಳುತ್ತಿದ್ದನು.

**ದಾತವ್ಯ ಏವಹಿ ಕರೋಽದ್ಯಬರಾಕ್ಷಸಸ್ಯ ।**
**ಸಾಕ್ಷಾದ್ಬಕಸ್ಯ ಗಿರಿಸನ್ನಿಭ ಭಕ್ಷ್ಯ ಭೋಜ್ಯಃ ।**
**ಪುಂಸಾನಸಾಚ ಸಹಿತಾ ನಡುಹಾ ಪುಮಾಂಸ್ತು ।**
**ನ್ನಿವಾಸ್ತಿ ನೋಽಪ್ರದದತಾಂಚ ಸಮಸ್ತ ನಾಶಃ ॥೭೩॥**

ಪರ್ವತಕ್ಕೆ ಸಮನಾದ ಭಕ್ಷ್ಯ, ಭೋಜ್ಯ ಪದಾರ್ಥಗಳು, ಒಂದು ಬಂಡಿಯಲ್ಲಿ ತುಂಬಿ, ಎರಡು ಎತ್ತುಗಳು ಒಬ್ಬ ಮನುಷ್ಯನ ಸಹಿತ ನಾವು ಬಕಾಸುರನಿಗೆ ಇಂದು ಕರ

(ಕಪ್ಪ) ಕೊಡಬೇಕಾಗಿದೆ. ನಮ್ಮಲ್ಲಿ ಮನುಷ್ಯನಿಲ್ಲ. ನಾವು ಮನುಷ್ಯನ ಸಹಿತ ಇಷ್ಟೆಲ್ಲ ಕೊಡದಿದ್ದಲ್ಲಿ ನಮ್ಮ ಸರ್ವನಾಶವು ಖಂಡಿತ (ಅವನು ನಮ್ಮೆಲ್ಲರನ್ನೂ ತಿಂದು ಬಿಡುವನು) ಅದಕ್ಕಾಗಿಯೇ

**ಅನ್ಯತ್ರಯೊದು ಇತಿಪೂರ್ವಮುದಾಹೃತಂ ಮೇ ।**
**ನೈತತ್ಪ್ರಿಯೇ ತವ ಮನೋಗತಮಾ ಸತೇಸ ।**
**ಯೊಸ್ಯಾಮಿ ರಾಕ್ಷಸಮುಖಂ ಸ್ವಯಮೇವ ಮರ್ತುಂ ।**
**ಭಾರ್ಯೈನ ಮಾಹ ನಭವಾನ ಹಮಿತ್ರಯೊಮಿ ॥೭೪॥**

"ಇಲ್ಲಿಂದ ನಾವು ಬೇರೆ ಕಡೆಗೆ ಹೋಗೋಣವೆಂದು ನಾನು ನಿನಗೆ ಮೊದಲೇ ಹೇಳಿದೆ, ಹೇ ಪ್ರಿಯೇ, ಆ ಮಾತು ನಿನ್ನ ಮನಸ್ಸಿಗೆ ಬರಲಿಲ್ಲ. ಈಗ ನಾನೇ ಆ ರಾಕ್ಷಸನ ಮುಖಕ್ಕೆ (ಬಾಯಿಗೆ) ಆಹುತಿಯಾಗುವೆನು" ಎಂದನು. ಅದಕ್ಕೆ ಆತನ ಹೆಂಡತಿ, ಇಲ್ಲ, ನೀವು ಹೋಗುವುದು ಬೇಡ, ನಾನೇ ಅಲ್ಲಿಗೆ ಹೋಗುತ್ತೇನೆ' ಎಂದು ಹೇಳಿದಳು.

**ಅರ್ಥೇತವಾದ್ಯತನು ಸಂತ್ಯಜನಾದ ಹಂಸ್ಯಾಂ ।**
**ಲೋಕೇಸತೀ ಪ್ರಚರಿತೇ ತದ್ಯತೇ ತ್ವಧಶ್ಚ ॥**
**ಕನ್ಯಾऽऽಹಮ್ಮೈನ ಮಹಮೇಮಿ ನಕನ್ಯಯೊರ್ಥ ।**
**ಇತ್ಯುಕ್ತ ತಿಹಧಿಗೆ ತಿಷ್ಮ ಸವಿಪ್ರವರ್ಯೆ: ॥೭೫॥**

ನಿಮಗಾಗಿ ನಾನು ಪ್ರಾಣ ತ್ಯಾಗ ಮಾಡುವುದರಿಂದ, ಸ್ತ್ರೀ ಲೋಕ ಚರಿತ್ರೆಯಲ್ಲಿ 'ಒಳ್ಳೆಯ ಸತಿ' ಎಂಬ ಹೆಸರು ಬರುತ್ತದೆ ಎನ್ನುವಾಗ ಅಲ್ಲಿಯೇ ಕುಳಿತ ಅವರ ಮಗಳು, ತಂದೆಯನ್ನು ಕುರಿತು, "ನಾನು ಕನ್ಯೆ, ನನ್ನಿಂದ ಯಾವ ಪ್ರಯೋಜನವೂ ಇಲ್ಲ ಅದಕ್ಕಾಗಿ ನಾನೇ ಹೋಗುತ್ತೇನೆ" ಎಂದಳು. ಅವರಿಬ್ಬರ ಮಾತುಗಳನ್ನು ಕೇಳಿದ ಆ ವಿಪ್ರವರ್ಯನು 'ಧಿಕ್' ಎಂದನು. ಇಂತಹ ಮಾತು ಕೇಳುವದಕ್ಕೂ ಯೋಗ್ಯವಲ್ಲ. 'ನಿಂದ್ಯ' ಎಂದನು.

**ವಿ. ವಿ. :** ಮೇಲಿನ ಶ್ಲೋಕದಲ್ಲಿ ಆಚಾರ್ಯರು ಅಂದಿನ ಕಾಲದ ಸ್ತ್ರೀ ಧರ್ಮವನ್ನು ಪರ್ಯಾಯವಾಗಿ ತಿಳಿಸಿದ್ದಾರೆ. ಸ್ತ್ರೀಯರು ಪತಿಗಳ ಮುಂದೆ ಸಾಯುವುದು ಶ್ರೇಷ್ಠ. ಅದರಿಂದ ಅವರಿಗೆ ಸ್ವರ್ಗ ಪ್ರಾಪ್ತಿ. ಅಂಥವರೇ ಪತಿವ್ರತಾ ಎಂದು ಹೆಸರು ಪಡೆಯುತ್ತಾರೆ. ಅನ್ಯಥಾ ನರಕ ನಿಶ್ಚಿತ. ಇದು ಅಂದಿನ ಕಾಲದ ನಂಬಿಕೆ. ಆ ಭಾವನೆ ಇಂದಿಗೂ ಬದುಕಿಕೊಂಡಿದೆ. ಕನ್ಯೆಯಿಂದ, (ಹೆಣ್ಣುಮಗಳು ಹುಟ್ಟಿದರೆ) ಯಾವ ಲಾಭವೂ ಇಲ್ಲ. ಈ ವಿಚಾರವೂ ಇಂದಿಗೂ ಮಾಸಿ ಹೋಗಿಲ್ಲ.

**ಅದಕ್ಕೆ ತಂದೆಯ ಉತ್ತರ ಕೇಳಿ –**

**ಕನ್ಯೋದಿತಾ ಬಲ ಕುಲದ್ವಯೆ ತಾರಿಣೇತಿ ಜಾಯೊ ।**
**ಸಚೇತಿ ವಚನಂ ಶ್ರುತಿಗಂ ಸುತಶ್ಚ ॥**
**ಆತ್ಮೈವತೇನ ನತುಜೀವನ ಹೇತೋऽಹಂ ।**
**ಧೀಪೂರ್ವಕಂ ಪ್ರಶನಕೇ ಪ್ರತಿಪಾದ್ಯಯಾಮಿ ॥೭೬॥**

ಮಗಳ ಮಾತನ್ನು ಕೇಳಿ ಬ್ರಾಹ್ಮಣನು, 'ಇಲ್ಲಮ್ಮ, ಕನ್ಯೆ ಸಾಮಾನ್ಯವಲ್ಲ. ಅವಳಿಂದ (ತಂದೆ ಮತ್ತುಗಂಡ) ಎರಡೂ ಮನೆತನಗಳ ಉದ್ಧಾರವಾಗುತ್ತದೆ. ಎರಡರ ಕೀರ್ತಿಯೂ ಹೆಚ್ಚುತ್ತದೆ' ಇದು ಶ್ರುತಿಯ ಮಾತು. ಕೆಲವು ಕಾಲದ ನಂತರ ಸತಿಯು ಸಖಿಯಾಗುತ್ತಾಳೆ. ಇದು ಧರ್ಮದ ತಿಳುವಳಿಕೆ. ಮಗನಾದರೋ ಆತ್ಮಸ್ವರೂಪ. ಕುಲದೀಪ, ವಂಶೋದ್ಧಾರಕ. ಕಾರಣ ನನ್ನ ಬದುಕಿಗಾಗಿ ಯಾರನ್ನೂ ಬಲಿಕೊಡಲಾರೆ. ನಾನು ಮೊದಲೇ ನಿರ್ಧರಿಸಿದಂತೆ ಬಕಾಸುರನಿಗೆ ನಾನೇ ಆಹುತಿಯಾಗುತ್ತೇನೆ'' ಎಂದನು.

**ಏವಂ ರುದತ್ಸು ಸಹಿತೇಷು ಕುಮಾರಕೋಽಸ್ಯ ಪ್ರಾಹ ।**
**ಸ್ವಹಸ್ತಗತ್ಕೃಣಂ ಪ್ರತಿದರ್ಶ್ಯಚೈಷಾಂ ।**
**ಏತೇನ ರಾಕ್ಷಸಮಹಂ ನಿಹನಿಷ್ಯ ಏವೇತ್ಯುಕ್ತೇ ।**
**ಸುವಾಕ್ಯ ಮನುಸಾ ಪ್ರವಿಶೇಷ ಕುಂತೀ ॥೭೭॥**

ತಂದೆ, ತಾಯಿ, ಅಕ್ಕ ಎಲ್ಲರೂ ಅಳುತ್ತಿರುವುದನ್ನು ಅಲ್ಲಿಯೇ ಕುಳಿತ ಅವರ ಮಗ ನೋಡಿದನು. ತನ್ನ ಕೈಯಲ್ಲಿ ಒಂದು ಹುಲ್ಲುಕಡ್ಡಿಯನ್ನು ಹಿಡಿದು ತೋರಿಸಿ, "ಈ ಕಡ್ಡಿಯಿಂದಲೇ ನಾನು ಆ ರಾಕ್ಷಸನನ್ನು ಕೊಲ್ಲುತ್ತೇನೆ" ಎಂದು ಹೇಳಿದನು. ಆ ವಾಕ್ಯ ಹೇಳುತ್ತಿರುವಾಗಲೇ ಅದು "ಸುವಾಕ್ಯ" ಶುಭವಾಕ್ಯವೆಂದು ಭಾವಿಸಿ ಕುಂತಿಯು ಮನೆಯಲ್ಲಿ ಪ್ರವೇಶಿಸಿದಳು.

**ವಿ. ವಿ. :** ಮೇಲಿನ ಶ್ಲೋಕದಲ್ಲಿ ಆಚಾರ್ಯರು ಒಂದು ಕೌಟುಂಬಿಕ ಚಿತ್ರ, ಪರಸ್ಪರ ಪ್ರೇಮ, ಸಹಕಾರ, ಸೌಹಾರ್ದತೆ, ಗಂಭೀರತರವಾದ ಪರಿಸ್ಥಿತಿ – ವಿವರಿಸುತ್ತ, ಮುಗ್ಧ ಮಗುವಿಗೆ ಇದು ಯಾವುದೂ ಹತ್ತುವುದಿಲ್ಲ. ಅದು ಎಲ್ಲವನ್ನೂ ಆಟದ ರೂಪದಲ್ಲಿಯೇ ಪರಿಗಣಿಸುತ್ತದೆ ಎಂಬುದನ್ನು ತಿಳಿಸಿದ್ದಾರೆ.

ಮಗುವಿನ ಸಾಮಾನ್ಯ ವಾಕ್ಯವು ಕೂಡ ಕುಂತಿ ಹೀಗೆ ಮಂಗಲಕರ ಎಂದು ಸ್ವೀಕರಿಸಿದಳು. ತನ್ನ ಮಗನು ಬಕನನ್ನು 'ತೃಣಕ್ಕೆ ಸಮ' ಎಂದು ತಿಳಿದು ಕೊಲ್ಲುತ್ತಾನೆ' ಎಂಬ ವಿಶ್ವಾಸ ಅವಳಲ್ಲಿ ಮೂಡಿಸಿತು. ಅಂಥ ಸನ್ನಿವೇಶದಲ್ಲಿ ಕುಂತಿ ಒಳಬಂದಳು.

ಚಿಕ್ಕ ಮಕ್ಕಳಲ್ಲಿ ಪರಮಾತ್ಮನ ವಿಶೇಷ ಅಂಶವಿರುತ್ತದೆ. ಕಾರಣ ಅವುಗಳಿಗೆ ಮಡಿ–ಮೈಲಿಗೆ ಇಲ್ಲ ಎನ್ನುವವರಿದ್ದಾರೆ. ಅಷ್ಟೇ ಅಲ್ಲ ಮೂಕ ರೀತಿಯಾಗಿ ಪ್ರಶ್ನೆಗಳನ್ನು ಕೇಳಿ ತೃಪ್ತಿ ಪಟ್ಟುಕೊಳ್ಳುವವರೂ ಇದ್ದಾರೆ. ಇದು ಅವರವರ ನಂಬಿಕೆ.

**ಪೃಷ್ಟಸ್ತಯಾಹ ಸತುವಿಪ್ರವರೋ ಬಕಸ್ಯವೀರ್ಯಂ ।**
**ಬಲಂಚದಿತಿ ಜಾರಿಭಿ ರಷ್ಯ ಸಹ್ಯಂ ॥**
**ಸಂವತ್ಸರತ್ರಯಯುತೇ ದಶಕೇಕರಂಚ ।**
**ಹಾರತಿ ಸ್ವಿಕಂ ದಶಮುಖಿಸ್ಯಚ ಮಾತುಲಸ್ಯ ॥೭೮॥**

ಕುಂತಿಯು, ಅವರ ಸಂಕಟ ಮತ್ತು ಅಳುವ ಕಾರಣವನ್ನು ಕೇಳಿದಳು. ಆಗ ಆ ವಿಪ್ರನು, ಬಕಾಸುರನ ಸಾಮರ್ಥ್ಯ, ಪರಾಕ್ರಮ ಬಲವನ್ನು ವಿವರಿಸುತ್ತ, ಅದು ಅಸುರರ

ವೈರಿಗಳಾದ ದೇವತೆಗಳಿಗೂ ಸಹಿಸಲು ಅಸಾಧ್ಯವಾಗಿದೆ. ಅವನು ರಾವಣನ ಸೋದರ
ಮಾವನು ಎಂದು ಹೇಳಿ, ಹದಿಮೂರು ವರ್ಷಗಳಿಂದ ಪ್ರತಿದಿನವೂ ಒಬ್ಬೊಬ್ಬರ
ಮನೆಯಿಂದ ಕೊಡತಕ್ಕ ಕಪ್ಪವನ್ನೂ ವಿವರಿಸಿದನು.

**ಶ್ರುತ್ವಾತಮುಗ್ರಬಲ ಮತ್ಯುರುವೀರ್ಯಮೇವ ।**
**ರಾಮಾಯಣೇ ರಘುವರೋರು ಶರಾತಿ ಭೀತಂ ॥**
**ವಿಷ್ಕಂಬಿಲೇ ಪ್ಯಥ ನೃಪಾನ್ವಶ ಮಾಶುಕೃತ್ವಾ ।**
**ಭೀತ್ಯೈವ ತೈಸ್ತದನು ದತ್ತಕರುನನಂದ ॥೭೯॥**

ಎಲ್ಲ ವೃತ್ತಾಂತವನು ಕೇಳಿದ ಕುಂತಿಯು, ಇದೇ ಬಕನೇ ರಾಮಾಯಣ ಕಾಲ
ದಲ್ಲಿ ರಾಮನ ತೀಕ್ಷ್ಣವಾದ ಬಾಣಗಳಿಗೆ ಭೀತನಾಗಿ ಬಿಲದಲ್ಲಿ ಅಡಗಿ ಕುಳಿತಿದ್ದನು. ಇ
ಬಕನೇ ಇಂದು ತನ್ನ ಸಾಮರ್ಥ್ಯದಿಂದ ಅನೇಕ ರಾಜರನ್ನು ಗೆದ್ದಿದ್ದಾನೆ. ಎಲ್ಲರನ್ನು ಹೆದರಿ
ಸುತ್ತಿದ್ದಾನೆ. ಬಲಾತ್ಕಾರದಿಂದ ಕಪ್ಪವನ್ನು ಪಡೆಯುತ್ತಿದ್ದಾನೆ ಎಂದು ಆಲೋಚಿಸಿ ನಕ್ಕಳು
ಏಕೆ?

**ಏವಂ ಬಲಾಢ್ಯ ಮಮುಮಾಶು ನಿಹತ್ಯ ಭೀಮಃ ।**
**ಕೀರ್ತಿಂಚ ಧರ್ಮಮಧಿಕಂ ಪ್ರತಿಯೊಸ್ಯ ತೀಹ ॥**
**ಸರ್ವೇವಯಂ ಚ ತಮನುಪ್ರಗೃಹೀತ ಧರ್ಮಾ ।**
**ಯಾಸ್ಯಾಮ ಇತ್ಯವದದಾಶು ಧರಾಸುರಂ ತಮ್ ॥೮೦॥**

ಇಂತಹ ಬಲಾಢ್ಯನಾದ ಬಕನನ್ನು ಕೊಂದು ಭೀಮನು ಕೀರ್ತಿಯನ್ನು
ಪುಣ್ಯವನ್ನು ಸಂಪಾದಿಸುವನು. ಈ ಕಾರ್ಯದಲ್ಲಿ ಸಹಕರಿಸಿದ ನಮಗೆಲ್ಲರಿಗೂ ತಕ
ಮಟ್ಟಿಗೆ ಪುಣ್ಯ ಪ್ರಾಪ್ತವಾಗುವುದು, (ಅರ್ಹತೆಗೆ ತಕ್ಕಂತೆ) ಎಂದು ಆಲೋಚಿಸಿ ಇ
ಭೂಸರನಿಗೆ (ವಿಪ್ರನಿಗೆ) ಈ ರೀತಿ ನುಡಿದಳು.

**ಸಂತಿಸ್ಮ ವಿಪ್ರವರ ಪಂಚಸುತಾ ಮಮಾದ್ಯ ।**
**ತೇಷ್ವೇಕ ಏವ ನರವೈರಿ ಮುಖಾಯ ಮಾತು ॥**
**ಇತ್ಯುಕ್ತ ಆಹಸನತೇಸುತವಧ್ಯಯಾಹಂ ।**
**ಪಾಪೋಭವಾಮಿ ತವಹಂತ ಮನೋಽತಿಧೀರಮ್ ॥೮೧॥**

"ಹೇ ವಿಪ್ರವರರೇ! ನನಗೆ ಐದು ಜನ ಮಕ್ಕಳಿದ್ದಾರೆ. ಅವರಲ್ಲಿ ಒಬ್ಬನನ್ನು ಈ
ನರವೈರಿಯಾದ ರಾಕ್ಷಸನ ಬಾಯಿಗೆ (ಬಲಿಯಾಗಿ) ಕೊಡುತ್ತೇನೆ" ಎಂದು ಕುಂ
ಹೇಳಿದಾಗ, "ಇನ್ನೊಬ್ಬರ ಮಗನನ್ನು ಕೊಂದು ನಾನು ಪಾಪಕ್ಕೆ ಗುರಿಯಾಗಲಾರೆ. ನಿ
ಮಾತು ಬಹಳ ಧೈರ್ಯಉಳ್ಳದ್ದು" ಎಂದು ಹೇಳಿ ನಿರಾಕರಿಸಲು ಪ್ರಯತ್ನಿಸಿದನು.

**ಉಕ್ತೈನಮಾಹಚ ಪೃಥಾ ತನಯೇ ಮದೀಯೇ ।**
**ವಿದ್ಯಾಸ್ತಿದಿಕ್ಷ್ವತಿ ಭಿರಪ್ಯ ವಿಷಹ್ಯ ರೂಪಾ ॥**
**ಉಕ್ತ್ವೋಽಪಿ ನೋ ಗುರುಭಿರೇಷ ನಿಯುಂಕ್ತ ಏತಾಂ ।**
**ವಧ್ಯಸ್ತಥಾ ಪಿ ನಸುರಾಸುರ ಪಾಲಕೈಶ್ಚ ॥೮೨॥**

ಬ್ರಾಹ್ಮಣನ ಮಾತನ್ನು ಕೇಳಿದ ಕುಂತಿಯು, ನನ್ನ ಮಗನಲ್ಲಿ ದಿಕ್ಪಾಲಕರಿಗೂ ತಿಳಿಯಲು ಅಸಾಧ್ಯವಾದ ವಿದ್ಯೆಯಿದೆ. ಆ ವಿದ್ಯೆಯನ್ನು ನನ್ನ ಮಗನು ಎಂತಹ ಸಂಕಟ ಪ್ರಸಂಗ ಬಂದರೂ ಕೂಡ ಬಳಸಿದವನಲ್ಲ. (ವಿದ್ಯೋಪಜೀವನ ಅವನಿಗೆ ಹಿಡಿಸುವುದಿಲ್ಲ) ಆದರಿಂದ ಅವನು ಬಹು ಸಾಮರ್ಥ್ಯವುಳ್ಳವನಾಗಿದ್ದಾನೆ. ಅಂಥ ವಜ್ರಕಾಯನನ್ನು ದೇವತೆಗಳಿಂದಲೂ, ರಾಕ್ಷಸರಿಂದಲೂ, ಯಾರಿಂದಲೂ ಕೊಲ್ಲಲು ಸಾಧ್ಯವಿಲ್ಲ. ಆದ್ದರಿಂದ ಅವನನ್ನು ರಾಕ್ಷಸನ ಬಾಯಿಗೆ ಕೊಟ್ಟರೂ ನನಗೆ ಭಯವಿಲ್ಲ.

**ಉಕ್ತ್ವೈವಮೇತ್ಯನಿಖಿಲಂ ಚ ಜಗಾದ ಭೀಮ ।**
**ಉದ್ಧರ್ಷ ಆಪ ಸನಿಶಮ್ಯ ಮಹಾಸ್ವಧರ್ಮಂ ॥**
**ಪ್ರಾಪ್ತಂ ವಿಲೋಕ್ಯತಮತೀವ ವಿಘೂರ್ಣನೇತ್ರಂ ।**
**ದೃಷ್ಟ್ವಾ ಜಗಾದಯಮ ಸೂನುರುಪೇತ್ಯ ಚಾನ್ಯಃ ॥೮೩॥**

ಕುಂತಿಯು ಬ್ರಾಹ್ಮಣರಿಗೆ ಮೇಲಿನಂತೆ ಸಮಾಧಾನ ಹೇಳಿ, ಭೀಮನ ಹತ್ತಿರ ಬಂದು, ಎಲ್ಲ ವಿವರವನ್ನು ತಿಳಿಸಿದಳು. ತಾಯಿಯ ಮಾತನ್ನು ಕೇಳಿದ ಭೀಮನು, ನನಗೆ ಸ್ವಧರ್ಮ ರಕ್ಷಣೆಗೆ ಒಳ್ಳೆಯ ಅವಕಾಶ ದೊರೆಯಿತು. ಪುಣ್ಯ ಪ್ರಾಪ್ತಿಗೆ ಸಾಧನವಾಯಿತು ಎಂದು ಹಿಗ್ಗಿ ಸಂತುಷ್ಟನಾದನು. ಭೀಮನ ಆ ಸ್ಥಿತಿಯನ್ನು ಕಂಡು, ಧರ್ಮರಾಜ, ಮತ್ತಿತರ ಸಹೋದರರು ಬಂದು, ತಾಯಿಗೆ ಕಾರಣವನ್ನು ಕೇಳಿದರು.

**ಮಾತಃ ಕಿಮೇಷಮುದಿತೋ ನಿತರಾಯಿತಿಸ್ಮ ।**
**ತಸ್ಮೈ ಚ ಸಾನಿಖಿಲ ಮಾಹಸ ಚಾಬ್ರಹವೀತಾಂ ॥**
**ಕಷ್ಟಂ ತ್ವಯಾಕೃತ ಮಹೋಬಲಮೇವಯಸ್ಯ ।**
**ಸರ್ವೇ ತಾ ವಯೆ ಮಮುಂ ಚ ನಿಹಂಸಿ ಭೀಮಮ್ ॥೮೪॥**

ಹೇ ತಾಯಿಯೇ! ಭೀಮನ ಈ ಆನಂದಕ್ಕೆ ಕಾರಣವೇನು? ಎಂದು ಧರ್ಮನು ಕೇಳಿದಾಗ, ತಾಯಿಯು ಎಲ್ಲವನ್ನು ವಿವರವಾಗಿ ಹೇಳಿದಳು. ಅದನ್ನು ಕೇಳಿದ ಧರ್ಮನು, 'ಅಮ್ಮ, ನಿನ್ನಿಂದ ಬಹು ಸಂಕಷ್ಟದ ಕಾರ್ಯವಾಯಿತು. ಇದು ಕೇಳಿ ನನಗೆ ಆಶ್ಚರ್ಯ ವಾಗುತ್ತದೆ. ನಾವೆಲ್ಲರೂ ಭೀಮನ ಬಲವನ್ನೇ ಆಶ್ರಯಿಸಿರುವವರಲ್ಲವೇ? ಈಗ ನೀನು ಅವನನ್ನೇ ಕೊಲ್ಲಲು ಸಿದ್ಧಳಾಗಿರುವಿಯಲ್ಲ!" ಎಂದು ನುಡಿದನು.

**ಯದ್ಬಾಹು ವೀರ್ಯ ಪರಮಾಶ್ರಯ ತೋಽಹಿ ।**
**ರಾಜ್ಯಮಿಚ್ಛಾಮ ವ ನಿಖಿಲಾರಿವಧಂ ಸ್ವಧರ್ಮಂ ॥**
**ಸೋಽಯಂ ತ್ವಯೊದ್ಯ ನಿಶಿಚಾರಮುಖಾಯಮಾತಃ ।**
**ಪ್ರಸ್ಥಾಪ್ಯತೇ ವದಮಮಾಶುಕಯೈವ ಬುದ್ಧ್ಯಾ ॥೮೫॥**

ಯಾವನ ಬಾಹುಬಲ ಮತ್ತು ಪರಾಕ್ರಮವೇ ನಮಗೆ ಆಶ್ರಯವಾಗಿದೆಯೋ ಯಾವನ ಸಹಾಯದಿಂದ ನಾವು ರಾಜ್ಯವನ್ನು ಬಯಸುತ್ತಿರುವೆವೋ? ಯಾವನಿಂದ ನಾವು ನಮ್ಮ ಸ್ವಧರ್ಮದ ರಕ್ಷಣೆಯನ್ನು ಅಪೇಕ್ಷಿಸುವೆವೋ? ಅಂತಹ ಭೀಮನು, ಅಮ್ಮಾ!

ಇಂದು ನಿನ್ನಿಂದ ಆ ರಾಕ್ಷಸನಿಗೆ ಆಹುತಿ ಆಗುತ್ತಿರುವನಲ್ಲ ನಿನಗೆ ಇಂಥ ಬುದ್ಧಿಯು ಹೇಗೆ ಹುಟ್ಟಿತು ಹೇಳು ಎಂದು ಧರ್ಮನು ಉದ್ಗರಿಸಿದನು.

**ಇತ್ಯುಕ್ತವಂತ ಮಮುಮಾಹ ಸುಧೀರ ಬುದ್ಧಿಃ ।**
**ಕುಂತೀ ನಪುತ್ರಕ ನಿಹಂತು ಮಯಂ ಹಿ ಶಕ್ಯಃ ॥**
**ಸರ್ವೈಃ ಸುರೈರಸುರಯೋನಿ ಭರಪ್ಯನೇನ ।**
**ಚೂರ್ಣೀ ಕೃತೋಹಿ ಶತಶೃಂಗಗಿರಿಃ ಪ್ರಸೂತ್ಯಾಮ್ ॥೮೭॥**

ಒಳ್ಳೆಯ ಧೈರ್ಯಶಾಲಿಯಾದ ಕುಂತಿ, ಧರ್ಮರಾಜನಿಗೆ ಹೀಗೆ ಹೇಳಿದಳು. ಎಲೈ ಧರ್ಮನಂದನ! ಸಕಲ ದೇವತೆಗಳು ಮತ್ತು ರಾಕ್ಷಸರು ಕೂಡಿದರೂ ಈ ಭೀಮನನ್ನು ಕೊಲ್ಲಲು ಶಕ್ತರಾಗಲಾರರು. ಈ ಭೀಮನು ಹುಟ್ಟುವ ಕಾಲದಲ್ಲಿಯೇ ಶತಶೃಂಗ ಪರ್ವತವು ಪುಡಿಪುಡಿಯಾದದನ್ನು ನಾನು ಬಲ್ಲೆ" ಎಂದು ಹೇಳಿದಳು. (ಇದು ಅವಳ ಅನುಭವ).

**ಏಷಸ್ಸ್ವಯಂಹಿ ಮರುದೇವ ನರಾತ್ಮಕೋಽಂಽಭೂ ।**
**ತ್ಕೋನಾಮಹಂತುವಿಮಮಾಪ್ತ ಬಲೋಜಗತ್ಸು ॥**
**ಇತ್ಯೇವ ಮಸ್ತ್ವಿತಿ ಸ ತಾಮವದತ್ಪರೇದ್ಯುರ್ಭೀಮೋ ।**
**ಜಗಾಮ ಶಕಟೇನ ಕೃತೋರು ಭೋಗಃ ॥೮೭॥**

ಈ ಭೀಮನು ಸಾಕ್ಷಾತ್ ವಾಯುದೇವರು. ಮಾನವನಾಗಿ ಬಂದಿದ್ದಾನೆ. ಇವನು ಇಡೀ ಲೋಕದಲ್ಲಿ ಪೂರ್ಣಬಲವುಳ್ಳವನು. ಆಪ್ತ ಬಲ ಸಂಪನ್ನನು. ಇಂಥವನನ್ನು ಕೊಲ್ಲಲು ಯಾವನು ಸಮರ್ಥನಿದ್ದಾನೆ? ಎಂದು ಹೇಳಿದಾಗ, ಧರ್ಮನು ಹಾಗೇ ಆಗಲಿ, ಎಂದನು. ಮಾರನೆಯ ದಿನ ಭೀಮನು ಸ್ನಾನ ಆದ ನಂತರ ಗಂಧವನ್ನು ಧರಿಸಿ, ಮಾಲೆಗಳಿಂದ ಅಲಂಕರಿಸಿಕೊಂಡು, ತುಂಬಿದ ಭಂಡಿಯನ್ನು ಹೊಡೆದುಕೊಂಡು ನಡೆದನು.

**ವಿ. ವಿ. :** ಇಲ್ಲಿ ಕುಂತಿ ತನಗುಂಟಾದ ಅನುಭವ, ಮತ್ತು ಸತ್ಯ ಸಂಗತಿಯನ್ನೇ ಹೇಳಿದ್ದಾಳೆ.

**ಗತ್ವಾತ್ವರನ್ಬಕವನಸ್ಯ ಸಕಾಶಮಾಶು ಭೀಮಃ ।**
**ಸಪಾಯಸ ಸುಭಕ್ಷ್ಯ ಪಯೋಘಟಾದ್ಯೈಃ ॥**
**ಯುಕ್ತಂಚ ಶೈಲನಿಭ ಮುತ್ತಮಮನ್ನ ರಾಶಿಂ ।**
**ಸ್ಪರ್ಶಾತ್ಪುರೈವ ನರಭಕ್ಷಿತುರತ್ತು ಮೈಚ್ಛತ್ ॥೮೮॥**

ಆ ಭೀಮನು ಬಕಾಸುರನಿರತಕ್ಕ ಅರಣ್ಯದ ಸಮೀಪಕ್ಕೆ ವೇಗದಿಂದ ಬಂದನು. ಭಂಡಿಯಲ್ಲಿರುವ ಪಾಯಸ, ಭಕ್ಷ್ಯ, ಕೊಡಗಳಲ್ಲಿ ತುಂಬಿದ ಹಾಲು, ಮೊಸರು, ಪರ್ವತಸಮ ಅನ್ನರಾಶಿ, ಎಲ್ಲವನ್ನೂ ಆ ರಾಕ್ಷಸನ ಸ್ಪರ್ಶವಾಗುವ ಮುನ್ನವೇ ಭಕ್ಷಿಸಬೇಕೆಂದು ಇಚ್ಛಿಸಿದನು.

ತೇನೈವಚಾನ್ನಸಮಿತೌ ಪರಿಭುಜ್ಯಮಾನ ।
ಉತ್ಪಾಟ್ಯ ವೃಕ್ಷಮಮು ಮಾದ್ರವದಾಶು ರಕ್ಷಃ ॥
ವಾಮೇನ ಮಾರುತಿ ರಪೋಹ್ಯ ತದಾ ಪ್ರಹಾರಾನ್ ।
ಹಸ್ತೇನ ಭೋಜ್ಯಮಖಿಲಂ ಸಹ ಭಕ್ಷ್ಯ ಮಾದತ್ ॥೮೯॥

ಆ ಭೀಮನೇ ಅನ್ನದರಾಶಿ ಮತ್ತಿತರ ಸುಭೋಜ್ಯ ಪದಾರ್ಥಗಳನ್ನು ತಿನ್ನುತ್ತಿರುವುದನ್ನು ಕಂಡ ರಾಕ್ಷಸನು ಮರಗಳನ್ನು ಕಿತ್ತು ಕೈಯಲ್ಲಿ ಹಿಡಿದುಕೊಂಡು ಭೀಮನನ್ನು ಹೊಡೆಯಬೇಕೆಂದು ಓಡಿಬಂದನು. ಆಗ ಭೀಮಸೇನನು ಆ ಗಿಡಗಳನ್ನೇ ತನ್ನ ಎಡಗೈಯನ್ನು ಅಡ್ಡವಾಗಿಟ್ಟು ತಡೆದನು. ಬಲಗೈಯಿಂದ ಉಳಿದ ಎಲ್ಲ ಭಕ್ಷ್ಯಗಳನ್ನು ತಿಂದನು. ನಂತರ –

ಪೀತ್ವಾಪಯೋಽತ್ವರಿತೇವ ಮವೇಕ್ಷಮಾಣ ।
ಆಚಮ್ಯ ತೇ ಯುಯುಧೇ ಗುರುವೃಕ್ಷ ಶೈಲೈಃ ॥
ತೇನಾಹತೋಽಥ ಬಹುಭಿರ್ಗಿರಿಭಿರ್ಬಲೇನ ।
ಜಗ್ರಾಹ ಚೈನಮಥ ಭೂಮಿ ತಲೇಪಿಪೇಕ್ಷ ॥೯೦॥

ಭೀಮಸೇನನು ಆ ಬಕನನ್ನು ನೋಡಿಯೂ ಕೂಡ, ಭೀತಿಯಿಲ್ಲದೆ ಸಾವಧಾನದಿಂದ ಹಾಲು ಮುಂತಾದವುಗಳನ್ನು ಕುಡಿದು ಮುಗಿಸಿದನು. ನಂತರ ಕೈಕಾಲುಗಳನ್ನು ತೊಳೆದುಕೊಂಡು, ಆಚಮನ ಮಾಡಿ ಬಕನಿಗಿಂತಲೂ, ಅಧಿಕವಾಗಿ ದೊಡ್ಡ ಮರ ಗಿಡಗಳನ್ನು ಕಿತ್ತು, ಪರ್ವತಗಳನ್ನು ಎತ್ತಿ ತಂದು ಅವನ ಮೇಲೆ ಎಸೆದನು. ಭೀಮನ ಸಾಮರ್ಥ್ಯ ಗಿಡಮರಗಳ ಪೆಟ್ಟು ಪರ್ವತಗಳ ಹೊಡೆತ ಇವುಗಳನ್ನು ಸಹಿಸದೆ ಬಕನು ಭೂಮಿಗುರುಳಿದನು. ಪುಡಿಪುಡಿ ಆದನು.

ಆಕ್ರಮ್ಯಪಾದಮಪಿ ಪಾದ ತಲೇನ ತಸ್ಯ ।
ದೋ ರ್ಭ್ಯಾಂ ಪ್ರಗೃಹ್ಯ ಚ ಪರಂ ವಿದದಾರ ಭೀಮಃ ॥
ಮೃ ತ್ಯಾನ ಚೋಽರು ತಮ ಏವ ಜಗಾಮ ಪಾಪೋ ।
ವಿಷ್ಣು ದ್ವಿಡೇವಹಿ ಶನೈರನಿವೃತ್ತಿ ಚೋಗ್ರಮ್ ॥೯೧॥

ಭೀಮಸೇನನು ಬಕಾಸುರನ ಒಂದು ಪಾದವನ್ನು ತನ್ನ ಪಾದದಿಂದ ಒತ್ತಿ ಹಿಡಿದು, ಮತ್ತೊಂದು ಪಾದವನ್ನು ತನ್ನ ಎರಡೂ ಕೈಗಳಿಂದ ಹಿಡಿದು ಕುತ್ತಿಗೆ ತನಕ ಎರಡು ಭಾಗವಾಗಿ ಸೀಳಿದನು. ಅದರಿಂದ ಆ ಪಾಪಿಷ್ಟ ಬಕನು ಮರಣ ಹೊಂದಿದನು. ಅವನು ವಿಷ್ಣು ದ್ವೇಷಿಯಾಗಿದ್ದ ಕಾರಣ ಪುನರಾವೃತ್ತಿಯಿಲ್ಲದ ಘೋರ ಅಂಧಂತಮನಸ್ಸಿನಲ್ಲಿ ಸೇರಿದನು.

ಹತ್ವಾ ತಮಕ್ಷತಬರೋ ಜಗದಂತಕಂ ।
ಪಯೋಽರಾಕ್ಷಸೋ ನವಶ ಆಸ ಜರಾಸುತಸ್ಯ ॥
ಭೌಮಸ್ಯ ಪೂರ್ವ ಮಪಿನೋ ಭರತಸ್ಯ ರಾಜ್ಞೋ
ಭೀಮೋನ್ಯಥಾ ಪಯುದಮುಷ್ಯ ಶರೀರಮಗ್ರೇ ॥೯೨॥

ತನ್ನ ಅಕ್ಷಯ ಬಲದಿಂದ ಭೀಮನು ಜಗದಂತಕನಾದ, ಜಗತ್ತಿಗೆ ಕಂಟಕನಾದ ಬಕಾಸುರನನ್ನು ಕೊಂದನು. ಈ ರಾಕ್ಷಸನು ಹಿಂದೆ ಜರಾಸಂಧ, ನರಕಾಸುರ ಮತ್ತು ಭರತ ಮುಂತಾದ ಬಲಿಷ್ಠ ರಾಜರಿಗೂ ವಶನಾಗಿರಲಿಲ್ಲ. ಅಂಥವನನ್ನು ಭೀಮನು ಕೊಂದು ಅವನ ಶರೀರವನ್ನು ಭಂಡಿಯ ಮುಂಭಾಗದಲ್ಲಿ ಕಟ್ಟಿದನು.

**ದ್ವಾರ್ಯೇವತತ್ಪ್ರತಿ ನಿಧಾಯ ಪುರಃ ಸಭೀಮಃ ।**
**ಸ್ನಾತ್ವಾ ಜಗಾಮ ನಿಜಸೋದರ ಪಾರ್ಶ್ವ ಮೇವ ॥**
**ಶ್ರುತ್ವಾಸ್ಯ ಕರ್ಮಪರಮಂ ತುತುಷುಃ ಸಮೇತಾ ।**
**ಮಾತ್ರಾಚ ತೇ ತದನುವವ್ರು ರತಃ (ಭೀತಿಯುತಾಃ) ಪುರಸ್ಥಾ ॥೯೩॥**

**ದೃಷ್ಟ್ವೈವ ರಾಕ್ಷಸ ಶರೀರ ಮುರು ಪ್ರಭೀತಾ ।**
**ಜ್ಞಾ ತ್ವೈವ ಹೇತು ಭಿರಥ ಕ್ರಮಶೋಮೃತಂಚ ॥**
**ವಿಪ್ರಸ್ಯ ತಸ್ಯ ವಚನಾದಪಿ ಭೀಮಸೇನ ಭಗ್ನಂ ।**
**ನಿಶಮ್ಯ ಪರಮಂ ತತುಷುಶ್ಚ ತಸ್ಮೈ ॥೯೪॥**

ಭೀಮಸೇನನು ಬಕನ ಮೃತ ದೇಹವನ್ನು ಪುರದ ದ್ವಾರದಲ್ಲಿ ನಿಲ್ಲಿಸಿದನು. ಸ್ನಾನದ ನಂತರ ತನ್ನ ಸಹೋದರರ ಬಳಿಗೆ ಹೋದನು. ತಾಯಿ ಮತ್ತು ಸಹೋದರರು ಈ ಗುರುತರವಾದ ಕಾರ್ಯವನ್ನು ಕೇಳಿ ಬಹಳ ಸಂತುಷ್ಟಗೊಂಡರು. ಪಟ್ಟಣಿಗರು, ಆ ದೊಡ್ಡ ಶರೀರವನ್ನು ನೋಡಿ ಭೀತರಾಗಿ ಸುತ್ತುವರಿದು ನಿಂತರು. ನಂತರ ಅಂಗಚಲನ, ಉಸಿರಾಟ ಯಾವುದೂ ಕಾಣಲಿಲ್ಲ. ಭೀಮಸೇನನು ತಂಗಿದ್ದ ಮನೆಯ ಬ್ರಾಹ್ಮಣನ ಮಾತಿನಿಂದ ಸ್ವತಃ ಭೀಮನಿಂದ ತಿಳಿದ ನಂತರ ಅದು ಸತ್ತಿದೆ ಎಂದು ನಿಶ್ಚಯಿಸಿ ಸಂತಸಗೊಂಡರು.

**ಅನ್ನಾತ್ಮಕಂ ಕರಮಮುಷ್ಯಚ ಸಂಪ್ರಚಕ್ರುಃ ।**
**ಸೋಪ್ಯಪ್ಯೇನ ಮಾಶು ನರಸಿಂಹಮಪುರ್ಧರಸ್ಯ ॥**
**ಚಕ್ರೇ ಹರೇಸ್ತವನು ಸತ್ಯವತೀ ಸುತಸ್ಯ**
**ವಿಷ್ಣೋರ್ಹಿವಾಕ್ಯಚುದಿತಾಃ ಪ್ರಯಯುಸ್ತ ತಶ್ಚ ॥೯೫॥**

ಆ ಪುರದ ಜನರೆಲ್ಲ ಸಂತುಷ್ಟರಾಗಿ, ಆ ಬಕಾಸುರನಿಗೆ ಕೊಡತಕ್ಕ ಅನ್ನಾತ್ಮಕ ಕರವನ್ನು ಭೀಮಸೇನನಿಗೆ ಕೊಡಬೇಕೆಂದು ನಿಶ್ಚಯಿಸಿದರು. ಆಗ ಭೀಮನು ಈ ಕರ ನನಗೆ ಬೇಡ. ಪುರದಲ್ಲಿರುವ ನರಸಿಂಹನ ಪೂಜೆಗೆ ಉಪಯೋಗಿಸಿರಿ. ತಪ್ಪದೇ ಪೂಜೆ ನಡೆಯಲಿ ಎಂದು ಹೇಳಿ ವೇದವ್ಯಾಸರ ಪ್ರೇರಣೆಯಿಂದ ಏಕಚಕ್ರ ನಗರದಿಂದ ಮುಂದೆ ಸಾಗಿದರು.

**ಈ ಘಟನೆಯಲ್ಲಿಯ ಕೆಲವು ವಿಷಯಗಳು.**

೧) ಏಕಚಕ್ರದ ಜನರನ್ನು ಬಕಾಸುರ ದಾಳಿಯಿಂದ ರಕ್ಷಿಸಬೇಕಾಗಿತ್ತು. ಆ ಬಕನು -- ಭೀಮನಲ್ಲದೆ ಇನ್ನೊಬ್ಬರಿಂದ ಸಾಯುತ್ತಿರಲಿಲ್ಲ. ಅದಕ್ಕಾಗಿ ಸರ್ವಜ್ಞರಾದ ವ್ಯಾಸರು ಪಾಂಡವರನ್ನು ಅಲ್ಲಿ ತಂದು ನಿಲ್ಲಿಸಿದರು. ಕಾರ್ಯ ಮುಗಿದ ಕೂಡಲೇ ಮುನ್ನಡೆಸಿದರು.

೨) ತನ್ನ ಪ್ರಾಣಕ್ಕೆ ಅಪಾಯವಿದ್ದರೂ ಚಿಂತೆಯಿಲ್ಲ. ಇತರರನ್ನು ರಕ್ಷಿಸಬೇಕು. ಇದು ಶ್ರೇಷ್ಠವಾದ ಮಾನವ ಧರ್ಮ.

೩) ಇನ್ನೊಬ್ಬರ ಮನೆಯಲ್ಲಿ ಪ್ರವೇಶಿಸುವಾಗ, ಸಮಯಾಸಮಯ ಅರಿತು ವರ್ತಿಸಬೇಕು.

೪) ಊಟಕ್ಕೆ ಕುಳಿತಾಗ ಇನ್ನೊಬ್ಬರನ್ನು ಮುಟ್ಟಬಾರದು. ಊಟದಲ್ಲಿ ಅವಸರ ವಿರಬಾರದು.

೫) ಊಟದ ನಂತರ ಆಚಮನ ಅವಶ್ಯಕ – ಏಕೆ? ಪರಮಾತ್ಮನು ನಮಗೆ ಒಳ್ಳೆಯ ಆಹಾರ ಒದಗಿಸಿದ್ದಾನೆ. ಅದರಿಂದ ನನಗೆ ತೃಪ್ತಿಯನ್ನು ತಂದುಕೊಟ್ಟಿದ್ದಾನೆ ಎಂದು ಆತನಿಗೆ ಕೃತಜ್ಞತೆಯನ್ನು ಅರ್ಪಿಸುವದು – ಆಚಮನ ಕಾಲಕ್ಕೆ ದೇವರ ಸ್ಮರಣೆಯೇ ಮುಖ್ಯ. ಆದರೆ,

ಇಲ್ಲಿ ಭೀಮನ ಆಚಮನದಲ್ಲಿ ವಿಶಿಷ್ಟ ಉದ್ದೇಶವಿದೆ. ಯಾವುದೇ ಕಾರ್ಯದ ಪ್ರಾರಂಭದಲ್ಲಿ ಆಚಮನ ಅವಶ್ಯಕ. ಇಲ್ಲಿ ಭೀಮನು ಮಾಡುತ್ತಿರುವುದು ಮಂಗಲ ಕಾರ್ಯ. ಜಗತ್ತಿನ ಕಲ್ಯಾಣ ಕಾರ್ಯ. **ದುಷ್ಟರಿಗೆ ಶಿಕ್ಷೆ, ಶಿಷ್ಟರಿಗೆ ರಕ್ಷೆ** ಇಂತಹ ಪ್ರಸಂಗದಲ್ಲಿ ಆಚಮನ ಬೇಡವೇ? ಆಚಾರ್ಯರು **'ಜಗದಂತಕ'** ಎಂಬ ಒಂದೇ ಪದದಲ್ಲಿ ಬಕನ ಯೋಗ್ಯತೆ ಸಾಮರ್ಥ್ಯ ಮತ್ತು ಉದ್ದೇಶ ಎಲ್ಲವನ್ನೂ ತೋರಿದ್ದಾರೆ. ಅಂಥವನ ಹತ್ಯೆಗೆ ಆಚಮನ ಬೇಡವೇ? ಆಚಮನ ನಮ್ಮ ಸಂಸ್ಕೃತಿಯ ಪ್ರತೀಕ. ಅದು ನಮ್ಮ ಚಿತ್ತ ಶುದ್ಧಿಯನ್ನೂ ಮಾಡುತ್ತದೆ.

**೬) ಭೀಮನು ಪರಮ ಭಾಗವತನೆಂದು ಹೇಳುತ್ತೀರಿ – ಎತ್ತು ಕಟ್ಟಿ ಭಂಡಿಯಲ್ಲಿ ತಂದ ಅನ್ನ ಉಣ್ಣಬಹುದೇ? ಅದು ಮೈಲಿಗೆಯಲ್ಲವೇ?**

ಭೀಮನು ಭಗವದ್ಭಕ್ತ ನಿಜ. ಪರಮ ಭಾಗವತನೆಂಬುದೂ ಅಷ್ಟೇ ಸತ್ಯ. ಭೀಮನ ಮೂಲ ರೂಪವನ್ನು ತಿಳಿದಾಗ ನಮಗೆ ಇನ್ನೂ ಹೆಚ್ಚಿನ ಅರಿವಾಗುವುದು. ಭೀಮನು ವಾಯುಪುತ್ರ. ಗಾಳಿಗೆ ಎಂದಾದರೂ ಮೈಲಿಗೆವುಂಟೇ? ಗಾಳಿಯ ಸ್ಪರ್ಶ ಮಾತ್ರದಿಂದ ಸ್ಥಳ ಶುದ್ಧವಾಗಿ ಪವಿತ್ರವಾಗುತ್ತದೆ. ಅಗ್ನಿಯೂ ಅಷ್ಟೇ. ಅದೂ ಯಾವಾಗಲೂ ಪವಿತ್ರವೇ. ಸಕಲ ನಿಷಿದ್ಧ ಪದಾರ್ಥಗಳನ್ನು ತಿಂದರೂ ಅದು ಶುದ್ಧವಾಗಿ ಮತ್ತು ಪವಿತ್ರವಾಗಿಯೇ ಇರುತ್ತದೆ.

ಇಲ್ಲಿ ಅನ್ನ ಸಿದ್ಧ ಮಾಡಿದ್ದು ವಿಪ್ರರು. ಪವಿತ್ರ ಮನದಿಂದ ಸಿದ್ಧವಾದದ್ದು. ಅದನ್ನು ಭಂಡಿಯಲ್ಲಿ ತಂದವನು ವಾಯು. ಭಂಡಿ ಕಟ್ಟಿಗೆಯಿಂದ ತಯಾರಾದದ್ದು. ಕಟ್ಟಿಗೆಗೆ ಮೈಲಿಗೆಯೇ? ಎತ್ತುಗಳಿಗಂತೂ ಮಡಿ ಮೈಲಿಗೆ ಇಲ್ಲವೇ ಇಲ್ಲ. ಅಂದಮೇಲೆ ಮೈಲಿಗೆ ಎಲ್ಲಿಂದ ಬಂದಿತು? ಇದೆಲ್ಲಕ್ಕೂ ಮಿಗಿಲಾಗಿ ಭೀಮನು ಆ ಪದಾರ್ಥಗಳನ್ನು ಭಕ್ತಿಪೂರ್ವಕವಾಗಿ ಪರಮಾತ್ಮನಿಗೆ ಅರ್ಪಿಸಿ ಸ್ವೀಕರಿಸಿದ್ದಾನೆ. ಅದು ಊಟವಲ್ಲ, ಅದೊಂದು ಯಜ್ಞ. ಅಲ್ಲಿ ಮೈಲಿಗೆಗೆ ಆಸ್ಪದವುಂಟೆ? ಒಂದು ಚಿಕ್ಕ ಉದಾಹರಣೆ ಯಿಂದ ಸ್ಪಷ್ಟೀಕರಿಸಬಹುದು.

ಕೆಲವು ವರ್ಷಗಳ ಹಿಂದೆ, ಈಗಿನಂತೆ ನಳಗಳ ಅಥವಾ ಕೊಳವೆ ಭಾವಿಗಳ ಸೌಕರ್ಯವಿರಲಿಲ್ಲ. ಕೆಲವು ಹಳ್ಳಿಗಳಲ್ಲಿ ಸಾಕಷ್ಟು ಭಾವಿಗಳೂ ಇರಲಿಲ್ಲ. ಅಲ್ಲಿಯ ಜನರು ಹತ್ತಿರದಲ್ಲಿ ಹರಿಯುವ ನದಿಯಿಂದಲೋ, ಊರ ಹೊರಗಿರುವ ಭಾವಿ ಯಿಂದಲೋ ನೀರನ್ನು ತರಬೇಕಾಗುತ್ತಿತ್ತು. ಮದುವೆ ಮುಂಜಿ ಮುಂತಾದ ಪ್ರಸಂಗ ಗಳಲ್ಲಿ, ಭಂಡಿಗಳಲ್ಲಿಯೇ ನೀರನ್ನು ತರುತ್ತಿದ್ದರು. ಅದು ಮೈಲಿಗೆ ನೀರು ಎಂದು ಯಾರೂ ಬಗೆಯುತ್ತಿರಲಿಲ್ಲ. ಎಲ್ಲ ಕಾರ್ಯಗಳಿಗೂ ಅದನ್ನು ಬಳಸುತ್ತಿದ್ದರು. ಇದು ಅನೇಕರ ಅನುಭವದಲ್ಲಿದೆ. ಅಂದರೆ ಮಡಿ–ಮೈಲಿಗೆ ಕಾಲ ಮತ್ತು ಪ್ರಸಂಗವನ್ನು ಅವಲಂಬಿಸಿರುತ್ತದೆ ಎಂಬುದನ್ನು ಗಮನದಲ್ಲಿಟ್ಟರೆ ಮೇಲಿನ ಪ್ರಶ್ನೆಯೇ ಹುಟ್ಟುವುದಿಲ್ಲ.

**ಉತ್ಪತ್ತಿ ಪೂರ್ವಕಕಥಾಂದ್ರುಪದಾತ್ಮ ಜಾಯಾ ।**
**ವ್ಯಾಸೋಽಹ್ಯನೂಚ್ಯ ಜಗತಾಂ ಗುರುರೀಶ್ವರಶ್ಚ ॥**
**ಯೊತೇತ್ಯ ಚೋದಯದಥಾಪ್ಯಪರೇ ದ್ವಿಜಾಗ್ರ್ಯಾ ।**
**ಸ್ತ್ರಾ ಸ್ತ್ಯಾಹ್ಮಣಾ ಇತಿ ಭುಜಿರ್ಭವಿತೇ ತಿ ಚೋಚುಃ ॥೯೬॥**

ಜಗತ್ತಿಗೆ ಗುರುವಾದ, ಸಾಕ್ಷಾತ್ ಪರಮಾತ್ಮನು ವ್ಯಾಸರೂಪದಿಂದ ಬಂದು ದ್ರೌಪದಿದೇವಿಯರ ಜನನ ವೃತ್ತಾಂತವನ್ನು ಪೂರ್ವಾಪರ ಎಲ್ಲ ವಿವರಿಸಿ, ಪಾಂಡವರಿಗೆ ಅಲ್ಲಿಗೆ ಹೋಗಲು ಪ್ರೇರೇಬಿಸಿದರು. ಪಾಂಡವರು ಬ್ರಾಹ್ಮಣರ ವೇಷದಲ್ಲಿಯೇ ವ್ಯಾಸರ ಆಜ್ಞೆಯ ಮೇರೆಗೆ ಅಲ್ಲಿಗೆ ಹೊರಡಲು ಸಿದ್ಧರಾದರು. ಉಳಿದ ವಿಪ್ರರು ಇವರನ್ನು ಬ್ರಾಹ್ಮಣರೆಂದೇ ತಿಳಿದು, ಸ್ವಯಂವರದಲ್ಲಿ ಸಾಕಷ್ಟು ದಕ್ಷಿಣೆ, ಉತ್ತಮ ಭೋಜನ ಸಿಗುವುದೆಂದು ಹೇಳಿದರು.

**ಪೂರ್ವಂಹಿ ಪಾರ್ಥತ ಇಮಾನ್ಜತುಗೇಹದಗ್ಧಾನ್ ।**
**ಶ್ರುತ್ವಾತಿ ದುಃಖಿತಮನಾಃ ಪುನರೇವ ಮಂತ್ರಃ ॥**
**ಯಾಜೋಪಯಾಜಮುಖ ನಿಃಸೃತ ಏವ**
**ಮೇಷನಾ ಸತ್ಯತಾರ್ಹ ಇತಿ ಜೀವನ ಮೇಷು ಮೇನೇ ॥೯೭॥**

ಇತ್ತ ದ್ರುಪದರಾಜನು, ಪಾಂಡವರು ಅರಗಿನ ಮನೆಯಲ್ಲಿ ಸುಟ್ಟಿದ್ದನ್ನು ಮೊದಲೇ ಕೇಳಿ ದುಃಖಿತನಾಗಿದ್ದನು. ಆದರೂ ಯಾಜೋಪಯಾಜರ ಮುಖದಿಂದ ಬಂದ ಮಂತ್ರ "ಪಾರ್ಥಾಯದಾತುಂ ಕನ್ಯಾಭೂಯಾತ್" ಇದೂ ಸುಳ್ಳಾಗಲಾರದು. ಅಂದರೆ ಅರಗಿನ ಮನೆಯಲ್ಲಿ ಸುಟ್ಟಿರಲಿಕ್ಕಿಲ್ಲ" ಎಂದು ತರ್ಕಿಸಿದನು.

**ಯತ್ರ ಕ್ವಚಿತ್ತ್ವತಿ ವಸಂತಿ ನಿಲೀನರೂಪಾಃ ಪಾರ್ಥಾ ।**
**ಇತಿಸ್ಮ ಸತು ಫಲ್ಗುನ ಕಾರಣೇನ ॥**
**ಚಕ್ರೇ ಸ್ವಯಂವರ ವಿಘೋಷಣ ಮಾಶು ।**
**ರಾಜಾತ್ಮನ್ಯೆ, ಧಾರ್ಯ ಧನುರೀಶವರಾಪ್ಯ ಚಕ್ರೇ ॥೯೮॥**

"ಪಾಂಡವರು ಎಲ್ಲಿಯಾದರೂ ಇರಲೇಬೇಕು. ರೂಪ ಮರೆಸಿಕೊಂಡು ಅಂದರೆ ಬೇರೆ ವೇಷದಲ್ಲಿ ಇದ್ದಾರೆ ಎಂದು ನಿಶ್ಚಯಿಸಿ, ದ್ರುಪದರಾಜನು ಅರ್ಜುನನ

ಹೊರತು ಇನ್ನಾರು ಎತ್ತಿರಬಾರದು" ಅಂತಹ ಧನುಸ್ಸನ್ನು ಮಹರುದ್ರರಿಂದ ವರ ರೂಪದಲ್ಲಿ ಪಡೆದನು.

**ತತ್ಕಾಲ ಏವ ವಸುದೇವ ಸುತೋಽಪಿ ಕೃಷ್ಣ:**
**ಸಂಪೂರ್ಣ ಸ್ವೈಜ ಪರಿಬೋಧತ ಏವ ಸರ್ವಂ ॥**
**ಜಾನನ್ನಪಿಸ್ಮ ಹಲಿನಾ ಸಹಿತೋ ಜಗಾಮ ಪಾರ್ಥಾ**
**ನ್ನಿಶಮ್ಯಚ ಮೃತಾನಥ ಕುಲ್ಯ ಹೇತೋಃ ॥೯೯॥**

ಅದೇ ಸಮಯಕ್ಕೆ ವಸುದೇವ ಸುತನಾದ ಶ್ರೀಕೃಷ್ಣನು ಪಾಂಡವರು ಸತ್ತರೆಂದು ಸುದ್ದಿ ಕೇಳಿದನು. ಪಾಂಡವರ ಸಂಪೂರ್ಣ ತಿಳುವಳಿಕೆ ಶ್ರೀಕೃಷ್ಣನಿಗೆ ಇದ್ದಿತು. ಆದರೂ ಸತ್ತವರ ಮನೆವರೆಗೆ ಹೋಗಿ ಮಾತನಾಡಿಸಿ ಬರುವ ಪದ್ಧತಿಯನ್ನು ಅದೇ ಕಾಲಕ್ಕೆ ನಿಶ್ಚಯಿಸಿ ಬಲರಾಮನನ್ನು ಕೂಡಿದವನಾಗಿ ಹಸ್ತಿನಾಪುರಕ್ಕೆ ಬಂದನು.

**ಸಂಪ್ರಾಪ್ಯ ಹಸ್ತಿನಪುರಂ ಧೃತರಾಷ್ಟ್ರಪುತ್ರಾ**
**ನ್ಸಂವಂಚಯಂ ಸ್ತದನುಸಾರಿ ಕಥಾಶ್ಚ ಕೃತ್ವಾ ॥**
**ಭೀಷ್ಮಾದಿಭಿ: ಪರಿವೃತೋಽಪ್ರಿಯ ವಜ್ಜಗಾಮ**
**ದ್ವಾರಾವತೀ ಮುದಿತ ಪೂರ್ಣಸುನಿತ್ಯ ಸೌಖ್ಯ: ॥೧೦೦॥**

ಹಸ್ತಿನಾಪುರಕ್ಕೆ ಬಂದು, ಧೃತರಾಷ್ಟ್ರನ ಮಕ್ಕಳನ್ನು ವಂಚಿಸಲೆಂದೇ ತಕ್ಕ ಮಾತುಗಳನ್ನಾಡಿ ಭೀಷ್ಮಾದಿಗಳನ್ನು ಕಂಡು ಅಪ್ರಿಯನಂತೆ ನಟಿಸಿ ಸದಾ ಆನಂದೀತನು, ಪರಿಪೂರ್ಣ ಸುಖವುಳ್ಳ ನಿತ್ಯನಾದ ಶ್ರೀಕೃಷ್ಣನು ದ್ವಾರಾವತಿಗೆ ಬಂದನು.

**ತಸ್ಮಾಂತರೇ ಹೃದಿಕಸೂನುರನಂತರಂ ಸ್ವಂಶ್ಚಾ**
**ಛಲ್ಪಿ ಬುದ್ಧಿ ಬಲಮಾಶ್ರಿತ ಇತ್ಯುವಾಚ ॥**
**ಸತ್ರಾಜಿದೇಷ ಹಿ ಪುರಾ ಪ್ರತಿಜಜ್ಞ ಏನಾಮ**
**ಸ್ಮತ್ಕೃತೇ ಸ್ವತನಯಾಂ ಮಣಿನಾ ಸಹೈವ ॥೧೦೧॥**

ಶ್ರೀಕೃಷ್ಣನು ಹಸ್ತಿನಾವತಿಗೆ ಹೋದ ಕೆಲ ದಿನಗಳ ಮೇಲೆ ಹೃದಿಕನ ಮಗನಾದ ಕೃತವರ್ಮನು, ತನ್ನ ತಮ್ಮನಾದ ಶತಧನ್ವನನ್ನು ಕುರಿತು ಹೀಗೆ ಹೇಳಿದ. ಈ ಸತ್ರಾಜಿತನು ತನ್ನ ಮಗಳಾದ ಸತ್ಯಭಾಮೆಯನ್ನು ಮಣಿಸಹಿತವಾಗಿ ಮೊದಲು ನಮಗೆ ಕೊಡುತ್ತೇನೆಂದು ಹೇಳಿದ್ದ. ಆದರೆ,

**ವಿ. ವಿ. :** ಈ ಮಾತು ಕೃತವರ್ಮನು ಹೇಳಿದ್ದಲ್ಲ. ಅಕ್ರೂರನ ಬುದ್ಧಿಯನ್ನಾಶ್ರಯಿಸಿ ಅಂದಿದ್ದಾರೆ. ಅವನ ಹೇಳಿಕೆಯ ಮೇಲೆ ಈ ಮಾತು ಹೇಳಿದ್ದು ಎಂಬುದು ಸ್ಪಷ್ಟ.

**ಸರ್ವಾಂಶ್ಚನಃ ಪುನರಸಾವವಮತ್ಯ ಕೃಷ್ಣಾ**
**ಯಾದಾತ್ಸುತಾಂ ಜಹಿಚ ತಂ ನಿಶಿಪಾಹ ಬುದ್ಧಿಂ ।**
**ಆದಾಯರತ್ನ ಮುಪಯಾಹಿಚ ನೌವಿರೋಧೇ ಕೃಷ್ಣಸ್ಯ**
**ದಾನಪತಿನಾ ಸಹಸಾಹ್ಯಮೇಮಿ ॥೧೦೨॥**

ಆ ಸತ್ರಾಜಿತನು ನಮ್ಮೆಲ್ಲರನ್ನು ತಿರಸ್ಕರಿಸಿ (ಕಡೆಗಣಿಸಿ) ತನ್ನ ಮಗಳನ್ನು ಕೃಷ್ಣನಿಗೆ ಕೊಟ್ಟಿದ್ದಾನೆ. ಇವನು ಪಾಪಿಷ್ಟ ಹಾಗೂ ದುಷ್ಟ ಬುದ್ಧಿಯುಳ್ಳವ. ಕಾರಣ ನೀನು ರಾತ್ರಿಯಲ್ಲಿ ಹೋಗಿ ಅವನನ್ನು ಕೊಂದು, ಆ ರತ್ನವನ್ನು ತೆಗೆದುಕೊಂಡು ನಮ್ಮಲ್ಲಿಗೆ ಬಂದು ಬಿಡು. ಇದರಿಂದ ನಮಗೂ ಕೃಷ್ಣನಿಗೂ ವಿರೋಧ ಬಂದರ ಅಕ್ರೂರನ ಸಹಾಯ ಪಡೆಯುತ್ತೇನೆ" ಎಂದು ವಿವರಿಸಿದನು.

**ಇತ್ಯುಕ್ತ ಆಶುಕುಮತಿಃ ಸಹಿ ಪೂರ್ವದೇಹೇ**
**ದೈತ್ಯೋಽಯೆತಸ್ತ ದಕರೋದಥ ಸತ್ಯ ಭಾಮಾ ॥**
**ಆನಂದ ಸಂವಿದಪಿ ಲೋಕವಿಡಂಬನಾಯ ತದ್ದೇಹ**
**ಮಸ್ಯ ತಿಲಜೇಪತಿ ಮಭ್ಯು ಪಾಗಾತ್ ॥೧೦೩॥**

ಈ ರೀತಿಯ ಮಾತನ್ನು ಕೇಳಿ, ಹಿಂದಿನ ಜನ್ಮದಲ್ಲಿ ದೈತ್ಯನಾಗಿದ್ದು ಇಂದು ಶತಧನ್ವ ರೂಪದಲ್ಲಿದ್ದ ಅವನು, ಕೂಡಲೇ ಆ ನೀಚ ಕಾರ್ಯಕ್ಕೆ ಒಪ್ಪಿ ಮಾಡಿಯೇ ಬಿಟ್ಟನು. (ಸತ್ರಾಜಿತನನ್ನು ಕೊಂದನು) ಸತ್ಯಭಾಮೆ ದುಃಖರಹಿತಳಾದರೂ, ಲೋಕ ವಿಡಂಬನಕ್ಕಾಗಿ ತಂದೆಯ ಮೃತದೇಹವನ್ನು ಎಣ್ಣೆಯಲ್ಲಿಟ್ಟು, ಶ್ರೀಕೃಷ್ಣನ ಹತ್ತಿರ ಬಂದಳು.

**ಶ್ರುತ್ವಾ ತದೀಯ ವಚನಂ ಭಗವಾನ್ಪುರೀಂ**
**ಸ್ವಾಮಾಯಾತ ಏವ ತು ನಿಶಮ್ಯ ಮಹೋತ್ಸವಂತಂ ॥**
**ಪಾಂಚಾಲರಾಜ ಪುರುಷೋದಿತ ಮಾಶು**
**ವೃಷ್ಣಿ ಪರ್ಯೈರಗಾನ್ಮುಸಲಿನಾ ಸಹ ತತ್ಪುರೀಂಚ ॥೧೦೪॥**

ಸತ್ಯಭಾಮೆಯು ವಿವರಿಸಿದ ಮಾತನ್ನು ಕೇಳಿ, ಭಗವಾನ್ ಶ್ರೀಕೃಷ್ಣನು ತನ್ನ ನಗರಕ್ಕೆ ಮರಳಿ ಬಂದನು. ಅದೇ ಸಮಯಕ್ಕೆ ಪಾಂಚಾಲ ರಾಜನಾದ ದ್ರುಪದನು ತನ್ನ ಮಗಳ ಸ್ವಯಂವರದ ಉತ್ಸವದ ಪತ್ರವನ್ನು ದೂತನ ಕೈಯಿಂದ ಕಳಿಸಿದ್ದನು. ಕೂಡಲೇ ಶ್ರೀಕೃಷ್ಣನು ಯಾದವ ಶ್ರೇಷ್ಠರೊಂದಿಗೆ ಬಲರಾಮನ ಸಹಿತವಾಗಿ ದ್ರುಪದರಾಜನ ನಗರಕ್ಕೆ ನಡೆದನು.

**ಭೀಮೋಽಪಿರುದ್ರವರ ರಕ್ಷಿತ ರಾಕ್ಷಸಂ ತಂ ಹತ್ವಾ**
**ತೃಣೋಪಮ ತಯಾ ಹರಿಭಕ್ತ ವಂದ್ಯಃ ॥**
**ಉಷ್ಯಾಥತತ್ರ ಕತಿ ಚಿದ್ದಿನ ಮಚ್ಯುತಸ್ಯ**
**ವ್ಯಾಸಾತ್ಮನೋ ವಚನತಃ ಪ್ರಯಯೌ ನಿಜೈಶ್ಚ ॥೧೦೫॥**

ಭೀಮನು ಕೂಡ, ರುದ್ರದೇವರ ವರದಿಂದ ರಕ್ಷಿತನಾದ ಆ ಬಕನನ್ನು ತೃಣ ಸದೃಶ ಸೀಳಿಬಿಟ್ಟನು. ಹರಿಭಕ್ತರಿಂದ ವಂದ್ಯನಾಗಿ ಕೆಲವು ದಿನ ಏಕಚಕ್ರದಲ್ಲಿದ್ದು, ಅಚ್ಯುತನ ಅವತಾರಿಯಾದ ವ್ಯಾಸರ ಆಜ್ಞೆಯ ಮೇರೆಗೆ ತನ್ನವರಿಂದ ಕೂಡಿಕೊಂಡು ಏಕಚಕ್ರ ಬಿಟ್ಟು ಮುನ್ನಡೆದನು.

ಮಾಂಗಲ್ಯಮೇತದತುಲಂ ಪ್ರತಿಯಾತಶೀಘ್ರಂ
ಪಾಂಚಾಲ ಕಾಸ್ವರಮ ಭೋಜನ ಮತ್ರಸಿದ್ಧ್ಯೈತ್ ॥
ವಿಪ್ರೈರಿತಸ್ತತ ಇತೀರಿತ ವಾಕ್ಯಮೇತೇ
ಶೃಣ್ವಂತ ಏವ ಹರಿ ಚಕ್ರ ಮುರುತ ರಾಶಾಮ್ ॥೧೦೬॥

ಶ್ರೇಷ್ಠವಾದ ಮಂಗಲ ಮಹೋತ್ಸವಕ್ಕೆ ಶೀಘ್ರವಾಗಿ ಬನ್ನಿರಿ. ಪಾಂಚಾಲ ನಗರದಲ್ಲಿ ನಮಗೆ ಉತ್ಕೃಷ್ಟವಾದ ಭೋಜನ ಸಿದ್ಧವಾಗಿದೆ. ಈ ರೀತಿ ಅಲ್ಲಿಯ ಬ್ರಾಹ್ಮಣರೆಲ್ಲ ಹೇಳುತ್ತ ಮುಂದೆ ಸಾಗಿದ್ದರು. ಪಾಂಡವರು ಅವರ ಮಾತುಗಳನ್ನು ಕೇಳುತ್ತ ಬ್ರಾಹ್ಮಣರ ವೇಷದಲ್ಲಿ ಏಕಚಕ್ರದಿಂದ ಉತ್ತರ ದಿಕ್ಕಿನಲ್ಲಿ ನಡೆದರು.

ಷಣ್ಣಾಂಚ ಮಧ್ಯಗ ಮುದೀರ್ಣ ಭುಜಂ
ವಿಶಾಲ ವಕ್ಷಸ್ಥಲಂ ಬಹುಲಪೌರುಷ ಲಕ್ಷಣಂ ಚ ।
ದೃಷ್ಟ್ವೈವ ಮಾರುತಿ ಮಸಾವು ಹಲಪ್ಸ್ಯತೀಹ
ಕೃಷ್ಣಾ ಮಿತಿಸ್ಮ ಚವಚಃ ಪ್ರವದಂತಿ ವಿಪ್ರಾಃ ॥೧೦೭॥

ಪಾಂಡವರು ಆ ಬ್ರಾಹ್ಮಣರ ಗುಂಪಿನಲ್ಲಿಯೇ ಇದ್ದರು. (ಅವರಲ್ಲಿ) ಬ್ರಾಹ್ಮಣರಲ್ಲಿ ಕೆಲವರು ಈ ಆರುಜನರ ಮಧ್ಯದಲ್ಲಿರುವ ವ್ಯಕ್ತಿ, ದೀರ್ಘ ಬಾಹುಗಳ ಉಳ್ಳವನಾಗಿ, ವಿಶಾಲವಾದ ಎದೆ, ಒಳ್ಳೆಯ ಪುರುಷನ ಪೌರುಷದ ಲಕ್ಷಣಗಳೂ ಇವನಲ್ಲಿವೆ ಎಂದು ವಾಯುಪುತ್ರ (ಭೀಮನನ್ನು) ನೋಡಿದ ಆ ಜನರು "ಇವನೇ ಆ ಸ್ವಯಂವರದಲ್ಲಿ ದ್ರೌಪದಿಯನ್ನು ಪಡೆಯುತ್ತಾನೆ" ಎಂಬ ಮಾತನ್ನು ಆಡುತ್ತಿದ್ದರು. "ವಿಪ್ರ ವಾಕ್ಯಃ ಜನಾರ್ದನ" ಎಂಬ ಮಾತನ್ನು ನೆನಪಿಗೆ ತರುತ್ತದೆ.

ರಾತ್ರೌದಿವಾಚಸತತಂ ಪಥಿಗಚ್ಛಮಾನಾಃ ಪ್ರಾಪುಃ
ಕದಾಚಿದಥ ವಿಷ್ಣು ಪದೀಂನಿಶೀಯಾಂ ।
ಸರ್ವಾಂಶ್ಚ ರಕ್ಷಿತು ಮಗಾದಿಹಪ್ಸ್ಯಷ್ಟತಶ್ಚ ಭೀಮೋಽ
ಗ್ರಏವ ಶತಮನ್ಯು ಸುತೋಽಂತರೇಽನ್ಯೆ ॥೧೦೮॥

ರಾತ್ರೀ ಹಗಲು ಎಡೆಬಿಡದೆ ಆ ಪಾಂಡವರು ದಾರಿ (ಯಲ್ಲಿ) ನಡೆದರು. ಒಂದುದಿನ ಸಂಜೆಯಲ್ಲಿ (ರಾತ್ರಿಯಲ್ಲಿ) ಗಂಗಾ ನದಿಯ ಹತ್ತಿರ ಬಂದರು. ನದಿಯನ್ನು ದಾಟುವ ಸಮಯದಲ್ಲಿ ಸಹೋದರರ (ಎಲ್ಲರ) ರಕ್ಷಣೆಗಾಗಿ ಮುಂಭಾಗದಲ್ಲಿ ಅರ್ಜುನನು, ಹಿಂಬದಿಯಲ್ಲಿ ಭೀಮನಿದ್ದು ಇತರರು ಮಧ್ಯದಲ್ಲಿದ್ದರು.

ಪ್ರಾಪ್ತೇ ತದೋಲ್ಕುಕಧರೇಽರ್ಜುನ ಏವ ಗಂಗಾಂ
ಗಂಧರ್ವರಾಜ ಇಹಚಿತ್ರ ರಥೋಽರ್ಧ ರಾತ್ರೇ ।
ದಷ್ಟ್ವೈವ ವಿಪ್ರರಹಿತಾನುದಕಾಂತರಸ್ಥಃ
ಕ್ಷತ್ರಾತ್ಮಜಾ ಇತಿಹಿಧರ್ಷಯಿತು ಸಚಾಗಾತ್ ॥೧೦೯॥

ಉರಿಯುತ್ತಿರುವ ಬೆಳಕಿಗೆ ಅನುಕೂಲವಿರಲಿ ಎಂದು ಅರ್ಜುನನು ಕೊಳ್ಳಿಯನ್ನು ಹಿಡಿದುಕೊಂಡು ಗಂಗೆಯ ಹತ್ತಿರ ಬಂದನು. ಆ ಗಂಗೆಯಲ್ಲಿದ್ದ ಚಿತ್ರರಥನು, ಹಿಂದೆ

ಮುಂದೆ ಬ್ರಾಹ್ಮಣರಿಲ್ಲದ್ದನ್ನು ಕಂಡು, ಇವರು ಬ್ರಾಹ್ಮಣರಲ್ಲ ಕ್ಷತ್ರಿಯಕುಮಾರರು ಎಂದೇ ನಿಶ್ಚಯಿಸಿ, ಅವರನ್ನು ಬೆದರಿಸಲು ಮುಂದೆಬಂದರು.

**ವಿ. ವಿ. :** ಇವರ ಜೊತೆಯಲ್ಲಿ ಬಂದ ಬ್ರಾಹ್ಮಣರಲ್ಲಿ ಕೆಲವರು ನದಿಯ ದಂಡೆಯಲ್ಲಿಯೇ ಮಲಗಿದರು. ಇನ್ನು ಕೆಲವರು ಇದ್ದರೂ ಕತ್ತಲಲ್ಲಿ ದೂರ ಇದ್ದುದರಿಂದ ಕಾಣುತ್ತಿರಲಿಲ್ಲ. ಕಾರಣ ಆಚಾರ್ಯರು 'ವಿಪ್ರರಹಿತಾನ್' ಎಂಬ ಪದವನ್ನು ಬಳಸಿದ್ದಾರೆ. ಬ್ರಾಹ್ಮಣರಾಗಿದ್ದರೆ, ಈ ರಾತ್ರಿಯಲ್ಲಿ ಗಂಗೆಯನ್ನು ದಾಟುತ್ತಿರಲಿಲ್ಲ. ಕಾರಣ ಇವರು ಬ್ರಾಹ್ಮಣರಲ್ಲ. ಕತ್ತಲಲ್ಲಿ ಧೈರ್ಯದಿಂದ ನದಿಯನ್ನು ದಾಟುತ್ತಿದ್ದಾರೆ. ಅಂದಮೇಲೆ ಇವರು ಕ್ಷತ್ರಿಯರು ಇರಲೇಬೇಕು.

**ಹಂತಾಸ್ಮಿವೋ ಹ್ಯುಪಗತಾನುದಕಾಂತಮಸ್ಯಾ**
**ನದ್ಯಾಶ್ಚ ಮರ್ತ್ಯ ಚರಣಾಯ ನಿಷಿದ್ಧಕಾಲೇ ।**
**ಇತ್ಥಂ ವದಂತ ಮಮುಮಾಹ ಸುರೇಂದ್ರಸೂನು**
**ರ್ಗಂಧರ್ವ ನಾಸ್ತ್ರ ವಿದುಷಾಂ ಭಯಮಸ್ತಿತೇಽದ್ಯ ॥೧೧೦॥**

ನಿಮ್ಮನ್ನು ಕೊಂದುಬಿಡುತ್ತೇನೆ. ಈ ಸಮಯದಲ್ಲಿ ನೀರಿನಲ್ಲಿ ಇಲ್ಲಿಯವರೆಗೆ ಬಂದಿದ್ದೀರಿ. ಇದು ಮಾನವರ ಸಂಚಾರಕ್ಕೆ ನಿಷದ್ಧವಾದ ಕಾಲ – ಹೀಗೆ ಹೇಳುತ್ತ ಬರುತ್ತಿರುವ ಗಂಧರ್ವನನ್ನು ಕಂಡು, ಅರ್ಜುನನು, "ಎಲೈ ಗಂಧರ್ವ! ನಾವು ಅಸ್ತ್ರ ವಿದ್ಯೆಯನ್ನು ಬಲ್ಲವರಾಗಿದ್ದೇವೆ. ನಮಗೆ ಈಗ ನಿನ್ನ ಭಯವಿಲ್ಲ" ಎಂದು ಹೇಳಿದನು.

**ಸರ್ವಂಹಿ ಫೇನ ವದಿದಂ ಬಹುಲಂಬಲಂತೇ**
**ನಾರ್ಥಪ್ರದಂ ಭವತಿ ಚಾಸ್ತ್ರ ವಿದಿ ಪ್ರಯುಕ್ತಂ ।**
**ಇತ್ಯುಕ್ತ ವಂತಮಮುತ್ತಮ ಯಾನ**
**ಸಂಸ್ಥೋ ಬಾಣಾನ್ನಿಕಷಪನ್ನಭಿಸಸಾರ ಸುರೇಂದ್ರ ಭೃತ್ಯಃ ॥೧೧೧॥**

"ನಿನ್ನ ಬಹುಬಲ, ಜಂಭದ ಮಾತು, ಎಲ್ಲವೂ ಅಸ್ತ್ರ ವಿದ್ಯೆಯನ್ನು ಬಲ್ಲ ನಮ್ಮೆದುರು ಫಲಕಾರಿಯಾಗಲಾರವು. ಅವೆಲ್ಲವೂ ನೀರಿನ ತೆರೆಗಳ ಮೇಲೆ ನೊರೆಯಿದ್ದಂತೆ ವ್ಯರ್ಥವೇ ಸರಿ" ಎಂದು ನುಡಿದ ಅರ್ಜುನನ ಮಾತು ಕೇಳಿದ ಆ (ಸುರೇಂದ್ರ ಭೃತ್ಯ) ಚಿತ್ರರಥನು ಒಳ್ಳೆಯ ರಥ ಮತ್ತು ಶ್ರೇಷ್ಠ ಬಾಣಗಳಿಂದ ಸಿದ್ಧನಾಗಿ ಯುದ್ಧಕ್ಕೆ ಬಂದನು.

**ಆಗ್ನೇಯಮಸ್ತ್ರಮಭಿಮಂತ್ರ್ಯ ತದೋಲ್ಮುಕೇಽಸ**
**ಚಿಕ್ಷೇಪ ಶಕ್ರತನಯೋಸ್ಯ ರಥಶ್ಚ ದಗ್ಧಃ ।**
**ತಂಚಾಗ್ನಿ ನಾ ಪರಿಗೃಹೀತ ಮಭಿ ಪ್ರಗೃಹ್ಯ ಕೇಶೇಷು**
**ಸಂಚಕರ್ಷಾಶು ಸುರೊಂದ್ರಸೂನುಃ ॥೧೧೨॥**

ಗಂಧರ್ವನು ಬಂದದ್ದನ್ನು ಕಂಡು, ಆಗ ಅರ್ಜುನನು ತನ್ನ ಕೈಲ್ಲಿದ್ದ ದೀಪದ ಕೊಳ್ಳಿಯಲ್ಲಿಯೇ ಆಗ್ನ್ಯಾಸ್ತ್ರವನ್ನು ಅಭಿಮಂತ್ರಿಸಿ, ಗಂಧರ್ವನ ಕಡೆಗೆ ಒಗೆದನು. ಅದರಿಂದ ಅವನ ರಥವು ಸುಟ್ಟಿತು. ಅಲ್ಲದೆ ಅಗ್ನಿಯು ಚಿತ್ರರಥನನ್ನು ಆವರಿಸಿತು. ಇದನ್ನು ನೋಡಿದ ಅರ್ಜುನನು ಅಲ್ಲಿಂದಲೇ ಗಂಧರ್ವನ ಕೇಶಗಳನ್ನು ಹಿಡಿದು ಎಳೆದನು.

ಪಾರ್ಥೇನ ಸಂಧರ್ಷಿತಃ ಶರಣಂ ಜಗಾಮಧರ್ಮಾತ್ಮ ಜಂ
ತಮಿಸಿಸೋಽಥ ನಿಜಾಸ್ತ್ರ ಮುಗ್ರಂ ।
ಸಂಜಹ್ರ ಏವ ತತಾಸಚನಾಮತೋಽಸಾವಂಗಾರ
ವರ್ಣ ಇತಿವರ್ಣವಿಪರ್ಯಯೋಣ ॥೧೧೩॥

ಅರ್ಜುನನ ಸಾಮರ್ಥ್ಯಕ್ಕೆ ಬೆದರಿದ ಆ ಚಿತ್ರರಥನು ಧರ್ಮರಾಜನಿಗೆ ಮೊರೆ ಹೊಕ್ಕನು. ಅರ್ಜುನನಿಗೂ ಬೇಡಿಕೊಂಡನು. ಆಗ ಅರ್ಜುನನು ತನ್ನ ಉಗ್ರವಾದ ಅಗ್ನ್ಯಾಸ್ತ್ರವನ್ನು ಹಿಂತೆಗೆದುಕೊಂಡನು. ಆದರೂ ಆ ಅಸ್ತ್ರದ ಪರಿಣಾಮವಾಗಿ ಗಂಧರ್ವನ ಬಣ್ಣ ಅಂಗಾರ ವರ್ಣಕ್ಕೆ ತಿರುಗಿತು. ಕಡು ಕೆಂಪಾಯಿತು.

**ಗಂಧರ್ವನ ಬಣ್ಣ –**

ಗಂಧರ್ವ ಉಲ್ಬಣ ಸುರಕ್ತತನುಃ ಸಭೂತ್ವಾ
ಸ್ವರ್ಣಾವದಾತ ಉತಪೂರ್ವಮುಪೇತ್ಯ ಸಖ್ಯಂ ।
ಪಾರ್ಥೇನ ದುರ್ಲಭ ಮಹಾಸ್ತ್ರ ಮಿದಂ ಯಯಾಚೇ
ಜಾನನ್ನಪಿಸ್ಮ ಸಹಿತಾದೃಶ ಮೇಷವೇದ ॥೧೧೪॥

ಆ ಗಂಧರ್ವನ ಬಣ್ಣ ಮೊದಲು ಶ್ರೇಷ್ಠ ಬಂಗಾರದ ಬಣ್ಣವಾಗಿದ್ದಿತು. ಈಗ ಆ ಬಣ್ಣ ಅಗ್ನಿಯಲ್ಲಿ ಪುಟಗೊಂಡ ಬಂಗಾರದಂತೆ, ಅಂದರೆ ಕ್ರೂರವಾದ ಕೆಂಪು ಬಣ್ಣದಿಂದ ಕೂಡಿದೆ. ಇದನ್ನರಿತ ಆ ಚಿತ್ರರಥನು, ಅರ್ಜುನನೊಡನೆ ಸಖ್ಯವನ್ನು ಬೆಳೆಸಿದನು. ಗಂಧರ್ವನು ಮೊದಲು ಅಗ್ನ್ಯಾಸ್ತ್ರವನ್ನು ಬಲ್ಲವನಾಗಿದ್ದರು. ಇಂತಹ ಪ್ರಬಲವಾದ ಅಸ್ತ್ರವನ್ನು ಅವನು ಕಂಡಿರಲಿಲ್ಲ. ಇಂಥ ದುರ್ಲಭ ಮತ್ತು ಅಸದೃಶವಾದ ಅಸ್ತ್ರವನ್ನು ನನಗೆ ಉಪದೇಶಿಸಬೇಕೆಂದು ಅರ್ಜುನನಿಗೆ ಕೇಳಿಕೊಂಡನು (ಯಾಚಿಸಿದನು).

ವಿದ್ಯಾ ಸುಶಿಕ್ಷಿತ ತಮಾಹಿ ಸುರೇಂದ್ರ ಸೂನೌ
ತಾಮಸ್ಯ ಚಾವದದ ಸಾವಪಿ ಕಾಲತೋಽಸ್ಮೈ ॥
ಗಂಧರ್ವ ಗಾಮುವದದನ್ಯ ಗದೃಶ್ಯ ವಿದ್ಯಾಂ
ಪಶ್ಚಾದಿತಿ ಸ್ಮ ಪುರುಹೂತಸುತಸ್ಯ ವಾಕ್ಯಾತ್ ॥೧೧೫॥

ಅರ್ಜುನನು ಆ ಅಸ್ತ್ರವಿದ್ಯೆಯನ್ನು ಬಹಳಷ್ಟು ಶ್ರದ್ಧೆಯಿಂದ ಹೆಚ್ಚು ಅಭ್ಯಾಸ ಮಾಡಿದ್ದನು. ಅಂತಹುದನ್ನು ಅರ್ಜುನನು ಗಂಧರ್ವನಿಗೆ ಹೇಳಿಕೊಟ್ಟನು. ಅದಕ್ಕೆ ಬದಲಾಗಿ ಗಂಧರ್ವರಲ್ಲಿರತಕ್ಕ ಅದೃಶ್ಯವಿದ್ಯೆ ಅಂದರೆ (ಯಾರಿಗೂ ಕಾಣದಂತಿರುವ ವಿದ್ಯೆ) ಹೇಳಿಕೊಡಲು ಸಿದ್ಧನಾದನು. ಆದರೆ ಅರ್ಜುನನು ಕಾಲಾಂತರದಲ್ಲಿ ಪಡೆಯುವೆನು ಎಂದು ಹೇಳಿದನು. ಕಾರಣ –

ಅಧಿಕೃತಃ ಸ್ವಗತ ಸಂವಿದ ಏವಸಾಮ್ಯೇಽನ್ಯೈವೇಚ್ಛತಿ
ಸ್ಮ ನಿಮಯಂ ಸಧನಂಜಯೋಽತ್ರ ।
ಧರ್ಮಾರ್ಥಮೇವ ಸತುತಾಂ ಪರಿದಾಯ ತಸ್ಮೈ
ಕಾಲೇನ ಸಂವಿದ ಮಮುಷ್ಯ ಚ ಧರ್ಮತೋಽಯಾತ್ ॥೧೧೬॥

ತನ್ನಲ್ಲಿರುವ ವಿದ್ಯೆ ಅಧಿಕವಾದದ್ದು. ಅದನ್ನು ಕೊಟ್ಟು ಕಡಿಮೆ ದರ್ಜೆಯದನ್ನು ಪಡೆಯುವದನ್ನು ಧನಂಜಯನು ಇಚ್ಛಿಸಲಿಲ್ಲ. "ಎರಡೂ ವಸ್ತುಗಳು ಸಮವಿದ್ದಾಗ ಮಾತ್ರ ವಿನಿಮಯ ಯೋಗ್ಯ" ಇದು ಅರ್ಜುನ ಅಭಿಪ್ರಾಯ. ಕಾರಣ ಗಂಧರ್ವನಿಗೆ ಧರ್ಮಾರ್ಥವಾಗಿಯೇ ಕಲಿಸಿದನು. ಇದರಿಂದ ಪುಣ್ಯ ಬರಲಿ ಎಂಬುದೇ ಅರ್ಜುನನ ಉದ್ದೇಶವಾಗಿತ್ತು. ಆದರೂ ಗಂಧರ್ವನ ಮಾತನ್ನು ತಿರಸ್ಕರಿಸಲಿಲ್ಲ. 'ಕಾಲ ಬಂದಾಗ' ಎಂದು ಹೇಳಿದನು.

ವಿ. ವಿ. : ಇಲ್ಲಿ ಕೆಲವು ವಿಚಾರಗಳು.

೧) ಎರಡು ವಸ್ತುಗಳಲ್ಲಿ ಸಾಮ್ಯತೆಯಿದ್ದಾಗ ಮಾತ್ರ ವಿನಿಮಯ ಸಾಧ್ಯ. ಸಾಮ್ಯತೆ ಅನೇಕ ವಿಧವಾಗಿರಬಹುದು. ಬೆಲೆ, ಗಾತ್ರ, ಮೌಲ್ಯ, ಉಪಯುಕ್ತತೆ, ಪ್ರಸಂಗ ಇತ್ಯಾದಿ.

೨) ವಿದ್ಯೆಗೆ ಪ್ರತಿಫಲ ಬಯಸಬಾರದು – ದಾನವಾಗಿತ್ತ ವಿದ್ಯೆ ಶ್ರೇಷ್ಠ.

೩) ಇನ್ನೊಬ್ಬರು ಸಹಾಯ ಮಾಡಲು ಬಂದಾಗ ನಾನೇ ಶ್ರೇಷ್ಠನೆಂದು ಬಗೆದು ತಿರಸ್ಕರಿಸಬಾರದು. ಭವಿಷ್ಯ ಯಾರಿಗೂ ತಿಳಿಯದು.

೪) ವ್ಯಾಪಾರೀ ಮನೋವೃತ್ತಿ ವಿದ್ಯಾ ಕ್ಷೇತ್ರಕ್ಕೆ ಸರಿಯಲ್ಲ. ಅಲ್ಲಿ ವೃದ್ಧಿಗೆ ಆಸ್ಪದವಿರುವುದಿಲ್ಲ.

**ಪಾರ್ಥೇನ ಸೋಽಪಿ ಬಹುಲಾಶ್ಚಕಥಾಕಥಿತ್ವಾ**
**ಧೌ ಮ್ಯಸ್ಯ ಸಂಗ್ರಹಣ ಮಾಹ ಪುರೋಹಿತತ್ವೇ ।**
**ದಾಸ್ಯಾಮಿ ದಿವ್ಯ ತುರಗಾನಿತಿ ಸೋಽರ್ಜುನಾಯ**
**ವಾಚಂ ನಿಗದ್ಯ ದಿವಮಾರುಹಚ್ಯ ಗುಪ್ತೇ ॥೧೧೭॥**

ಆ ಗಂಧರ್ವನು ಕೂಡ ಅರ್ಜುನನಿಂದ ಬಹಳಷ್ಟು ವಿಷಯಗಳನ್ನು ತಿಳಿದುಕೊಂಡು "ಧೌಮ್ಯಾಚಾರ್ಯರನ್ನು ನೀವು ಪುರೋಹಿತನನ್ನಾಗಿ ಸ್ವೀಕರಿಸಿರಿ, ನಾನು ನಿಮಗೆ ಒಳ್ಳೆಯ ಕುದುರೆಯನ್ನು ಕೊಡುತ್ತೇನೆ" ಎಂದು ಹೇಳಿ, ತನ್ನ ಲೋಕವನ್ನು ಸೇರಿದನು. ಪಾಂಡವರು ಮುಂದೆ ಪ್ರಯಾಣ ಬೆಳೆಸಿದರು.

**ತೇ ಧೌಮ್ಯಮಾಪ್ಯಚ ಪುರೋಧಸ ಮುತ್ತ ಮಜ್ಞಂ**
**ವಿಪ್ರಾತ್ಮ ಜೋಷಮತಯಾ ವಿವಿಶುಃ ಪುರಂಚ ।**
**ಪಾಂಚಾಲಕಸ್ಯ ನಿಖಿಲಾಂದದೃಶುಶ್ಚ ತತ್ರಮೂರ್ಧಾ**
**ಭಿಷಿಕ್ತ ಸಮಿತಂ ಸಮಲಂಕೃತಾಂ ಚ ॥೧೧೮॥**

ಆ ಪಾಂಡವರು, ಉತ್ತಮ ಮತ್ತು ಜ್ಞಾನಿಗಳಾದ ಧೌಮ್ಯರನ್ನು ಪುರೋಹಿತರನ್ನಾಗಿ ಮಾಡಿಕೊಂಡು, ತಾವು ಬ್ರಾಹ್ಮಣಕುಮಾರರ ವೇಷದಲ್ಲಿಯೇ ಪಾಂಚಾಲನಗರವನ್ನು ಪ್ರವೇಶಿಸಿದರು. ಅಲ್ಲಿ ಚೆನ್ನಾಗಿ ವೇಷ ಭೂಷಣಗಳಿಂದ ಅಲಂಕೃತರಾದ ರಾಜರ ಸಭೆಯನ್ನು ಕಂಡರು.

**ರಾಜನ್ಯಮಂಡಲ ಮುದೀಕ್ಷ್ಯ ಸುಪೂರ್ಣ ಮತ್ರ**
**ಕೃಷ್ಣಾಂ ಪ್ರಗೃಹ್ಯ ಸಹಜಃ ಪ್ರಗೃಹೀತ ಮಾಲಾಂ ।**
**ತೇಷಾಂಚ ಮಧ್ಯಮಗಮತ್ಕುಲ ವೀರ್ಯ**
**ಸಂಪದ್ಯುಕ್ತ್ಯಾಂ ವಿಭೂತಿ ಮಥಬಾಹ ಸಮಸ್ತ ರಾಜ್ಞಾಮರ್ಗ ॥೧೧೯॥**

ಸಂಪೂರ್ಣ ರಾಜರ ಸಭೆಯನ್ನು ನೋಡಿ ದ್ರೌಪದಿಯ ಸಹೋದರನಾದ ಧೃಷ್ಟದ್ಯುಮ್ನನು, ರುದ್ರದೇವರಿಂದ ಪಡೆದಿರುವ ಪದ್ಮ ಮಾಲೆಯನ್ನು ದ್ರೌಪದಿಯ ಕೈಗೆ ಕೊಟ್ಟು, ಆಕೆಯನ್ನು ಆ ರಾಜರ ಸಭೆಯ ಮಧ್ಯ ಕರೆದುಕೊಂಡು ಬಂದರು. ನಂತರ ಎಲ್ಲ ರಾಜರ, ಕುಲ, ಗೋತ್ರ, ವಂಶ ಪರಾಕ್ರಮ, ಐಶ್ವರ್ಯ, ಸೈನ್ಯ, ಸಂಪತ್ತು ಇತ್ಯಾದಿಗಳನ್ನು ದ್ರೌಪದಿಗೆ ಹೇಳಿದನು.

**ತಾಂಶ್ಚ ಪ್ರದರ್ಶ್ಯ ಸಕಲಾನ್ಯ ಹುತಾಶನಾಂಶಶ್ಚಾ**
**ಪಂಚತತ್ಪ್ರತಿ ನಿಧಾಯ ಸ ಪಂಚಬಾಣಂ ।**
**ಆಹಾಭಿಭಾಷ್ಯ ಸಕಲಾನ್ನೃಪತೀನಘೋ ಚೈ ,**
**ರ್ದೀಪ್ಯದ್ಧು ತಾಶನವಪುರ್ಘನ ತುಲ್ಯ ಘೋಷಃ ॥೧೨೦॥**

ಎಲ್ಲ ರಾಜರನ್ನು ತೋರಿಸಿದ ನಂತರ, ಪಂಚಬಾಣಗಳಿಂದ ಯುಕ್ತವಾದ ಒಂದು ಬಿಲ್ಲನ್ನು ಸಭೆಯಲ್ಲಿ ಇಂದಿಟ್ಟನು. ಅಗ್ನಿ ಅಂಶದಿಂದ ಕೂಡಿದವನು, ಅಗ್ನಿಯಂತೆ ಪ್ರಕಾಶಿಸುವನು, ಮೇಘದಂತೆ ಕಂಠವುಳ್ಳ ಆ ಧೃಷ್ಟದ್ಯುಮ್ನನು ಸಭೆಯನ್ನು ನೋಡಿ ಅಕ್ಕ ಪಕ್ಕ ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಹೀಗೆ ಹೇಳಿದನು.

**ಏತೇನ ಕಾರ್ಮುಕವರೇಣ ತರೂಪಸ್ಥ**
**ಮತ್ಸ್ಯಾವಭಾಸ ಮುದಕೇ ಪ್ರತಿವೀಕ್ಷ್ಯಯೇನ ।**
**ಏತೈಃ ಶರೈ ಪ್ರತಿಹತೋ ಭವತೀಹ ಮತ್ಸ್ಯಃ**
**ಕೃಷ್ಣಾನುಯಾಸ್ಯತಿ ತಮದ್ಯನರೇಂದ್ರ ವೀರಾಃ ॥೧೨೧॥**

"ಹೇ ರಾಜ ಶ್ರೇಷ್ಠರೆ! ಈ ಬಾಣಗಳನ್ನು ಹೂಡಿ, ಅಲ್ಲಿ ಗಿಡದಲ್ಲಿರುವ ಮತ್ಸ್ಯದ ನೆರಳನ್ನು ಉದಕದಲ್ಲಿ ನೋಡಿ ಯಾರು ಆ ಮತ್ಸ್ಯವನ್ನು ಹೊಡೆದು ಕೆಡಹುವರೋ ಅವರಿಗೆ ಈ ದ್ರೌಪದಿ ದೊರೆಯುತ್ತಾಳೆ" ಎಂದು ಹೇಳಿದನು.

**ಇತ್ಯಸ್ಯವಾಕ್ಯ ಮನುಸರ್ವನರೇಂದ್ರ ಪುತ್ರಾ**
**ಉತ್ತಸ್ಥುರುದ್ಧ ತಮದಾ ಶ್ಚಲ ಕುಂಡಲಾಸ್ಯಾಃ ।**
**ಅಸ್ತ್ರಂ ಬಲಂಚ ಬಹುಸ್ವೈಜ ಮಭೀಕ್ಷ ಮಾಣಾಃ**
**ಸ್ಪರ್ಧಂತ ಏವಚಮಿಥ ಸಮಲಂಕೃತಾಂಗಾಃ ॥೧೨೨॥**

ಈ ರೀತಿ ಆತನ ಮಾತನ್ನು ಕೇಳಿದ ರಾಜಕುಮಾರರೆಲ್ಲರೂ, ತಮ್ಮ ಚಂಚಲವಾದ ಕರ್ಣಕುಂಡಲಗಳ ಬೆಳಕನ್ನು ಬೀರುತ್ತ, ತಮ್ಮ ತಮ್ಮ ಅಸ್ತ್ರ ಬಲ ಮತ್ತು ಬಾಹುಬಲಗಳಲ್ಲಿ ಹೆಚ್ಚು ಎಂದು ಸ್ಪರ್ಧೆಗಾಗಿ ಎದ್ದುನಿಂತರು. ಅವರೆಲ್ಲರು ನಾನಾ ಆಭರಣಗಳಿಂದ ಅಲಂಕೃತರಾಗಿದ್ದರು.

**ಕೇಚಿನ್ನಿರಿಕ್ಷ್ಯಧನುರೇತ್ಯ ನಮೇಋಶಕ್ಯ**
**ಮಿತ್ಯೇವ ಚಾಪಯ ಯರನ್ಯ ಉತಪ್ರಜಾಲ್ಯ ।**
**ತತ್ರಾ ಸಸಾದ ಶಿಶುಪಾಲ ಉರು ಪ್ರತಾಪಃ**
**ಸಂಗೃಹ್ಯ ತತ್ಸಮಧಿ ರೋಪಣ ಯತ್ನ ಆಸೀತ್ ||೧೨೩||**

ಕೆಲವರು ಆ ಬಿಲ್ಲನ್ನು ನೋಡಿ, ಇದು ನಮಗೆ ಅಶಕ್ಯವೆಂದು ಹಿಂದಿರುಗಿದರು. ಮತ್ತೆ ಕೆಲವರು ಬಿಲ್ಲನ್ನು ಮುಟ್ಟಿ ಅಲುಗಾಡಿಸಿ, ಇದು ನಮಗೆ ಸುಲಭ ಸಾಧ್ಯವಲ್ಲ ಎಂದು ಹಿಂದಿರುಗಿದರು. ಆ ರಾಜರ ಮಧ್ಯದಿಂದ ಬಹು ಪರಾಕ್ರಮಿಯಾದ ಶಿಶುಪಾಲನು ಎದ್ದು ಬಂದನು. ಆ ಬಿಲ್ಲನ್ನು ಹಿಡಿದು ಅದಕ್ಕೆ ಹಗ್ಗ ಕಟ್ಟಿ ಜಾ ಸರಿಪಡಿಸಲು ಪ್ರಯತ್ನ ಮಾಡಿದನು.

**ಮಾಷಾಂತರಾಯ ಸಟಕರ್ಷಯ ದ್ವೈವಕೋಟ್ಯಾ**
**ಉನ್ನಮ್ಯ ತತ್ಪ್ರತಿ ಜಘಾನ ತಮೇವ ಚಾಶು ।**
**ಅನ್ಯತ್ರ ಫಲ್ಗುನತ ಏತದಶಕ್ಯಮೇವೇ ತ್ಯಂಜೋ**
**ಗಿರೀಶವರತಃ ಸಮ ಯೌ ಚ ಭಗ್ನಃ ||೧೨೪||**

ಆ ಶಿಶುಪಾಲನು ಬಂದು ಜಾ ಕಟ್ಟಲು ಎಳೆದನು. ಇನ್ನೊಂದು ತುದಿ ಮುಟ್ಟಲು ಉದ್ದಿನ ಕಾಳಿನಷ್ಟು ಅಂತರ ಉಳಿದಿತ್ತು. ಅಷ್ಟರಲ್ಲಿ ಅದರ ಒಂದು ತುದಿ ಅವನ ಕೈಹಿಡಿತದಿಂದ ತಪ್ಪಿತು. ಕೂಡಲೇ ಅದು ಪ್ರತಿಯಾಗಿ ಅವನಿಗೇ ಬಡಿಯಿತು. ಅವನು ಪರಾಜಿತನಾದನು. "ಇದು ಗಿರೀಶನ ವರದಿಂದ ಬಂದದ್ದು, ಈ ಕಾರ್ಯ ಅರ್ಜುನನನ್ನು ಬಿಟ್ಟು ಅನ್ಯರಿಗೆ ಶಕ್ಯವಿಲ್ಲ ಎಂದು ಮನದಲ್ಲೆಂದು, ಖಿನ್ನ ಮುಖನಾಗಿ ಹಿಂದಿರುಗಿದನು.

**ಮದ್ರೇಶ ಏತ್ಯ ಚಕ್ರಷೇ ಸ್ಥವಿರೋಽಪಿ ವಿರ್ಯಾ**
**ಚ್ಛೇದೀಶತೋಽಪ್ಯಧಿಕಮೇವ ಸಮುದ್ಗಮಾತ್ರೇ**
**ಶಿಷ್ಟೇಽಮುನಾ ಪ್ರತಿಹತಃ ಸಯಯಾವ ಶಕ್ಯಂ**
**ಮತ್ವಾತ್ಮ ನಸ್ತದನು ಭೂಪತೆಯೋ ವಿಷಣ್ಣಾ ||೧೨೫||**

ಮದ್ರ ದೇಶದ ರಾಜ ಶಲ್ಯ, ಆತನು ವೃದ್ಧನಾದರೂ ಮಹಾ ಪರಾಕ್ರಮಿ, ಶಿಶುಪಾಲನಿಗಿಂತಲೂ ಬಲಿಷ್ಠ, ಆತನು ಒಂದು ಬಿಲ್ಲನ್ನು ಎಳೆದು ಕಟ್ಟಲು ಪ್ರಯತ್ನಿಸಿದ. ಕೇವಲ ಹೆಸರುಕಾಳಿನಷ್ಟು ಉಳಿಯಿತು. ಅವನು ಬಿಲ್ಲಿನಿಂದ ಪೆಟ್ಟು ತಿಂದ. ಆತನಿಗೂ ಅಶಕ್ಯವಾದಾಗ ಎಲ್ಲ ರಾಜರು ವಿಷಣ್ಣ ವದನರಾಗಿ ಕುಳಿತುಬಿಟ್ಟರು.

**ಸನ್ನೇಷು ಭೂಪತಿಷು ಮಾಗದ ಆಸಸಾದಸೋಽ**
**ವಜ್ಞಯೈವ ಬಲವೀರ್ಯ ಮದೇನ ದೃಪ್ತಃ ।**
**ಚಾಪಂಚಕರ್ಷ ಚಲಪಾದತಲೋ ಬಲೇನ**
**ಶಿಷ್ಟೇಽಷ ಸರ್ಷಪಮಿತೇಽಭಿಹತೋಽ ಮುನೈವ ||೧೨೬||**

ಎಲ್ಲ ರಾಜರು ಶಾಂತರಾಗಿ ಕುಳಿತಿರುವಾಗ, ಮಗದಾಧಿಪತಿ ಜರಾಸಂಧ, ತನ್ನ ಪರಾಕ್ರಮ ಮತ್ತು ಬಲಗಳಲ್ಲಿ ಗರ್ವವುಳ್ಳವನಾಗಿ, ಅಹಂಕಾರದಿಂದ ಇದೇನು ಮಹಾವೆಂದು!

ಎಂದು ಅಲಕ್ಷ್ಯ ತೋರಿಸುತ್ತ ಉಳಿದ ರಾಜರ ಕಡೆಗೆ ಧಿಕ್ಕಾರದ ದೃಷ್ಟಿ ಬೀರುತ್ತ ಗಟ್ಟಿಯಾಗಿ ಪಾದಗಳನ್ನೂ ಊರದೆ, ವೇಗದಿಂದ ಅಲ್ಲಿಗೆ ಬಂದನು. ಬಿಲ್ಲನ್ನು ಎತ್ತಿ ಎಳೆದನು. ಅವನಿಗೆ ಸಾಸಿವೆಯ ಕಾಳಿನಷ್ಟು ಉಳಿಯಿತು. ಅವನೂ ಕೂಡ ಬಿಲ್ಲಿನ ಪೆಟ್ಟಿನಿಂದ ಹತನಾದನು.

**ಜಾನುನ್ಯಮುಷ್ಯ ಧರಣೀಂ ಯಯತುಸ್ತ್ವದೈವ**
**ದರ್ಪೇಣ ಚಾಸ್ತಿರ ಪದಸ್ಥಿತಿ ಮಾತ್ರಹೇತೋಃ**
**ರೌದ್ರಾದ್ವರಾತ್ಸ ಜಡತಾಂ ಗಮಿತೋಽಥ ರಾಜಾ**
**ರಾಜ್ಞಾಂ ಮುಖಾನ್ಯನಭಿ ವೀಕ್ಷ್ಯ ಯಯೌಸ್ವರಾಷ್ಟ್ರಮಾ** ॥೧೨೭॥

ಆ ಜರಾಸಂಧನು ಬಿಲ್ಲಿನ ಪೆಟ್ಟಿನಿಂದ ನಡುಗ ಹತ್ತಿದನು. ಅವನ ಕಾಲುಗಳು ಸ್ಥಿರವಾಗಿ ನಿಲ್ಲಲಿಲ್ಲ. ಮೊಳಕಾಲ ಸಹಾಯದಿಂದ ಭೂಮಿಯ ಮೇಲೆ ಕುಳಿತುಬಿಟ್ಟನು. 'ಇವಳಿಗೆ ನೀನೇ ಗಂಡನಾಗುತ್ತಿ' ಎಂದು ಹಿಂದೆ ರುದ್ರದೇವರ ವರವನ್ನು ಪಡೆದಿದ್ದನಂತೆ. ಅದೇ ಭ್ರಮೆಯಲ್ಲಿ ಇಲ್ಲಿಗೆ ಬಂದಿದ್ದನು. (ಭ್ರಮ ನಿರಸನವಾಯಿತು) ಅಲ್ಲಿಯ ರಾಜರಿಗೆ ಮುಖವನ್ನೇ ತೋರದೆ ತನ್ನ ದೇಶಕ್ಕೆ ಹಿಂದಿರುಗಿದನು.

**ವಿ. ವಿ. :** "ಇವಳಿಗೆ" ಎಂಬಲ್ಲಿ ಭೂಮಿ ಎಂದಿರಬಹುದೆ?

**ಪ್ರಾಯೋಗತಾಸ್ತ್ವ ಮನು ಭೂಪತಯೋಽಥಕರ್ಣೋ**
**ದುರ್ಯೋಧನಾರ್ಥಮನುಗೃಹ್ಯ ಧನುಶ್ಚ ಕರ್ಷ ।**
**ರಾಮಾದುಪಾತ್ತ ಶುಭಶಿಕ್ಷಿತ ಮಾತ್ರತೋಽಸೌ**
**ರೋಮಾ ವಶಿಷ್ಟ ಮಕರೋದ್ಧನು ಷೋಽಂತಮಾಶು** ॥೧೨೮॥

ಎಲ್ಲ ರಾಜರು ಜರಾಸಂಧನಂತೆ ಹಿಂದಿರುಗಿದ ಮೇಲೆ, ಕರ್ಣನು ದುರ್ಯೋಧನನಿಗಾಗಿ ಕನ್ಯೆ ಎಂಬ ಉದ್ದೇಶದಿಂದ ಒಂದು ಬಿಲ್ಲನ್ನು ಹಿಡಿದನು. ಪರಶುರಾಮರಿಂದ ಒಳ್ಳೆಯ ಶಿಕ್ಷಣ ಪಡೆದಿದ್ದನಾದ ಕಾರಣ ಒಂದು ಕೂದಲಿನ ಅಂತರ ಉಳಿಯಿತು. ಅವನೂ ಇತರರಂತೆ ಬಿಲ್ಲಿನಿಂದ ಹೊಡೆತ ತಿಂದು ಹಿಂದಿರುಗಿದನು.

**ತಸ್ಮಿಂಶ್ಚತೇನ ವಿಹತೇ ಪ್ರತಿ ಸನ್ನಿವೃತ್ತೇ**
**ಭೀಮಾರ್ಜುನೌ ದ್ವಿಜಸದಸ್ಯುಪಸನ್ನ ವಿಷ್ಣೌ ।**
**ಉತ್ತಸ್ಥ ತೂರವಿ ಶಶಿ ಪ್ರತಿಮಾನ ರೂಪೌ**
**ವಿಪ್ರೇಷು ತತ್ರಚಭಿಯಾ ವಿನಿವಾರಯತ್ಸು** ॥೧೨೯॥

ಆ ಕರ್ಣನು ಈ ರೀತಿ ಹತನಾಗಿ ಹಿಂದಿರುಗಿದಾಗ, ಬ್ರಾಹ್ಮಣರ ಮಧ್ಯದಲ್ಲಿ ಸೂರ್ಯ ಚಂದ್ರರಂತೆ ಕಾಣಿಸಿಕೊಳ್ಳುವ ಭೀಮಾರ್ಜುನರು, ಎದ್ದುನಿಂತರು. ಇತರ ವಿಪ್ರರು ಕಾರ್ಯ ಆಗದಿದ್ದಲ್ಲಿ ಅಪಮಾನವಾದೀತು ಎಂಬ ಭೀತಿಯಿಂದ ತಡೆಯುತ್ತಿದ್ದರೂ ಲೆಕ್ಕಿಸದೆ ಮುಂದೆ ಬಂದರು.

**ವಿಪ್ರಾಶ್ಚ ಕೇಚಿದತಿ ಯುಕ್ತ ಮಿಮೌಚ ವೀರೌ**
**ದೇವೋಪಮಾನಿತಿವ ಚೋ ಜಗದುಸ್ತ ತಸ್ತೌ ।**
**ದೃಷ್ಟ್ವೈವ ಕೃಷ್ಣ ಮುಖಪಂಕಜ ಮಾಶು ಚಾಪ**
**ಸಾನ್ನಿಧ್ಯ ಮಾಯಯತುರುತ್ತಮ ವೀರ್ಯಸಾರೌ** ॥೧೩೦॥

ಆ ಬ್ರಾಹ್ಮಣರಲ್ಲಿ ಕೆಲವರು, ಇವರು ಎದ್ದದ್ದು ಸರಿಯಾಗಿಯೇ ಇದೆ. ಏಕೆಂದರೆ ಇವರು ಪರಾಕ್ರಮಿಗಳಿದ್ದಾರೆ. ಅಲ್ಲದೆ ದೈವೀಗುಣಗಳನ್ನು ಹೊಂದಿದ್ದಾರೆ. (ಇದು ಅವರ ಹಿಂದಿನ ಅನುಭವ) ಬ್ರಾಹ್ಮಣರ ಈ ಮಾತುಗಳನ್ನು ಕೇಳಿದ ವೀರರು ಎದ್ದು ನಿಂತು, ಮೊದಲು ಶ್ರೀಕೃಷ್ಣನ ಮುಖಕಮಲವನ್ನು ನೋಡಿ, ಕೂಡಲೇ ಆ ಧನುಸ್ಸಿನ ಸಮೀಪಕ್ಕೆ ಬಂದರು.

**ತತ್ರಾರ್ಜುನಃ ಪವನಜಾತ್ಪ್ರಿಯತೋಽಭ್ಯನುಜ್ಞಾ**
**ಮೂದಾಯ ಕೇಶವಮಜಂ ಮನಸಾ ಪ್ರಣಮ್ಯ ।**
**ಕೃತ್ವಾ ಗುಣಾನ್ವಿತ ಮದೋಧನುರಶ್ರಮೇಣ**
**ಯಂತ್ರಾತರೇಣ ಸಶರೈರಥುನೋಚ್ಛ ಲಕ್ಷ್ಯಮ್ ॥೧೩೧॥**

ಆ ಅರ್ಜುನನು, ಅಲ್ಲಿಗೆ ಬಂದ ನಂತರ, ಲಕ್ಷ್ಯವೇಧಕ್ಕಾಗಿ, ವಾಯುಪುತ್ರ ಭೀಮನಿಂದ ಆಜ್ಞೆಯನ್ನು ಪಡೆದು, ಜನನ ರಹಿತನಾದ ಶ್ರೀಕೃಷ್ಣನಿಗೆ ಮನಸಾ ವಂದಿಸಿ, ಆ ಧನುವನ್ನೆತ್ತಿ 'ಜಾ–ಗುಣ' ಹಗ್ಗದಿಂದ ಅದನ್ನು ಚೆನ್ನಾಗಿ ಕಟ್ಟಿ, ಆಯಾಸವಿಲ್ಲದೆಯೇ ಯಂತ್ರಾಂತರದಲ್ಲಿರುವ ಮರದಲ್ಲಿಯ ಮತ್ಸ್ಯದ ನೆರಳನ್ನು ಕಂಡು ಸರಿಯಾಗಿ ಹೊಡೆದನು.

**ಕೃಷ್ಣಾ ತದಾಸ್ಯ ವಿದಧೇ ನವಕಂಜ ಮಾಲಾಂ**
**ಮಧ್ಯೇಚ ತಾಂ ಪ್ರತಿನಿಧಾಯ ನರೇಂದ್ರ ಪುತ್ರೌ ।**
**ಭೀಮಾರ್ಜುನೌ ಯಯತುರಚ್ಯುತ ಮಾಭಿನಮ್ಯ ॥**
**ಕ್ಷುಬ್ಧಸ್ತದಾ ನೃಪಸಮಾಬ್ಧಿ ರಿಮಾವ ಧಾವತ್ ॥೧೩೨॥**

ಮತ್ಸ್ಯವೇಧ ಆದ ಕೂಡಲೇ, ದ್ರೌಪದಿಯು ನೂತನವಾದ ಕಮಲದ ಮಾಲೆಯನ್ನು ತಂದು ಅರ್ಜುನನಿಗೆ ಹಾಕಿದಳು. ಪಾಂಡುರಾಜನ ಮಕ್ಕಳಾದ ಭೀಮಾರ್ಜುನರು ದ್ರೌಪದಿಯನ್ನು ಮಧ್ಯದಲ್ಲಿ ಮಾಡಿಕೊಂಡು ಶ್ರೀಕೃಷ್ಣನಿಗೆ ಭಕ್ತಿಯಿಂದ ನಮಿಸಿ ನಡದೇ ಬಿಟ್ಟರು. ಆ ಸಮಯದಲ್ಲಿ ಅಲ್ಲಿದ್ದ ಸಮುದ್ರದಂತಿದ್ದ ರಾಜರ ಗುಂಪು, ಭೀಮಾರ್ಜುನರ ಹಿಂದೆ ಓಡಿಬಂದಿತು. ಆ ಸ್ವಯಂವರಕ್ಕೆ ಯಾದವರೂ ಬಂದಿದ್ದರು. ಆದರೆ,

**ದೃಷ್ಟುಂಹಿ ಕೇವಲಗತಿರ್ನತು ಕನ್ಯಕಾ ಯಾ ಅರ್ಥೇ**
**ನಚಾಪಮಿಹ ವೃಷ್ಣಿವರಾಃ ಸ್ಪೃಶಂತುಃ ।**
**ಇತ್ಯಾಜ್ಞಯವ ವರ ಚಕ್ರಧರಸ್ಯ ಲಿಪ್ಸಾಮಪ್ಯತ್ರ**
**ಚಕ್ರು ಹಿರನ್ಯೆವ ಯದು ಪ್ರವೀರಾಃ ॥೧೩೩॥**

"ನೀವೆಲ್ಲರೂ ಸ್ವಯಂವರವನ್ನು ಕೇವಲ ನೋಡಲಿಕ್ಕಾಗಿ ಬನ್ನಿರಿ. ಕನ್ಯೆಯ ಆಶೆಯಿಂದಲ್ಲ. ಯಾರೂ ಆ ಬಿಲ್ಲನ್ನು ಮುಟ್ಟಲೂಬಾರದು" ಇದು ಶ್ರೀಕೃಷ್ಣನ ಆಜ್ಞೆ. ಯಾದವರೆಲ್ಲರಿಗೂ ತಿಳಿದಿತ್ತು. ಕಾರಣ ಯಾದವ ವೀರರು ಯಾರೂ ಆ ಬಿಲ್ಲಿನ ಕಡೆ ಹಾಯಲಿಲ್ಲ.

ಭೀಮಸ್ತು ರಾಜಸಮಿತಿಂ ಪ್ರತಿಸಂಪ್ರಯಾತಾಂ
ದೃಷ್ಟ್ವೈವ ಯೋಜನ ದಶೋಚ್ಛ್ರಯಮಾಶು ವೃಕ್ಷಂ ।
ಆರುಜ್ಯ ಸರ್ವನೃಪತೀನಭಿ ತೋsಭ್ಯತಿಷ್ಠ ದ್ದೃಷ್ಟ್ವಾ ಚ
ಪಲಾಯನ ಪರಾಶ್ಚ ಬಭೂವುರೇತೇ ||೧೩೪||

ಭೀಮಸೇನನು ರಾಜಸಮೂಹ ಬರುತ್ತಿರುವುದನ್ನು ದೂರದಿಂದಲೇ ನೋಡಿದನು. ಹತ್ತುಯೋಜನ ವಿಶಾಲವಾದ ಒಂದು ವೃಕ್ಷವನ್ನೇ ಕಿತ್ತು ಅವರಿಗೆ ಎದುರಾಗಿ ನಿಂತನು. ಇದನ್ನು ಕಂಡ ರಾಜರು ಓಡಿ ಹೋಗುವದಲ್ಲಿ ಆಸಕ್ತಿಯನ್ನು ತೋರಿದರು.

ಶ್ರೀಕೃಷ್ಣನು ಬಲರಾಮನಿಗೆ ಪಾಂಡವರ ಪರಿಚಯ ಮಾಡಿದ್ದು.

ಭೀಮೋಯಮೇಷ ಪುರುಹೂತಸುತೋsಸ್ಯ ಏತೇ
ಪಾರ್ಥಾ ಇತಿಸ್ಮ ಹಲಿನೇ ಹರಿರಭ್ಯವೋ ಚತ್ ।
ದೃಷ್ಟ್ವೈವ ಸೋsಪಿ ಮುದಮಾಪ ಶಿವೇಶ್ಚ ಪೌತ್ರಃ
ಖಡ್ಗಂ ಪ್ರಗೃಹ್ಯ ಹರ್ಷಾತ್ಪರಿ ಪುಪ್ಲುವೇsತ್ರ ||೧೩೧||

"ಇವನು ಭೀಮಸೇನನು, ಈತನು ಅರ್ಜುನನು, ಇವರು ಧರ್ಮರಾಜ, ನಕುಲ, ಸಹದೇವರುಗಳು" ಹೀಗೆಂದು ಶ್ರೀಕೃಷ್ಣನು ಬಲರಾಮನಿಗೆ ತೋರಿಸುತ್ತ ಹೇಳಿದನು. ಬಲರಾಮನೂ ಅವರನ್ನು ಕಂಡು ಬಹು ಸಂತೋಷಪಟ್ಟನು. ಮೊಮ್ಮಗನಾದ ಸಾತ್ಯಕಿ ಅವರನ್ನು ಕಂಡು ಅತಿ ಹರ್ಷದಿಂದ ಖಡ್ಗವನ್ನು ಹಿಡಿದು ಕುಣಿದಾಡಹತ್ತಿದನು.

ವಿ. ವಿ. : ಈ ಸ್ವಯಂವರ ಘಟನೆ ನಮಗೆ ಏನು ತಿಳಿಸುತ್ತದೆ.

೧) ದ್ರುಪದನು ಗುರುಗಳ ವಾಕ್ಯ ಮತ್ತು ಮಾಡಿದ ಯಜ್ಞ ಎರಡರಲ್ಲೂ ವಿಶ್ವಾಸ ವಿಟ್ಟನು. ಅದಕ್ಕೆ ತಕ್ಕ ಫಲವೂ ದೊರೆಯಿತು.

೨) ಮಹರುದ್ರರನ್ನು ಪೂಜಿಸಿ, "ಅರ್ಜುನನಿಗೆ ಮಾತ್ರ ಎತ್ತಲು ಸಾಧ್ಯವಾಗುವ ಬಿಲ್ಲು, ಆತನಿಗಷ್ಟೇ ಸಾಧ್ಯವಾಗುವ ಗುರಿ' ಎರಡನ್ನೂ ವರ ರೂಪದಿಂದ ಪಡೆದನು. ಇದರಿಂದ ಕನ್ಯೆಯು ಇನ್ನೊಬ್ಬಳ ಸೊತ್ತು ಆಗಲೆಂದು ನಿಶ್ಚಯಿಸಿದನು.

೩) ಬ್ರಾಹ್ಮಣರ ಮಾತಿನಲ್ಲಿ ದೈವಾಂಶವಿರುತ್ತದೆ. ಕೆಲವೊಂದು ಸಲ ಅದು ಸತ್ಯವೂ ಆಗುವುದುಂಟು.

೪) ಮಾನವರಿಗೆ ರಾತ್ರಿ ಹೊತ್ತು ನೀರಿನಲ್ಲಿ ನಡೆಯುವುದು ನಿಷಿದ್ಧ.

೫) ಬಿಲ್ಲನ್ನು ಸಿದ್ಧಪಡಿಸಲು, ಗುರಿಯಿಟ್ಟು ಹೊಡೆಯಲು ಸಾಧ್ಯವಾಗಲಿಲ್ಲ. ಇದಕ್ಕೆ ಕೆಲವು ಕಾರಣಗಳು.

ರುದ್ರದೇವರ ವರ ಬಲದಿಂದ ಅರ್ಜುನನ ಹೊರತು ಇನ್ನಾರಿಗೂ ಆ ಕಾರ್ಯ ಸಾಧ್ಯವಿರಲಿಲ್ಲ. ತಾರತಮ್ಯದ ಪ್ರಕಾರ ಬಂದ ರಾಜರೆಲ್ಲರೂ, ರುದ್ರದೇವರಿಗಿಂತಲೂ ಕೆಳ ಮಟ್ಟದವರು. ಆ ಕಾರ್ಯ ಅವರಿಗೆ ಅಸಾಧ್ಯ.

೬) ನಿಯತ ಪತಿ–ಪತ್ನಿತ್ವ ತಪ್ಪುವಂತಿಲ್ಲ. ದ್ರೌಪದಿಯ ಅವತಾರವಾದದ್ದೇ ಪಾಂಡವರಿಗಾಗಿ ಅನ್ಯರಿಗೆ ದಕ್ಕಲು ಹೇಗೆ ಸಾಧ್ಯ?

ಮಾನವನು ತನ್ನ ಗುರಿ ಮುಟ್ಟಬೇಕಾದರೆ ಮೊದಲು ವಾಯುದೇವರ ಅನುಗ್ರಹ ನಿಶ್ಚಿತ. ಇದನ್ನು ಅರ್ಜುನ ತೋರಿಸಿಕೊಟ್ಟಿದ್ದಾನೆ. ಭೀಮ–ವಾಯುಗುರು ಪ್ರತ್ಯಕ್ಷ ಪರಮಾತ್ಮನನ್ನು ಅಪ್ರತ್ಯಕ್ಷ ಮನದಿಂದಲೇ ಒಲಿಸಲು ಸಾಧ್ಯ.

**ಪ್ರೀತೇಷು ಸರ್ವಯದುಷು ಪ್ರಪಲಾಯಿತೇಷು**
**ದುರ್ಯೋಧನಾದಿ ನೃಪತಿಷ್ವ ಖಿಲೇಷು ಭೀಮಾತ್ ।**
**ಕರ್ಣೋಽಭ್ಯ ಯಾದ್ಧರಿಹಯೊತ್ಮಜಮಾಶು**
**ಮದ್ರ ರಾಜೋಽಜಗಾಮ ಪವನಾತ್ಮಜ ಮೇವ ವೀರಃ ॥೧೩೬॥**

ಅರ್ಜುನನ ಗೆಲುವಿನಿಂದ ಎಲ್ಲ ಯಾದವರು ಸಂತುಷ್ಟಗೊಂಡರು. ಭೀಮನ ಬಲದಿಂದ ಬೆದರಿ ದುರ್ಯೋಧನ ಮೊದಲಾಗಿ ಸಕಲ ರಾಜರು ಓಡಿ ಹೋಗುತ್ತಿರಲು, ಕರ್ಣನು ಬಂದು ಅರ್ಜುನನಿಗೆ ಎದುರಾದನು. ಮದ್ರರಾಜನಾದ ಶಲ್ಯನು ಭೀಮನಿಗೆ ಎದುರಾಗಿ ಬಂದನು.

**ವಿಪ್ರೇಷು ದಂಡಪಟಧರ್ಘ ಮಹಾಜಿನಾನಿ**
**ಕೋಪಾತ್ ಕ್ಷಿಪತ್ಸ್ವನವಿನಾಶನ ಮತ್ರ ಭೂಯೊತ್ ।**
**ಕ್ಷತ್ರಸ್ಯ ವೈರತ ಇತಿ ದ್ರುಪದೇಚ ಕೃಷ್ಣಂ**
**ವಿಪ್ರಾಂಶ್ಚ ಯೊಚತಿ ಸಮೂರುತಿರಾರ ಶಲ್ಯಮ್ ॥೧೩೭॥**

ಭೀಮಾರ್ಜುನರ ಮೇಲೆ ಇತರ ರಾಜರು ಆಕ್ರಮಿಸುತ್ತಿರುವಾಗ, ಬ್ರಾಹ್ಮಣರು ಸಿಟ್ಟಿಗೆದ್ದರು. ಇದಕ್ಕೆ ಕಾರಣ, (ಬ್ರಾಹ್ಮಣ ವೇಷದಲ್ಲಿದ್ದ ಅರ್ಜುನ ಗೆದ್ದದ್ದು, ಭೀಮನು ಸಹಾಯಕನಾದದ್ದು "ಬ್ರಾಹ್ಮಣರು ಗೆದ್ದರೆ ಕ್ಷತ್ರಿಯರಿಗೇಕೆ ದುಃಖ?" ಎಂಬ ಭಾವನೆ ಅವರದಾಗಿತ್ತು. ಅದಕ್ಕಾಗಿ ಅವರು ತಮ್ಮಲ್ಲಿದ್ದ ಆಯುಧಗಳನ್ನು ಕೆಲವರು ದಂಡ (ಬಡಿಗೆ) ಗಳನ್ನು ಕೃಷ್ಣಾಜಿನಗಳನ್ನು ಬಗೆದು ಸೇಡನ್ನು ತೀರಿಸಿಕೊಂಡರು. ಕ್ಷತ್ರಿಯರ ವಿರುದ್ಧ, ಬ್ರಾಹ್ಮಣರ ಕ್ರೋಧವು ಕ್ಷತ್ರಿಯರಿಗೆ ಕೇಡನ್ನು ಮಾಡದಿರಲಿ, ಎಂದು ದ್ರುಪದರಾಜನು, ಶ್ರೀಕೃಷ್ಣನನ್ನು ಪ್ರಾರ್ಥಿಸಿದನು. ಬ್ರಾಹ್ಮಣರಿಗೂ ಬೇಡಿಕೊಂಡನು. ಇಂಥ ಪ್ರಸಂಗದಲ್ಲಿ ಭೀಮನು ಶಲ್ಯನೊಡನೆ ಯುದ್ಧಕ್ಕೆ ನಿಂತನು.

**ವೃಕ್ಷಂತ್ವಸೌ ಪ್ರತಿನಿಧಾಯಚ ಮದ್ರರಾಜಂ**
**ದೋರ್ಭ್ಯಾಂ ಪ್ರಗೃಹ್ಯ ಜವತೋಗಗನೇ ನಿಧಾಯ ।**
**ಬಂಧುತ್ವ ತೋ ಭುವಿಶನೈರದಧಾತ್ಸ ತಸ್ಯ**
**ವಿಜ್ಞಾಯ ವೀರ್ಯಮಗ ಮನ್ನಿಜ ರಾಜಧಾನೀಮ್ ॥೧೩೮॥**

ಭೀಮನು ಮೊದಲು ವೃಕ್ಷವನ್ನು ಹಿಡಿದು ಎದುರಿಸಿದ್ದನು. ಈಗ ಅದನ್ನು ಅಲ್ಲಿಟ್ಟು, ಶಲ್ಯ ರಾಜನ ಎರಡೂ ಬಾಹುಗಳನ್ನು ಹಿಡಿದು, ಆಕಾಶಕ್ಕೆ ಹಾರಿಸಿದನು. ಆದರೂ

ಬಂಧುವಾದ (ಸೋದರಮಾವ) ಪ್ರಯುಕ್ತ ಸಾಯದಿರಲಿ ಎಂದು, ಬೀಳುವವನನ್ನು ಹಿಡಿದು ಮೆಲ್ಲಗೆ ಭೂಮಿಯ ಮೇಲೆ ನಿಲ್ಲಿಸಿದನು. ಭೀಮನ ಸಾಮರ್ಥ್ಯವನ್ನು ಕಂಡ ಶಲ್ಯನು ತನ್ನ ರಾಜ್ಯಕ್ಕೆ ತೆರಳಿದನು.

**ಪಾರ್ಥೋಽಪಿ ತೇನ ಧನುಷಾಯುಯುಧೇಸ್ಯ ಕರ್ಣಂ**
**ಸೋಽಪುತ್ರ ಬಾಹುಬಲ ಮಾವಿರ ಮುತ್ರ ಚಕ್ರೇ**
**ತೌ ಧನ್ವಿನಾವ (ಮ) ನುಪ ಮೌ ಚಿರಮಸ್ಯ ತಾಂಚ**
**ಸೂರ್ಯೋತ್ಥ ಜೋಽತ್ರ ವಚನಂ ವ್ಯಥಿತೋ ಬಭಾಷೆ** ॥೧೩೯॥

ಇತ್ತ ಅರ್ಜುನನು, ತನ್ನ ಕೈಯಲ್ಲಿದ್ದ ಧನುವಿನಿಂದಲೇ (ಸ್ವಯಂವರದಲ್ಲಿ ತಂದದ್ದು) ಕರ್ಣನೊಡನೆ ಯುದ್ಧ ಮಾಡಿದನು. ಕರ್ಣನು ಅಷ್ಟೇ ಪರಾಕ್ರಮದಿಂದ ಹೋರಾಡಿದನು. ಇಬ್ಬರೂ ತಮ್ಮ ಯುದ್ಧ ಕೌಶಲವನ್ನು ತೋರಿಸಿದರು. ಅರ್ಜುನನ ಸಾಮರ್ಥ್ಯವನ್ನು ಕಂಡು ವ್ಯಥಿತನಾದ ಕರ್ಣನು ಹೀಗೆ ನುಡಿದನು.

**ತ್ವಂ ಫಲ್ಗುನೋ ಹರಿಹಯೋ ದ್ವಿಜಸತ್ತ ಪೋವಾ**
**ಮಾರ್ತಂ ನಮೇ ಪ್ರಮುಖತಃ ಸ್ಥಿತಿ ಮನ್ಯ ಈಷ್ಟೇ**
**ಯೋವಾಸ್ಮಿ ಕೋಽಪಿಯದಿತೇ ಕ್ಷಮಮದ್ಯ ಬಾಣಾನ್ಮುಂ**
**ಚೌನ್ಯಥ್ಯೈ ಹಿರಣ್ಯ ತಸ್ತ್ವಿತಿ ಪಾರ್ಥ ಆಹ** ॥೧೪೦॥

"ನೀನು ಅರ್ಜುನನೋ, ಇಂದ್ರನೋ, ಅಥವಾ ಮೂರ್ತಿಮತ್ತಾಗಿ ಬಂದಿರುವ ಬ್ರಾಹ್ಮಣರ ತಪಸ್ಸೇ ಇರಬೇಕು. ಇಲ್ಲದಿದ್ದಲ್ಲಿ ಈ ಮೂವರಲ್ಲದೆ ಬೇರಾರೂ ನನ್ನ ಮುಂದೆ ನಿಲ್ಲಲು ಸಾಧ್ಯವಿಲ್ಲ! ಎಂದು ಹೇಳಿದಾಗ, ಅರ್ಜುನನು "ನೀನು ಹೇಳಿದವರಲ್ಲಿ ನಾನೊಬ್ಬನು. ಶಕ್ತಿಯಿದ್ದರೆ ಯುದ್ಧ ಮಾಡು. ಬಾಣಗಳನ್ನು ಬಿಡು. ಇಲ್ಲದಿದ್ದರೆ ಯುದ್ಧದಿಂದ ಹಿಂದಿರುಗಿ ಹೋಗು" ಎಂದು ಹೇಳಿದನು.

ವಿ. ವಿ. : ಇಲ್ಲಿ ಕರ್ಣನು ಇತರರ ಹೆಸರುಗಳನ್ನು ಹೇಳುತ್ತ ನೀನು **"ಮೂರ್ತಿಮತ್ತಾಗಿ ಬಂದಿರುವ ಬ್ರಾಹ್ಮಣರ ತಪಸ್ಸೋ?"** ಎಂದು ಕೂಡ ಹೇಳಿದ್ದಾನೆ. ಇದರಿಂದ ಬ್ರಾಹ್ಮಣರ ತಪಸ್ಸು, ಅದರ ಸಾಮರ್ಥ್ಯ ಎಷ್ಟು ಎಂಬುದನ್ನು ಕರ್ಣನ ಬಾಯಿಯಿಂದ ಆಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಇದೇ ಅಭಿಪ್ರಾಯವನ್ನೇ ಭಾಗವತದಲ್ಲಿ **'ರಹೋಗಣ'** ರಾಜನು **'ಜಡಭರತನಿಗೆ'** ಹೇಳಿದ್ದಾನೆ. ನಾನು ಉರಿವ ಬೆಂಕಿಗಂಜೆ, ವಿಪ್ರರ ಕೋಪ, ಶಾಪಕ್ಕೆ ಮಾತ್ರ ಹೆದರುತ್ತೇನೆ" ಇದು ರಹೋಗಣನ ಅಭಿಪ್ರಾಯ.

ಹಿಂದೆ ಬ್ರಾಹ್ಮಣರು ತಪಸ್ಸಿನಿಂದ ಅಷ್ಟು ಶಕ್ತಿಶಾಲಿಗಳಾಗಿದ್ದರು. ಅಂತೆಯೇ ರಾಜ ಮಹಾರಾಜರು ಅವರನ್ನು ಕಂಡರೆ ಹೆದರುತ್ತಿದ್ದರು. ಅವರಿಗೆ ತೊಂದರೆಯಾಗ ದಂತೆ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಿದ್ದರು.

ಕಾರ್ಯಂ ನಮೇ ದ್ವಿಜವರೈಃ ಪ್ರತಿಯೋಧನೇನೇ
ತ್ಯುಕ್ತ್ವಾ ಯಯೌರವಿಸುತಃ ಸಸುಯೋಧನಾದ್ಯೈಃ
ನಾಗಾಹ್ವಯಂ ಪುರಮಥ ದ್ರುಪದಾತ್ಮಜಾಂತಾ
ಮಾದಾಯ ಚಾರ್ಜುನಯುತಃ ಪ್ರಯಯೌ ಸಭೀಮಃ ||೧೪೧||

"ನನಗೆ ಬ್ರಾಹ್ಮಣರೊಂದಿಗೆ ಯುದ್ಧ ಮಾಡಿ ಪ್ರಯೋಜನವಿಲ್ಲ" ಎಂದು ಹೇ
ಕರ್ಣನು ದುರ್ಯೋಧನನನ್ನು ಕೂಡಿಕೊಂಡು ಹಸ್ತಿನಾಪುರದ ಕಡೆಗೆ ನಡೆದನು. ಭೀಮನ
ದ್ರೌಪದಿ ಮತ್ತು ಅರ್ಜುನನನ್ನು ಕರೆದುಕೊಂಡು ನಡೆದನು.

ಅಗ್ರೇಽಶ್ವಿಪುತ್ರ ಸಹಿತಃ ಸತು ಧರ್ಮಸೂನುಃ
ಪ್ರಾಯೋತ್ಕುಲಾಲ ಗೃಹ ಮನ್ವಪಿ ಭೀಮ ಪಾರ್ಥೌ ।
ಭಿಕ್ಷೇತಿ ತೈರಭಿಹಿತೇ ಪ್ರಜಗಾದ ಕುಂತೀ
ಭುಙ್ಕ್ತಂ ಸಮಸ್ತ ಇತಿ ಪ್ರದದರ್ಶ ಕನ್ಯಾಮ್ ||೧೪೨

ಮುಂಭಾಗದಲ್ಲಿ ನಕುಲ ಸಹದೇವರುಗಳಿದ್ದರು. ಅವರ ಹಿಂದೆ ಧರ್ಮರಾ
ಅವರು ಕುಂಬಾರನ ಮನೆಯ ಕಡೆಗೆ ನಡೆದರು. ಭೀಮಾರ್ಜುನರು ಕೂಡ ಅವ
ಹಿಂದೆಯೇ ಇದ್ದರು. ಇಂದು ಭಿಕ್ಷೆ ಪ್ರಾಪ್ತವಾಯಿತು ಎಂದು ಪಾಂಡವರಿಂದ ಕೇಳಿ
ಕುಂತಿಯು, "ನೀವೆಲ್ಲರೂ ಸಮನಾಗಿ ಊಟ ಮಾಡಿರಿ" ಎಂದು ಹೇಳಿದಳು. ಆ ನಂತ
ಕನ್ಯೆಯನ್ನು ನೋಡಿದಳು.

ಪ್ರಾಮಾದಿಕಂ ವಚನಂ ನಮೃಷಾ ತಯೋಕ್ತಂ
ಪ್ರಾಯೋಹಿ ತೇನ ಕಥ ಮೇ ತದಿತಿಸ್ಮ ಚಿಂತಾ ।
ತೇಷಾಂ ಬಭೂವ ವಸುದೇವ ಸುತೋ ಹರಿಶ್ಚ
ತತ್ರಾಜಗಾಮ ಪರಮೇಣ ಹಿಸೌ ಹೃದೇನ ||೧೪೩

ಕುಂತಿಯು ಪ್ರಮಾದದಿಂದ ಹೇಳಿದ ಮಾತಾದರೂ, ಅದು ಸುಳ್ಳಾಗ
ಶಕ್ಯವಿಲ್ಲ. ನಾವೆಲ್ಲರೂ ಈಕೆ ಒಬ್ಬಳನ್ನು ಸ್ವೀಕರಿಸುವುದು ಹೇಗೆ? ಎಂದು ಚಿಂತೆಗೊಳಗಾದ
ಅದೇ ಸಮಯಕ್ಕೆ ಶ್ರೀಹರಿಯ ಅವತಾರನಾದ ವಸುದೇವ ಸುತ ಶ್ರೀಕೃಷ್ಣ ಅ
ಬಂದನು. ಪ್ರೀತಿಯಿಂದ ಅವರನ್ನು ಮಾತನಾಡಿಸಿ, ಅಲ್ಲಿಂದ ತನ್ನ ನಗರಕ್ಕೆ ಪ್ರಯ
ಮಾಡಿದನು.

ಸಂಭಾಷ್ಯತೈಃ ಸಭಗವಾನಮಿತಾತ್ಮ ಶಕ್ತಿಃ
ಪ್ರಾಯಾನ್ನಿಜಾಂ ಪುರಮಮಾಯದುಭಿಃ ಸಮಸ್ತೈಃ
ಜ್ಞಾತುಂಚತಾನ್ನಿಶಿ ಸತುದ್ರುಪದಃ ಸ್ವಪುತ್ರಂ
ಪ್ರಾಸ್ಥಾಪಯತ್ಸಚನಿಲೀನ ಇಮಾನ ಪಶ್ಯತ್ ||೧೪

ಷಡ್ಗುಣೈಶ್ವರ್ಯದಿಂದ ಕೂಡ, ಅಪರಿಮಿತ ಶಕ್ತಿಯುಳ್ಳ ಶ್ರೀಕೃಷ್ಣನು, ಪಾಂಡ
ಜೊತೆ ಮಾತನಾಡಿ, ಎಲ್ಲ ಯಾದವರನ್ನು ಕೂಡಿಕೊಂಡು ತನ್ನ ಪುರಕ್ಕೆ ನಡೆದ ನಂ

ಪಾಂಡವರು ಯಾರೆಂದು ತಿಳಿಯಲು ತನ್ನ ಪುತ್ರನಾದ ಧೃಷ್ಟದ್ಯುಮ್ನನನ್ನು ರಾತ್ರಿಯಲ್ಲಿ ಕಳಿಸಿದನು. ಅನು ಅಡಗಿದ್ದು, ಯಾರಿಗೂ ಕಾಣದಂತೆ, ಪಾಂಡವರನ್ನು ಕಂಡನು.

**ಭಿಕ್ಷಾನ್ನ ಭೋಜಿನ ಉತೋ ಭಗಿನೀಂ ನಿಜಾಂಚ**
**ತತ್ರಾತಿ ತೃಪ್ತ ಹೃದಯಾಮಥ ಯುದ್ಧ ವಾರ್ತಾಂ**
**ತೇಷಾಂ ನಿಶಮ್ಯನದತಾಂ ಘನವದ್ಗಂಭೀರಂ**
**ಕ್ಷತ್ರ್ರೋತ್ತಮಾ ಇತಿಮತಿಂದ ಚಕಾರ ವೀರಃ ||೧೪೫||**

ಆ ವೀರನಾದ ರಾಜಕುಮಾರನು, ಆ ಪಾಂಡವರು ಭಿಕ್ಷೆಯ ಅನ್ನವನ್ನು ಉಂಡು ಮಲಗಿರುವುದನ್ನು, ಜೊತೆಯಲ್ಲಿ ಸಂತೃಪ್ತಳಾದ ತಂಗಿಯನ್ನೂ ಕಂಡನು. ಅವರು ಮರಗಿ ಹರಟುವಾಗಲು ಕೂಡ ಗಂಭೀರವಾದ ಧ್ವನಿಗಳಲ್ಲಿ ಯುದ್ಧದ ವಿಷಯವನ್ನೆ ಮಾತನಾಡುತ್ತಿದ್ದರು. ಇಷ್ಟೆಲ್ಲವನ್ನು ಕಂಡು ಕೇಳಿದ ಧೃಷ್ಟದ್ಯುಮ್ನ ಇವರು ಶ್ರೇಷ್ಠ ಕ್ಷತ್ರಿಯರೆಂದು ನಿಶ್ಚಯಿಸಿದನು.

**ಪ್ರಾತಸ್ತು ತಸ್ಯ ಜನಿತುರ್ವಚಸಾ ಪುರೋಧಾಸ್ತಾ**
**ನ್ಗ್ಹಾ ಹ್ಯ ಮಂತ್ರ ವಿಧಿನಾ ಮರುತಾತ್ಮ ಜೇನ**
**ಸಂಪೂಜಿತೋಽತಿ ವಿದುಷಾ ಪ್ರತಿಗೃಹ್ಯತಾಂಶ್ಚ**
**ಪ್ರಾವೇಶಯನ್ಸ್ವ ಪತಿ ಗೇಹ ಮಮ್ಮೈವ ಮಾತ್ರಾ ||೧೪೬||**

ಬೆಳಿಗ್ಗೆ ಮಗನ ಮಾತನ್ನು ಕೇಳಿದ ದ್ರುಪದರಾಜನು, ಪುರೋಹಿತರನ್ನು ಕೂಡಿಕೊಂಡು, ಕೆಲವು ಮಂತ್ರ ವಿಧಿಗಳನ್ನು ಮಾಡಬೇಕೆಂದು, ಪಾಂಡವರು ಇದ್ದಲ್ಲಿಗೆ ಬಂದನು. ಮರುತಾತ್ಮ (ಭೀಮ)ನಿಂದ ಪೂಜಿಸಲ್ಪಟ್ಟವನಾಗಿ ಕುಂತಿಯ ಸಹಿತವಾಗಿ, ಪಾಂಡವರನ್ನು ತನ್ನ ಮನೆಗೆ ಕರೆದುಕೊಂಡು ಬಂದನು.

**ವಿ. ವಿ. :** ಈ ಶ್ಲೋಕದಲ್ಲಿ ಆಚಾರ್ಯರು ಸೂಚ್ಯವಾಗಿ ಒಂದು ವಿಷಯವನ್ನು ಇಟ್ಟಿದ್ದಾರೆ.

"ಮಾವನು ಅಳಿಯನಿಗೆ ಪೂಜಿಸಬೇಕು. ಅಳಿಯನು ಮಾವನಿಗೆ ಸತ್ಕರಿಸಬೇಕು. ಇದು ಲೋಕದ ರೂಢಿ" ಸ್ವಯಂವರದಲ್ಲಿ ಪಣವನ್ನು ಗೆದ್ದವರು ಅರ್ಜುನನು ಭೀಮನಲ್ಲ – ಆದರೆ ದ್ರುಪದರಾಜನು ಬಂದಾಗ ಪೂಜಿಸಿದವನು ಮರುತಾತ್ಮಜನು. ಅಂದರೆ ದ್ರೌಪದಿ, ಭಾರತಿದೇವಿಯ ಪೂರ್ಣಾಂಶಳು. ವಾಯುಪುತ್ರನಿಗಾಗಿಯೇ ಬಂದವಳು. ಮಿಕ್ಕ ದೇವತೆಗಳು ಭಾಗಶಃ ಎಂಬುದು ಸ್ಪಷ್ಟ.

**ತಾನಾಗತಾನ್ಸಮಭಿ ಪೂಜ್ಯನಿಜಾತ್ಮ ಜಾಂಚ**
**ವಿಪ್ರಾದಿ ಯೋಗ್ಯ ಪೃಥಗುಕ್ತ ಪದಾರ್ಥಜಾತೈಃ ।**
**ಪೂರ್ಣಾನ್ ಗೃಹಾಂಶ್ಚತುರ ಏವದಿದೇಶ ರಾಜಾ**
**ತತ್ರಾಯುಧಾದಿ ಪರಿಪೂರ್ಣ ಗೃಹಂಚ ತೇಽಗುಃ ||೧೪೭||**

ಆ ದ್ರುಪದರಾಜನು, ಬಂದ ಪಾಂಡವರನ್ನು, ತನ್ನ ಮಗಳನ್ನು ಚೆನ್ನಾಗಿ ಸತ್ಕರಿಸಿದನು. ಅವರಿಗೆ ನಾಲ್ಕು ಮನೆಗಳನ್ನು ತೋರಿಸಿ ನಿಮಗೆ ಬೇಕಾದುದರಲ್ಲಿ ವಾಸ

ಮಾಡಿರಿ ಎಂದು ಹೇಳಿದನು. ಪಾಂಡವರು, ಆಯುಧಗಳಿಂದ ಸಜ್ಜಿತವಾದ ಕ್ಷತ್ರಿಯರ ವಾಸಕ್ಕೆ ಯೋಗ್ಯವಾದ ಮನೆಯನ್ನೇ ಪ್ರವೇಶಿಸಿದರು.

ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರ ಮನೋವೈಜ್ಞಾನಿಕ ದೃಷ್ಟಿ, ಮತ್ತು ದ್ರುಪದನ ಪ್ರವೃತ್ತಿ ವ್ಯಕ್ತವಾಗುತ್ತವೆ.

೧) ಮಾನವನು ತನಗೆ ಅಭಿರುಚಿಯುಳ್ಳ ಪದಾರ್ಥಗಳನ್ನು ಬಯಸುವುದು, ಅಭಿರುಚಿಯ ವಿಷಯಗಳತ್ತ ಗಮನಿಸುವುದು ಸ್ವಾಭಾವಿಕ. ಇದು ಅವನ ಮನೋಧರ್ಮ.

೨) ದ್ರುಪದರಾಜನು ಮಗನ ಮಾತನ್ನು ನಂಬಿ ಸುಮ್ಮನೆ ಕೂಡಬಹುದಾಗಿತ್ತು. ಆದರೆ ಅದಕ್ಕೆ ಮನದ ದುಗುಡ ನಿಲ್ಲಲಿಲ್ಲ. ಜೊತೆಯಲ್ಲಿ ಮಗಳ ಮೇಲಿನ ಮಮತೆ ಸುಮ್ಮನಿರಗುಡಲಿಲ್ಲ. ಕಾರಣ ಅವನು ಪಾಂಡವರ ವರ್ಣ ಪರೀಕ್ಷೆಗೆಂದೇ ನಾಲ್ಕು ಕೋಣೆಗಳನ್ನು ಸಿದ್ಧಪಡಿಸಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗೆ ಬೇಕಾದ, ಅವರಿಗೆ ಆಕರ್ಷಕವಾದ ವಸ್ತುಗಳನ್ನಿಟ್ಟು, ಪಾಂಡವರಿಗೆ ಆಯ್ದುಕೊಳ್ಳಲು ಹೇಳಿದನು. ಪಾಂಡವರು ಮೂಲತಃ ಕ್ಷತ್ರಿಯರು, ವೀರರು. ಅವರಿಗೆ ಇತರ ಮನೆಗಳು ಹಿಡಿಸಬಹುದೇ? ಕಾರಣ ಅವರು ತಮಗೆ ಯೋಗ್ಯವಾದ ಮನೆಯನ್ನೇ ಪ್ರವೇಶಿಸಿದರು.

**ಚೇಷ್ಟಾಸ್ವರಾಕೃತಿ ವಿವಕ್ಷಿತ ವೀರ್ಯಶೌರ್ಯ**
**ಪ್ರಾಗಲ್ಭ್ಯ ಪೂರ್ವಕ ಗುಣೈಃ ಕ್ಷಿತಿಭರ್ತೃ ಪುತ್ರಾನ್ ।**
**ವಿಜ್ಞಾಯ ತಾನ್ ದ್ರುಪದ ಏತ್ಯ ಚ ಧರ್ಮಸೂನುಂ**
**ಪಪ್ರಚ್ಛ ಕೋಽಸಿ ನರವರ್ಯವದ ಸ್ವಸತ್ಯಮ್ ॥೧೪೮॥**

ಅವರ ಚೇಷ್ಟೆ (ಕಾಯ) ಗಳಿಂದ, ಧ್ವನಿಯಿಂದ, ಆಕಾರ, ಮಾತುಗಳ ಪ್ರದರ್ಶನ, ವೀರ್ಯ, ಶೌರ್ಯ ಮತ್ತು ಚಾತುರ್ಯ ಮೊದಲಾದ ಗುಣಗಳನ್ನು ನೋಡಿದಾಗ, ನೀವು ರಾಜಪುತ್ರರೆಂದು ತಿಳಿದು ಧರ್ಮರಾಜನ ಹತ್ತಿರ ಬಂದು, ಎಲೊ ನರವರ! ರಾಜ! ನೀನಾರು? ಸತ್ಯವಾಗಿ ಹೇಳು ಎಂದು ದ್ರುಪದನು ಕೇಳಿದನು.

**ಸಪ್ರಶ್ರಯಮಂದಹಸಿತಃ ಕಿಮಿಹಾದ್ಯರಾಜ ನ್ಪೂರ್ವಂ**
**ಹಿ ವರ್ಣವಿಷಯೋಽನ ವಿಶೇಷ ಉಕ್ತಃ**
**ಪುತ್ರ್ಯಾಸ್ತ್ವತೇಽತ್ರವಸುತೇ ಸತುಲಕ್ಷ್ಯವೇಧ**
**ಉಕ್ತೋಽನರೇಂದ್ರ ಸಮಿತೌ ಸಕೃತೋಽಪ್ಯನೇನ ॥೧೪೯॥**

ಆಗ ಆ ಧರ್ಮರಾಜನು ಮುಗುಳು ನಗೆಯಿಂದ, ಎಲೈ ರಾಜನೇ! ನಿನ್ನೆ ಮಗಳ ಸ್ವಯಂವರದ ಕಾಲದಲ್ಲಿ, ರಾಜರ ಸಭೆಯಲ್ಲಿ ಇಂಥ ವರ್ಣದವರೇ ಇರಬೇಕು ಎಂದು ಹೇಳಿಲ್ಲ. ಕೇವಲ 'ಲಕ್ಷ್ಯವೇಧ' ಹೇಳಿದ್ದಾನೆ. ಅದನ್ನು ನನ್ನ ತಮ್ಮ ಇಲ್ಲಿ ಮಾಡಿದ್ದಾನೆ. ಈ ವರ್ಣವಿಷಯ ಏಕೆ ಕೇಳುತ್ತೀ? ಎಂದು ಉತ್ತರಿಸಿದನು.

ಏವಂಬ್ರುವಾಣಮಥ ತಂ ಪೃಥಯಾಸಹೈವ
ರಾಜಾವದೇತಿ ಪುನರೇವಯುಯಾಚ ಏಷಃ ।
ಸರ್ವಂ ವ್ಯಥಾಪ್ಯ ವದತಾಂ ಸ ಚೇತನ ತುಷ್ಟೋ
ವಾಚಂ ಜಗಾದ ಕೃತಕೃತ್ಯ ಇಹಾಸಮದ್ಯ ॥೧೫೦॥

ಧರ್ಮರಾಜನು ಈ ರೀತಿ ಹೇಳಿದಾಗ ದ್ರುಪದರಾಜನಿಗೆ ಮನಸ್ಸಿಗೆ ಸಮಾಧಾನವಾಗಲಿಲ್ಲ. ಮತ್ತೆ ಮತ್ತೆ ಅದೇ ವಿಷಯವನ್ನೇ ಧರ್ಮರಾಜನಿಗೂ ಕುಂತಿಗೂ ಯಾಚಿಸಿ ಬೇಡಿಕೊಂಡನು. ಆಗ ಕುಂತಿಯು ಎಲ್ಲವನ್ನು ವಿವರವಾಗಿ (ತಾವು ಪಾಂಡವರೆಂಬುದನ್ನು) ತಿಳಿಸಿದಳು. ಅದನ್ನು ಕೇಳಿದ ದ್ರುಪದ ರಾಜನು ಸಂತುಷ್ಟನಾಗಿ, ಇಂದಿಗೆ ನನ್ನ ಸ್ವಯಂವರದ ಯೋಜನೆ ಫಲಿಸಿತು. ನಾನು ಕೃತಕೃತ್ಯನಾದೆನು ಎಂದು ನುಡಿದನು.

ಪಾರ್ಥಾರ್ಥಮೇವಹಿ ಮಯಷ ಕೃತಃ ಪ್ರಯತ್ನ ಸ್ತ್ವಂ
ಫಲ್ಗುನೋಽನ್ಯ ಉತವಾದ್ಯಕರಂ ಸುತಾಯಾಃ।
ಗೃಹ್ಣಾ ತ್ವಿತೀರಿತ ಇಮಂ ಸತುಧರ್ಮಸೂನು ರಾಹಸ್ಮ
ಸರ್ವಇತಿ ಮೇಮನಸಿ ಪ್ರರೂಢಮ್ ॥೧೫೧॥

"ಪಾರ್ಥನಿಗೋಸ್ಕರವೆಂದೇ ನಾನು ಈ ಪ್ರಯತ್ನ ಮಾಡಿದ್ದೇನೆ. ಈಗ ಫಲ್ಗುಣನಾಗಲಿ, ಅಥವಾ ಇನ್ನಿತರ ಪಾಂಡವರಲ್ಲಿ, ಯಾರಾದರೂ ನನ್ನ ಮಗಳ ಪಾಣಿಗ್ರಹಣ ಮಾಡಲೆಂಬುದೇ ನನ್ನ ಆಶೆ" ಎಂದು ಹೇಳಿದಾಗ ಧರ್ಮರಾಜನು "ನಾವು ಐದು ಜನ ಕೂಡಿಯೇ ಪಾಣಿಗ್ರಹಣ ಮಾಡಬೇಕೆಂದು ನಿಶ್ಚಯಿಸಿದ್ದೇವೆ" ಎಂದು ಹೇಳಿದನು.

ನಾತ್ರ ಪ್ರಮಾ ಮಮಹೃದಿ ಪ್ರತಿಭಾತ್ಯ ಥಾಪಿ
ಧರ್ಮಾ ಚಲಾಮಮಮತಿರ್ಹಿತದೇವಮಾನಂ ।
ಇತ್ಯುಕ್ತ ವತ್ಯಪಿ ಸಹೈವ ಸುತೇನ ರಾಜಾ ನೈವೇಚ್ಛ
ದತ್ರ ಭಗವಾನಸಮಚ್ಛ ಕೃಷ್ಣಃ ॥೧೫೨॥

"ಈಗ ಇದಕ್ಕೆ ಶಾಸ್ತ್ರ ಪ್ರಮಾಣವು ನನ್ನ ಬುದ್ಧಿಗೆ ಹೊಳೆಯಲೊಲ್ಲದು. ಆದರೂ ನನ್ನ ಮನಸು ಎಂದೂ ಧರ್ಮ ಮಾರ್ಗ ಬಿಟ್ಟು ಚಲಿಸಲಾರದು. ಕಾರಣ ಇದು ದೈವ ಸಮ್ಮತವೇ" ಎಂದು ಧರ್ಮರಾಜನು ನುಡಿದಾಗ, ದ್ರುಪದರಾಜನು ಆತನ ಮಗನು ಆ ಮಾತಿಗೆ ಒಪ್ಪಲಿಲ್ಲ. ಅಲ್ಲದೆ ಅವರು ಈ ವಿಷಯದಲ್ಲಿ ಚಿಂತೆಗೊಳಗಾದರು. ಅಷ್ಟರಲ್ಲಿ ಅಲ್ಲಿಗೆ ಭಗವಾನ್ (ಕೃಷ್ಣಃ) ವ್ಯಾಸರೇ ಬಂದರು.

ವ್ಯಾಸಂ ತಮೀಕ್ಷ್ಯ ಭಗವಂತಮಗಣ್ಯ ಪೂರ್ಣ
ನಿತ್ಯಾವ್ಯಯಾತ್ಮ ಗುಣಮಾಶು ಸಮಸ್ತ ಏವ ।
ನತ್ವಾಭಿ ಪೂಜ್ಯ ವರಪೀಠಗತಸ್ಯ ಚಾಜ್ಞಾ
ಮಾದಾಯ ಚೋಪವಿವಿಶುಃ ಸಹಿತಾಸ್ತ ದಂತೇ ॥೧೫೩॥

ಅಗಣ್ಯ ಗುಣಗಳಿಂದ ಪೂರ್ಣನಾದ, ನಿತ್ಯನೂ, ಅವ್ಯಯನು, ಪರಮಾತ್ಮನು ಭಗವಂತನೂ ಆದ ವ್ಯಾಸರು ಬಂದದ್ದನ್ನು ಎಲ್ಲರೂ ನೋಡಿ, ಅವರಿಗೆ ನಮಿಸಿ,

ಶ್ರೇಷ್ಠವಾದ ಪೀಠದಲ್ಲಿ ಕುಳ್ಳಿರಿಸಿ, ಪೂಜಿಸಿದರು. ನಂತರ ಅವರ ಆಜ್ಞೆಯನ್ನು ಪ್ರತೀಕ್ಷಿಸುತ್ತ ಹತ್ತಿರದಲ್ಲಿ ಬಂದು ಕುಳಿತರು.

ದ್ರೌಪದಿ ದೇವಿಯರಲ್ಲಿ ಅಡಕವಾಗಿದ್ದ ಪಂಚದೇವಿಯರ ವಿವರ.

**ಕೃಷ್ಣಸ್ತ್ವಾಹ ನೃಪತಿಂ ಪ್ರತಿದೇಹಿ ಕನ್ಯಾಂ**
**ಸರ್ವೇ ಭ್ಯ ಏವ ವೃಕ್ಷವಾಯು ಪುರಾದರಾಹಿ ।**
**ನಾಸತ್ಯದಸ್ರ ಸಹಿತಾ ಇಮ ಏವ ಇಂದ್ರಾಃ**
**ಪೂರ್ವೇಚ ಸಂಪ್ರತಿತ ನಶ್ಚ ಹರೇ ರ್ಹಿಪಶ್ಚಾತ್ ॥೧೫೪॥**

ಆಗ ವೇದವ್ಯಾಸರು, ರಾಜನನ್ನು ಕುರಿತು, "ನಿನ್ನ ಮಗಳನ್ನು ಈ ಐದು ಜನರಿಗೆ ಕೊಟ್ಟು ವಿವಾಹ ಮಾಡು. ಇವರು ಸಾಮಾನ್ಯರಲ್ಲ. ಯಮಧರ್ಮರಾಜನೇ ಧರ್ಮರಾಜ, ವಾಯುವೇ ಭೀಮನು, ಇಂದ್ರನೇ ಅರ್ಜುನನು, ಅಶ್ವಿನಿ ದೇವತೆಗಳೇ ನಕುಲ ಸಹದೇವರುಗಳು. ಅವರೇ ಇಂದು ಪಾಂಡವರಾಗಿ ಹುಟ್ಟಿದ್ದಾರೆ. ಇವರೆಲ್ಲರೂ ಪೂರ್ವದಲ್ಲಿ ಇಂದ್ರ ಪದವಿಯನ್ನು ಆಳಿದ್ದಾರೆ" ಎಂದು ಹೇಳಿದರು.

**ಏಷಾಂ ಸ್ತ್ರಿಯಶ್ಚ ನಿಖಿಲಾ ಅಪಿ ಚೈಕ ದೇಹಾಃ**
**ಪುತ್ರೀ ತವೈವ ನತತೋಽತ್ರ ವಿರುದ್ಧ ತಾಹಿ ।**
**ಇತ್ಯುಕ್ತ್ವ ವತ್ಯ ಪಿಯದಾ ದ್ರುಪದಶ್ಚ ಕಾರ**
**ಸಂವಾದಿನೀಂ ನದಿಯ ಮೇನಮಥಾ ಹ ಕೃಷ್ಣಃ ॥೧೫೫॥**

"ಈ ಪಂಚಪಾಂಡವರ ಎಲ್ಲ ಪತ್ನಿಯರು ಒಂದೇ ಶರೀರವುಳ್ಳವರಾಗಿ ನಿನ್ನ ಮಗಳಾಗಿ ಹುಟ್ಟಿದ್ದಾರೆ. ಆದ್ದರಿಂದ ಐವರ ಮದುವೆ ಒಬ್ಬಳೊಂದಿಗೆ ಧರ್ಮ ವಿರುದ್ಧ ವಾಗಲಾರದು" ಈ ರೀತಿ ವೇದವ್ಯಾಸರು ಹೇಳಿದಾಗಲೂ, ಆ ರಾಜನಿಗೆ ತನ್ನ ಮಗಳನ್ನು ಐವರಿಗೆ ಕೊಡಲು ಬುದ್ಧಿಯು ಒಪ್ಪಲಿಲ್ಲ. ಆಗ (ಕೃಷ್ಣ) ವ್ಯಾಸರು ಪುನಃ ಹೇಳಿದರು.

**ದಿವ್ಯಂಹಿ ದರ್ಶನಮಿದಂ ತವದತ್ತ ಮದ್ಯಪಶ್ಯಾಶು**
**ಪಾಂಡುತನಯಾ ನ್ದಿವಿ ಸಂಸ್ಥಿತಾಂ ಸ್ತ್ವಂ ।**
**ಏತಾಂಚತೇಽಮಹಿತರಂ ಸಹತ್ಯೈಃ ಪೃಥಕ್**
**ಸ್ಥಾಂ ತಲ್ಲಕ್ಷಣೈಃ ಸಹ ತತಃ ಕುರುತೇ ಯಥೇ ಷಮ್ ॥೧೫೬॥**

"ಈಗ ನಿನಗೆ ದಿವ್ಯ ದೃಷ್ಟಿಯನ್ನು ಕೊಟ್ಟಿದ್ದೇನೆ. ಅದರಿಂದ ದೇವಲೋಕದಲ್ಲಿ ಮೂಲರೂಪದಲ್ಲಿರುವ ಪಾಂಡವರನ್ನು ನೋಡು. ಅವರವರ ಜೊತೆಯಲ್ಲಿ ಅವರವರ ಪತ್ನಿಯರನ್ನು ಬೇರೆ ಬೇರೆಯಾಗಿ ಕಾಣು. ಈಗ ಆ ಐದು ಜನ ಸ್ತ್ರೀಯರು ಸಲ್ಲಕ್ಷಣಗಳಿಂದ ನಿನ್ನ ಮಗಳಲ್ಲಿ ವಾಸವಾಗಿದ್ದಾರೆ. ಅವರನ್ನೂ ನೋಡು. ನಂತರ ನಿನ್ನ ಇಚ್ಛೆಯಂತೆ ವರ್ತಿಸು" ಎಂದು ಹೇಳಿದರು.

ಇತ್ಯುಕ್ತ ವಾಕ್ಯಮನುತಾನ್ಸ ದದರ್ಶರಾಜಾ
ಕೃಷ್ಣ ಪ್ರಸಾದ ಬಲತೋ ದಿವಿತಾದ್ಭಶಾಂಶ್ಚ ।
ಏತಾನ್ನಿಶಾಮ್ಯ ಚರಣೌ ಜಗದೀಶಿ ತುಶ್ಚ
ಭೀತೋ ಜಗಾಮ ಶರಣ ತದನಾದರೇಣ ॥೧೫೭॥

ಶ್ರೀ ವ್ಯಾಸರು ಹೇಳಿದ ಮಾತಿಗನುಸಾರವಾಗಿ, ಪರಮಾತ್ಮನ ಅನುಗ್ರಹ ಬಲದಿಂದ, ದ್ರುಪದ ರಾಜನು ದೇವಲೋಕದಲ್ಲಿರುವ ಪಾಂಡವರ ಮೂಲರೂಪದಲ್ಲಿ, ಭಾರತಿದೇವಿ ಮೊದಲ್ಗೊಂಡು ಅವರವರ ಹೆಂಡಂದಿರನ್ನು ಕಂಡನು. "ನಾನು ವ್ಯಾಸರ ಮಾತಿನಲ್ಲಿ ವಿಶ್ವಾಸ ಮಾಡಲಿಲ್ಲವಲ್ಲ" ಎಂದು ಭಯಗೊಂಡು, ಜಗದೀಶನಾದ ವ್ಯಾಸರಿಗೆ ಶರಣಾಗತನಾದನು.

ದತ್ವಾ ಽಭಯಂ ಸ ಭಘವಾನ್ದ್ರುಪದಸ್ಯ ಕಾರ್ಯೇ
ತೇನೋ ಮಿತಿ ಸ್ಮ ಕಥಿತೇ ಸ್ವಯಮೇವ ಸರ್ವಾಂ ।
ವೈವಾಹಿ ಕೀಂ ಕೃತಿ ಮಥವ್ಯದದಾ ಚ್ಛ ಧೌಮ್ಯಯುಕ್ತ:
ಕ್ರಮೇಣ ಜಗೃಹು ರ್ನಿಖಿಲಾಶ್ಚ ಪಾಣಿಮ್ ॥೧೫೮॥

ಶ್ರೀ ವೇದವ್ಯಾಸರು ದ್ರುಪದ ರಾಜನಿಗೆ ಅಭಯವನ್ನು ಕೊಟ್ಟರು. ದ್ರುಪದ ರಾಜನು ಐವರಿಗೆ ತನ್ನ ಮಗಳನ್ನು ಕೊಡಲು ಒಪ್ಪಿದಾಗ ವ್ಯಾಸರು 'ಬಂ' ಹಾಗೇ ಆಗಲಿ, ಎಂದು ಹೇಳಿ, ತಾವೇ ಸ್ವತಃ ನಿಂತು, ಧೌಮ್ಯಾಚಾರ್ಯರ ಮುಂದಾಳ್ತನದಲ್ಲಿ ವಿವಾಹದ ಎಲ್ಲ ಸಿದ್ಧತೆಗಳನ್ನು ಮಾಡಿದರು. ನಂತರ ಸಕ್ರಮವಾಗಿ ಅಂದರೆ (ಜೇಷ್ಠತೆಯ ಪ್ರಕಾರ) ಧರ್ಮರಾಜನಿಂದ ಪ್ರಾರಂಭವಾಗಿ, ಐವರೂ ಪಾಂಡವರು ದ್ರೌಪದಿಯ ಪಾಣಿಗ್ರಹಣ ಮಾಡಿದರು. (ವಿವಾಹ ನೆರವೇರಿತು).

ವಿ. ವಿ. : ಮೇಲಿನ ಘಟನೆಯನ್ನು ಓದಿದಾಗ, ಓದುಗರಲ್ಲಿ ಈ ಕೆಲವು ಪ್ರಶ್ನೆಗಳು ಹುಟ್ಟಿಕೊಳ್ಳುವವು.

೧) ಪಾಂಡವರೆಲ್ಲರೂ ಪೂರ್ವದಲ್ಲಿ ಇಂದ್ರರಾಗಿದ್ದರೇ?

೨) ದ್ರೌಪದಿ ದೇವಿಯ ದೇಹದಲ್ಲಿ ಐದು ಜನ ಸ್ತ್ರೀಯರು ಇದ್ದದ್ದು ನಿಜವೇ? ಸಮಾಧಾನ ಮೊದಲಿನ ಪ್ರಶ್ನೆಗೆ ಆಚಾರ್ಯರೆ ಇನ್ನೊಂದೆಡೆಯಲ್ಲಿ ಸ್ಪಷ್ಟಪಡಿಸಿದ್ದಾರೆ. "ಇಮ ಏವ ಇಂದ್ರಾಃ ಪೂರ್ವೇಚ" ಎಂಬ ಮಾತಿನಿಂದ ಇವರೆಲ್ಲರೂ ಪೂರ್ವದಲ್ಲಿ ಇಂದ್ರ ಪದವಿಯನ್ನು ಪಡೆದವರು ಎಂದು ತಿಳಿಯುತ್ತದೆ. ಪ್ರಥಮ ಇಂದ್ರನು ಯಜ್ಞನಾಮಕ ಪರಮಾತ್ಮ ನಂತರ ನಾಸತ್ಯದಸ್ರರಿಂದ ಹಿಡಿದು ಯಮ—ವಾಯು ಪರ್ಯಂತರ ಎಲ್ಲರೂ ಇಂದ್ರರೇ. ಪುರಂದರನೆಂಬವನು ಹಿಂದಿನ ಕಲ್ಪದಲ್ಲಿ ಇಂದ್ರನಾಗಿದ್ದರೆ ಇಂದಿನ ವೈವಸ್ವತ ಮನ್ವಂತರದಲ್ಲಿ ಅರ್ಜುನನಿಗೆ ಇಂದ್ರಪದ ಪ್ರಾಪ್ತಿ. ೬ನೇ ಮತ್ತು ೭ನೆಯ ಇಂದ್ರ ಪದವಿ ಒಬ್ಬನಿಗೆಯೇ ಇದ್ದ ಕಾರಣ ಪಂಚೇಂದ್ರರೆಂದು ಹೇಳಿದ್ದಾರೆ.

೨ ನೇ ಸ್ವಾರೋಚಿಕ್ಷ ಮನ್ವಂತರದಲ್ಲಿ ರೋಚನ ಅಂಬೋ ಹೆಸರಿಂದ ವಾಯು ದೇವರು ಇಂದ್ರ ಪದವಿ ಆಳಿದ್ದಾರೆ.

೩. ನೇ ಮನ್ವಂತರದಲ್ಲಿ ಸತ್ಯಜಿತ ಅಂಬೊ ಹೆಸರಿಂದ ಯಮಪರ್ವ ರಾಜರು ಇಂದ್ರ ಪದವಿ ಆಳಿದ್ದಾರೆ. ೪,೫ ರಲ್ಲಿ ಅಶ್ವಿನಿ ದೇವತೆಗಳು ೬.೭ ರಲ್ಲಿ ಇಂದ್ರದೇವರು. ಪದವಿ ಒಬ್ಬನಿಗೆಯೇ ಇದ್ದ ಕಾರಣ ಪಂಚೇಂದ್ರರೆಂದು ಹೇಳಿದ್ದಾರೆ.

ಎರಡನೆಯ ಪ್ರಶ್ನೆಗೆ ಇದಕ್ಕೂ ಮೊದಲು ಬೆಳಕಿನ ಉದಾಹರಣೆ ಕೊಟ್ಟು, ಸ್ಪಷ್ಟ ಪಡಿಸಲಾಗಿದೆ. ಬೆಳಕಿನಲ್ಲಿ ಅನೇಕ ಬಣ್ಣಗಳು ಅಡಕವಾಗಿದ್ದರೂ, ನಮಗೆ ಕಾಣುವುದು ಬಲಿಯ ಬಣ್ಣ ಮಾತ್ರ.

ಇದನ್ನೇ ಇನ್ನೊಂದು ಉದಾಹರಣೆಗೆ – **'ಗಾಳಿ'** ಯಿಂದ ಸ್ಪಷ್ಟಪಡಿಸಬಹುದು. ಗಾಳಿ ಒಂದೇ ಅನಿಲ ಎಂದು ತಿಳಿದರೂ ಅದರಲ್ಲಿ ಅನೇಕ ಘಟಕಗಳು ಇವೆ ಎಂದು ವಿಜ್ಞಾನಿಗಳು ಮಾತ್ರಬಲ್ಲರು. ನಮಗೆ ಅನುಭವವಾಗುವುದು ಗಾಳಿಯೊಂದೇ. ಇದನ್ನು ಪ್ರಸಂಗ ಬಂದಾಗ ಹೆಚ್ಚಾಗಿ ವಿವರಿಸೋಣ.

**ಪಾಂಚಾಲಕೇಷು ಚ ಮಹೋತ್ಸವ ಆಸರಾಜಾ**
**ತುಷ್ಟೋಽಭವತ್ಸಹ ಪುತ್ರೈಶ್ಚ ನಿಜೈಶ್ಚ ಸರ್ವೈಃ ।**
**ಪೌರೈಶ್ಚ ಜಾನಪದಿಕೈಶ್ಚ ಯಥೈವ ರಾಮೇ ದತ್ವಾಸುತಾಂ**
**ಜನಕ ಆಸ ಮುದಂತತೋಽನು ||೧೫೯||**

ಆ ಮದುವೆಯಿಂದ, ಪಾಂಚಾಲ ದೇಶದ ಜನರು, ಪೌರರು, ಪ್ರಜೆಗಳು ಸ್ವತಃ ದ್ರುಪದರಾಜ, ಆತನ ಇತರ ಮಕ್ಕಳು, ಬಂಧು ಬಳಗದವರು ಎಲ್ಲರೂ ಸಂತುಷ್ಟ ರಾದರು ಎಂದು ವಿವರಿಸುತ್ತ ಜನಕನು ಜಾನಕಿಯನ್ನು ಶ್ರೀರಾಮನಿಗೆ ಕೊಟ್ಟು, ಮದುವೆ ಮಾಡಿದಾಗ ಆಗಿನ ಜನರು ಹೇಗೆ ಸಂತುಷ್ಟಗೊಂಡಿದ್ದರೋ, ಎಂದು ಹೋಲಿಕೆ ಯನ್ನಿತ್ತಿದ್ದಾರೆ.

ವಿ. ವಿ. : ಇಲ್ಲಿ ಪ್ರಜರ, ಪರಿವಾರದ ಆನಂದವನ್ನು ಮಾತ್ರ ಗಮನಿಸಬೇಕು. ಸೀತಾ–ರಾಮರನ್ನು ಇನ್ನೊಬ್ಬರಿಗೆ ಹೋಲಿಸಲು ಸಾಧ್ಯವಿಲ್ಲ. ಅವರ ಹೋಲಿಕೆ ಅವರಿಗೆ.

**ಉದ್ವಾಹ್ಯ ತತ್ರ ನಿವಸತ್ಸು ಚ ಪಾಂಡವೇಷು**
**ಕೃಷ್ಣಸ್ತ್ವೇವ ರಾಮಸಹಿತಃ ಸಹಯಾದವೈಶ್ಚ**
**ಆದಾಯ ಪಾರಿಬರ್ಹಂ ಬಹುಲಂ ಸಕೃಷ್ಣ**
**ಆಯಾನ್ಮುದೈವ ಪೃಥಯಾ ಸಹಿತಾಂಶ್ಚ ಪಾರ್ಥಾನ್ ||೧೬೦||**

ಮದುವೆಯ ನಂತರ ಪಾಂಡವರು ಪಾಂಚಾಲ ದೇಶದಲ್ಲಿಯೇ ಇದ್ದುದನ್ನು ತಿಳಿದ ಶ್ರೀಕೃಷ್ಣನು, ಬಲರಾಮ ಮತ್ತು ಯಾದವರ ಸಹಿತನಾಗಿ, ಮದುವೆ ಕಾಲಕ್ಕೆ ಕೊಡಬೇಕಾದ ಉಡುಗೊರೆ (ವಸ್ತ್ರ, ಆಭರಣ, ಭೂಷಣ) ತೆಗೆದುಕೊಂಡು, ಸಂತೋಷ ದಿಂದ ಕುಂತಿಯ ಸಹಿತರಾಗಿ ಇದ್ದ ಪಾಂಡವರ ಹತ್ತಿರ ಬಂದನು.

**ದೃಷ್ಟ್ವಾಗತಂ ಮುಮುದುರಾಶು ಕುರುಪ್ರವೀರಾ**
**ಆಶ್ಲಿಷ್ಯ ಕೃಷ್ಣ ಮಥನೇಮುರ ಸೌ ಚ ಕೃಷ್ಣಾಂ**
**ದೃಷ್ಟ್ವಾಪ್ರದಾಯ ಗೃಹಯೋಗ್ಯ ಸಮಸ್ತ ಭಾಂಡಂ**
**ಸೌವರ್ಣಮೇಭ್ಯ ಉರುಭೂಷಣ ಮಚ್ಯುತೋಽದಾತ್ ||೧೬೧||**

ಬಂದಿರುವ ಕೃಷ್ಣನನ್ನು ನೋಡಿಯೇ ಪಾಂಡವರು ಆನಂದಪಟ್ಟರು. ಆತನನ್ನು ಆಲಂಗಿಸಿ, ನಮಸ್ಕರಿಸಿದರು. ಗೌರವದಿಂದ ಆದರಿಸಿದರು. ಶ್ರೀಕೃಷ್ಣನು ದ್ರೌಪದಿಯನ್ನು ಕಂಡು, ಆಕೆಗೆ ಮನೆಗೆ ಬೇಕಾಗುವ ಪಾತ್ರೆಗಳನ್ನು ಬಂಗಾರದ ಆಭರಣಗಳನ್ನು ಕೊಟ್ಟನು. ನಂತರ ಪಾಂಡವರಿಗೆ ಅವರವರಿಗೆ ಯೋಗ್ಯವಾದ ಆಭರಣಗಳನ್ನಿತ್ತು ಮನ್ನಿಸಿದನು.

ವಿ. ವಿ. : ಮದುಮಗಳಿಗೆ ಪಾತ್ರೆಗಳನ್ನು ಉಡುಗೊರೆಯಾಗಿ ಕೊಡುವ ಅಂದಿನ ಪದ್ಧತಿ ಇಂದಿಗೂ ನಡೆದುಕೊಂಡು ಬಂದಿರಬಹುದೇ?

**ದೇವಾಂಗಯೋಗ್ಯ ಶುಭ ಕುಂಡಲಹಾರ ಮೌಲಿ**
**ಕೇಯೂರವಸ್ತ್ರ ಸಹಿತಾನ್ಯುರು ಭೂಷಣಾನಿ**
**ಷಣ್ಣಾಂ ಪೃಥಕ್ ಪೃಥಗದಾ ತ್ಪೃಥಗೇವ ಯೋಗ್ಯಾನ್ಯ**
**ನ್ಯದ್ದದಾವಥ ಪಿತೃಷ್ವ ಸುರಾತ್ಮ ಯೋಗಮ್ ||೧೬೨||**

ಶ್ರೀಕೃಷ್ಣನು, ದ್ರೌಪದಿ ಸಹಿತವಾಗಿ ಆರುಜನ ಪಾಂಡವರಿಗೆ, ಅವರವರ ಅಂತಸ್ತಿಗೆ ತಕ್ಕಂತೆ, ಅವರವರ ಅವಯವಗಳಿಗೆ ಹೊಂದಿಕೊಳ್ಳುವಂತೆ, ಕರ್ಣಾಭರಣಗಳ, ಕುಂಡಲಗಳು, ಸರಗಳು, ಕಿರೀಟ ಮುಂತಾದ ಇತರ ಆಭರಣಗಳು, ಶ್ರೇಷ್ಠವಾದ ಭೂಷಣಗಳನ್ನಿತ್ತು ಬೇರೆ ಬೇರೆಯಾಗಿತ್ತು ಗೌರವಿಸಿದನು. ಸೋದರತ್ತೆ ಕುಂತಿ ವಿಧವೆಯಾದ ಪ್ರಯುಕ್ತ ಆಕೆಗೆ ತಕ್ಕ ಉಡುಗೊರೆಯನ್ನಿತ್ತನು.

**ದಾಸೀಶ್ಚ ದಾಸಸಹಿತಾ: ಶುಭರೂಪವೇಷಾ:**
**ಸಾಹಸ್ರ ಸೋದಧ ತುರತ್ರ ಹರಿರ್ನೃಪಶ್ಚ**
**ತಾಸಾಂ ವಿಚಿತ್ರ ವಸನಾನ್ಯುರುರತ್ನ ಮಾಲಾ:**
**ಪ್ರತ್ಯೇಕ ಶೋದದತುರಪ್ಯುರು ಭೂಷಣಾನಾಮ್ ||೧೬೪||**

ಮೇಲಿನ ವಸ್ತುಗಳೇ ಅಲ್ಲದೇ, ದ್ರುಪದರಾಜನು ಪಾಂಡವರ ಜೊತೆಯಲ್ಲಿ ಅನೇಕ ಆಭರಣಗಳಿಂದ ಅಲಂಕೃತರಾದ, ವಸ್ತ್ರಾಭರಣಗಳಿಂದ ಭೂಷಿತರಾದ, ಸಹಸ್ರ, ಸಹಸ್ರ ದಾಸ, ದಾಸಿಯರನ್ನು ಕೊಟ್ಟು ಕಳಿಸಿದನು. ದಾಸಿಯರ ಮೈಮೇಲೆ ಚಿತ್ರವಿಚಿತ್ರವಾದ, ಮಣಿಖಚಿತ ರತ್ನಹಾರಗಳಿದ್ದವು.

**ಮಾಸಾನ್ಬಹೂನಪಿ ವಿಹೃತ್ಯ ಸಹೈವ ಪಾರ್ಥೈ:**
**ಕೃಷ್ಣೋಽಯಯೌ ಯದುಪುರೀಂ ಸಹಿತೋಽಗ್ರಜೇನ**
**ಅಂತರ್ಹಿತೇ ಭಗವತಿ ಪ್ರತತೋರು ಶಕ್ತೌ**
**ವ್ಯಾಸೇನ ವತ್ಸರಮಿಹೋಷುರಿಮೇ ಚ ಪಾರ್ಥಾ: ||೧೬೫||**

ಶ್ರೀಕೃಷ್ಣನು ಪಾಂಡವರೊಂದಿಗೆ ಕೆಲವು ತಿಂಗಳಿದ್ದು, ದ್ವಾರಕಾಪುರಕ್ಕೆ ನಡೆದನು. ಅಪ್ರತಿಹತ ಶಕ್ತಿಯುಳ್ಳ, ಪೂಜ್ಯರಾದ ವ್ಯಾಸರೂ ಅಲ್ಲಿಂದ ಹೋದರು. ನಂತರ ಪಾಂಡವರು ಒಂದು ವರ್ಷದವರೆಗೆ ಪಾಂಚಾಲ ನಗರದಲ್ಲಿದ್ದರು.

**ವೈಚಿತ್ರವೀರ್ಯತನಾಯಾಃ ಸಹಸೌಬಲೇನ**
**ಕರ್ಣೇನ ಸಿಂಧುಪತಿ ಸಾರದ ಹಸ್ತಿಯೋಧೈಃ**
**ಭೂರಿಶ್ರವಃ ಪ್ರಭೃತಿ ಭಿಶ್ಚ ಸಹೈವ ಹಂತುಂ**
**ಪಾಂಚಾಲ ರಾಜಮಗುರೇತ್ಯ ಪುರೀಂ ಪುನಸ್ತೇ** ||೧೬೬||

ಸ್ವಯಂವರದಲ್ಲಿ ಸೋತ ನಂತರ, ದುರ್ಯೋಧನ, ಶಕುನಿ, ಕರ್ಣ, ಜರಾಸಂಧ ಮೊದಲಾದವರೆಲ್ಲರೂ ತಮ್ಮ ತಮ್ಮ ರಥ, ಆನೆಗಳೊಂದಿಗೆ ಹಸ್ತಿನಾವತಿಗೆ ಹಿಂದಿರುಗಿದರು. (ಆದರೂ ದುಷ್ಟರ ಮನಸ್ಸು ಸುಮ್ಮನೆ ಕೂಡಲಿಲ್ಲ. ಸೇಡು ತೀರಿಸಲು ನಿಶ್ಚಯಿಸಿ) ಮೇಲಿನ ಎಲ್ಲ ರಾಜರು ಸೇರಿ ಭೂರಿಶ್ರವನ ಸಹಿತರಾಗಿ, ಪಾಂಚಾಲ ರಾಜನನ್ನು ಕೊಲ್ಲುವ ಉದ್ದೇಶದಿಂದ ಪಾಂಚಾಲ ನಗರದ ಮೇಲೆ ದಾಳಿ ಮಾಡಿದರು.

**ತೈರರ್ದಿತೇಷ್ವಪುರ ಆಶು ಸಸೋಮಕಾನಾಂ**
**ರಾಜಾ ಸುತೈಃ ಸಸೈನಿಕ ಉದ್ಗತೋಽಭೂತ್**
**ತೇಷಾಂಚ ತಸ್ಯಚ ಬಭೂವ ಮಹಾನ್ವಿಮರ್ದಃ**
**ಪುತ್ರೌಚ ತಸ್ಯ ನಿಹತೌ ವಿಧುತಾಶ್ಚ ಸೇನಾಃ** ||೧೬೭||

ದುರ್ಯೋಧನನ ಸೈನ್ಯ ಬಂದು ಪಾಂಚಾಲ ನಗರಕ್ಕೆ ಬಂದು ದಾಳಿ ಮಾಡಲು ಪ್ರಾರಂಭಿಸಿದಾಗ, ರಾಜನಾದ ದ್ರುಪದನು, ತನ್ನ ಇಬ್ಬರು ಮಕ್ಕಳೊಡನೆ, ಸೈನ್ಯ ಸಹಿತನಾಗಿ ಯುದ್ಧಕ್ಕೆ ಬಂದನು. ದ್ರುಪದ ಮತ್ತು ದುರ್ಯೋಧನ ಮಧ್ಯೆ ಘೋರ ಯುದ್ಧವಾಯಿತು. ಅದರಲ್ಲಿ ದ್ರುಪದನ ಪುತ್ರರಾದ ಚಿತ್ರ ಮತ್ತು ಚಿತ್ರಕೇತು ಎಂಬ ಇಬ್ಬರು ಮಕ್ಕಳು ಮಡಿದರು. ರಾಜನ ಸೈನ್ಯವು ಗಾಬರಿಯಿಂದ ಓಡಹತ್ತಿತು.

**ಚಿತ್ರೇಹತೇ ಸಮರ ಆಶು ಚಿತ್ರಕೇತೌ**
**ಧಾವತ್ಸು ಸೈನಿಕವರೇಷು ಚ ಪಾರ್ಷತಸ್ಯ**
**ಪಾರ್ಥಾರಥೈ ರಭಿಯಯುರ್ಧೃತ ಚಾಪ ಬಾಣಾ**
**ವೈಚಿತ್ರವೀರ್ಯ ತನಯಾ ಪ್ರವಿಸೂನು ಯುಕ್ತಾನ್** ||೧೬೮||

ಚಿತ್ರ ಮತ್ತು ಚಿತ್ರಕೇತು ಯುದ್ಧದಲ್ಲಿ ಸತ್ತರು. ದ್ರುಪದನ ಸೈನ್ಯವೂ ಓಡಹತ್ತಿತು. ಇದನ್ನು ಕಂಡ ಪಾರ್ಥನು ಬಿಲ್ಲು ಬಾಣಗಳಿಂದ ಸಜ್ಜಿತನಾಗಿ ರಥವನ್ನೇರಿ ಯುದ್ಧಕ್ಕೆ ಬಂದನು. ದುರ್ಯೋಧನ ಮತ್ತು ಕರ್ಣ ಅವನಿಗೆ ಎದುರಾದರು.

**ತೈಸ್ತೇಷು ಪಂಚಸು ಸಮಂ ಪ್ರತಿಯೋಯುತ್ಸು**
**ಭೂರಿಶ್ರವಾಃ ಸ ರವಿಜೋ ವಿರಥಂ ಚಕಾರ**
**ಶಕ್ರಾತ್ಮಜಂ ತದನು ಪರ್ವತ ಸನ್ನಿಕಾಶಂ**
**ದೋರ್ಭ್ಯಾಂತು ಮಾರುತಿ ರುರುಂ ತರುಮುದ್ಬಬರ್ಹ** ||೧೬೯||

ಪಾಂಡವರಿಗೂ, ಕೌರವರಿಗೂ, ಭೀಕರ ಯುದ್ಧ ನಡೆಯುತ್ತಿರಲು, ಭೂರಿಶ್ರವ ನಿಂದ ಕೂಡಿಕೊಂಡು ಕರ್ಣನು ಬಂದು, ಅರ್ಜುನನನ್ನು ವಿರಥನನ್ನಾಗಿ ಮಾಡಿದನು. ಇದನ್ನು ಕಂಡ ವಾಯುಪುತ್ರನು ತನ್ನ ಎರಡು ಕೈಗಳಲ್ಲಿ, ಪರ್ವತಕ್ಕೆ ಸಮನಾದ ಮರಗಳನ್ನು ಕಿತ್ತು ತಂದು ಎದುರಾದನು.

**ಆಯಾಂತಮೀಕ್ಷ್ಯ ತರುಹಸ್ತ ಮಿಮಂ ಸಮೀರಸೂನುಂ**
**ಸುಯೋಧನ ಮುಖಾ ನಿಖಿಲಾಃ ಸುಕರ್ಣಾಃ**
**ಭೂರಿಶ್ರವಾಃ ಶಕುನಿ ಭೂರಿ ಜಯದ್ರಥಾಶ್ಚ**
**ಸರ್ವೇಽಪಿ ದುದ್ರುವು ರಥೋ ವಿವಿಶುಃ ಪುರಂಸ್ಸ್ವಂ** ॥೧೭೦॥

ವಾಯು ಪುತ್ರನು ಕರಗಳಲ್ಲಿ ಮರಗಳನ್ನು ಹಿಡಿದು ಬರುತ್ತಿರುವುದನ್ನು ಕಂಡು, ದುರ್ಯೋಧನ, ಕರ್ಣ, ಭೂರಿಶ್ರವ, ಶಕುನಿ, ಜರಾಸಂಧ, ಮೊದಲಾದ ವೀರರೆಲ್ಲರೂ ಓಡಿ ಹೋಗಿ ತಮ್ಮ ತಮ್ಮ ಪಟ್ಟಣಗಳನ್ನು ಸೇರಿಕೊಂಡರು.

ಇದರಲ್ಲಿ ಭೀಮನ ಪರಾಕ್ರಮ ವ್ಯಕ್ತವಾಗುತ್ತದೆ.

**ಜ್ಞಾತ್ವಾ ಸಮಸ್ತಮಪಿ ತಚ್ಚಿದುರೋಽಗ್ರಜಂಸ್ಸ್ವಂ**
**ವರ್ಧಂತ ಏವ ತನಯಾ ಭವತೋ ನರೇಂದ್ರಃ**
**ಇತ್ಯಾಹ ಸೋಽಪಿ ಮುದಿತಃ ಸ್ವಸುತೇನ ಕೃಷ್ಣಾ**
**ಪ್ರಾಪ್ತೇತಿ ಭೂಷಣವರಾಣ್ಯ ದಿಶಚ್ಚ ವಾಸಃ** ॥೧೭೧॥

ವಿದುರನು (ಸ್ವಯಂವರ ವೃತ್ತಾಂತ ಎಲ್ಲವನ್ನು) ತಿಳಿದವನಾಗಿ, ತನ್ನ ಅಣ್ಣನಾದ ಧೃತರಾಷ್ಟ್ರನ ಹತ್ತಿರ ಬಂದು ನಿನ್ನ ಮಕ್ಕಳು ಎಲ್ಲ ರೀತಿಯಿಂದ "ಅಭಿವೃದ್ಧಿ ಹೊಂದುತ್ತಿದ್ದಾರೆ" ಎಂದು ಹೇಳಿದಾಗ ಧೃತರಾಷ್ಟ್ರನು ತನ್ನ ಮಗ ದುರ್ಯೋಧನನೇ ದ್ರೌಪದಿಯನ್ನು ಪಡೆದನೆಂದು ತಿಳಿದು ಸಂತುಷ್ಟನಾಗಿ ಭೂಷಣಾದಿಗಳನ್ನು ಉಡುಗೊರೆ ಯಾಗಿ ಕೊಟ್ಟನು.

**ವಿ. ವಿ. :** ಇಲ್ಲಿ ಕೆಲವು ವಿಚಾರಗಳು.

೧) ವಿದುರನು 'ನಿನ್ನ ಮಕ್ಕಳು' ಎಂದಾಗ ಆ ಪದವು ಎರಡು ಎರಡು ಅರ್ಥಗಳಿಂದ ಕೂಡಿತ್ತು. ಕೌರವರು ನಿನ್ನ ಮಕ್ಕಳು ಪಾಂಡವರೂ ನಿನ್ನ ಮಕ್ಕಳೇ ಎಂದು ಅಣ್ಣನ ತಮ್ಮನ ಮಕ್ಕಳು ಮಕ್ಕಳಲ್ಲವೇ?

೨) ಅದರಂತೆ – 'ಅಭಿವೃದ್ಧಿ ಹೊಂದು' ಪಾಂಡವರು ಒಳ್ಳೆಯ ಗುಣಗಳಿಂದ, ಕೀರ್ತಿಯಿಂದ ಅಭಿವೃದ್ಧಿ ಹೊಂದಿದರೆ, ಕೌರವರು ದುಷ್ಟ ಗುಣಗಳಿಂದ, ಅಪಕೀರ್ತಿ ಯಿಂದ ಅಭಿವೃದ್ಧಿ ಹೊಂದುತ್ತಿದ್ದಾರೆ ಎಂದು.

೩) ಸ್ವಾರ್ಥಿ ಮತ್ತು ಸಂಕುಚಿತ ಮನವುಳ್ಳ ಧೃತರಾಷ್ಟ್ರನು, ತನ್ನ ಮಕ್ಕಳೆಂದೇ ಭಾವಿಸಿದನು, ಮೋಸಹೋದನು.

**ಪಾರ್ಥಾ ಇತಿಸ್ಮ ವಿದುರೋಽವದದಾಶು ಸೋಽಪಿ**
**ಸ್ವಾಕಾರಗೂಹನಪರೋ ಯದಿತರ್ಹ್ಯತೀವ**
**ಭದ್ರಂ ಮೃತಾನಹಿ ಪೃಥಾನ ಸಹಿತಾಃ ಸ್ಮ ಪಾರ್ಥಾಃ**
**ತೇಷಾಂ ಪ್ರವೃತ್ತಿ ಮಪಿ ಮೇವದ ಸರ್ವಶಸ್ತ್ವಮ್** ||೧೭೨||

ಧೃತರಾಷ್ಟ್ರನ ಭಾವವನ್ನರಿತ ವಿದುರನು, ಅರ್ಜುನ, ಇತಿ ಪಾಂಡವರು ಎಂದು ಕೂಡಲೇ ಹೇಳಿದನು. ಧೃತರಾಷ್ಟ್ರನು ಕೂಡ ಮನದ ದುಗುಡವನ್ನು (ಅಸಂತೋಷವನ್ನು) ಅಡಗಿಸಿ, ಓಹೋ! ಹಾಗೋ! ಕುಂತೀ ಸಹಿತ ಪಾಂಡವರು ಸತ್ತಿಲ್ಲವಲ್ಲ! ಅತ್ಯಂತ ಶುಭವಾರ್ತೆ, ನೀನು ಆ ಪಾಂಡವರ ಎಲ್ಲ ವಿಷಯವನ್ನು ನನಗೆ ಚೆನ್ನಾಗಿ ಹೇಳು ಎಂದು ಕೃತ್ರಿಮ ಸಂತೋಷವನ್ನು ವ್ಯಕ್ತಪಡಿಸಿದನು.

**ಇತ್ಯುಕ್ತ ಆಹವಿದುರಃ ಸ ಹಿಡಿಂಬವಧ್ಯಾ ಪೂರ್ವಾಂ**
**ಪ್ರವೃತ್ತಿ ಮಖಿಲಾಮಪಿ ಲಕ್ಷ್ಯ ವೇಧಂ**
**ಉದ್ವಾಹ ಮಪ್ಯಥ ನದೀಜ ಮುಖಾಶ್ಚ ಸರ್ವೇ ತ್ತುಷಾ**
**ಬಭೂವುರಪಿ ವತ್ಸರ ಮೂಷು ರೇವಮ್** ||೧೭೩||

ಧೃತರಾಷ್ಟ್ರನಿಂದ ಆ ರೀತಿ ಕೇಳಿಸಿಕೊಂಡ ಮೇಲೆ, ವಿದುರನು, ಹಿಡಂಬನ ವಧೆಯಿಂದ ಪ್ರಾರಂಭಿಸಿ, ಹಿಡಿಂಬಿ ವಿವಾಹ, ಬಕನ ವಧೆ, ಮತ್ಸ್ಯ ಭೇದ, (ದ್ರೌಪದಿಯ ಪ್ರಾಪ್ತಿ) ಎಲ್ಲ ವೃತ್ತಾಂತವನ್ನು ವಿವರವಾಗಿ ಹೇಳಿದನು. ಇದನ್ನು ಕೇಳಿದ ಭೀಷ್ಮ ಮೊದಲಾದ ಪ್ರಮುಖರು ಸಂತೋಷಗೊಂಡರು. ಕೌರವರಿಗೆ ತಿಳಿದ ನಂತರವೂ ಪಾಂಡವರು ಪಾಂಚಾಲ ಪುರಿಯಲ್ಲಿ ಒಂದು ವರ್ಷವಿದ್ದರು.

ವಿ. ವಿ. : ಮೇಲಿನ ಶ್ಲೋಕಗಳನ್ನು ನೋಡಿದಾಗ, ಕೆಟ್ಟ ಮನಸ್ಸು ಕಪಟ ಬುದ್ಧಿಗಳು ಯಾವ ರೀತಿಯಾಗಿ ವರ್ತಿಸುತ್ತಿವೆ ಎಂದು ಧೃತರಾಷ್ಟ್ರನ ಮಾತುಗಳಲ್ಲಿ ಕಾಣಬಹುದು.

**ಶ್ರುತ್ವಾಥ ಕೃಷ್ಣಮುಪಯಾಂತ ಮುರುಪ್ರದಾಯ**
**ರತ್ನಂ ಚ ಪಾಂಡುತನಯೇಷು ಗತಂ ಪುನಶ್ಚ**
**ತಾತಪ್ಯ ಮಾನ ಹೃಯಯಾಸ್ತು ಸುಯೋಧನಾದ್ಯಾ**
**ಮಂತ್ರಂ ಪ್ರಚಕ್ರುರಥ ಕರ್ಣಮುಖಾಯ ಯುಶ್ಚ** ||೧೭೪||

ಶ್ರೀಕೃಷ್ಣನು ಬಂದು ಪಾಂಡವರ ವಿಜಯಕ್ಕಾಗಿ ಅವರಿಗೆ ರತ್ನಾಭರಣ ಇತ್ಯಾದಿಗಳನ್ನು ಕೊಟ್ಟು ಹೋದನೆಂಬ ಸಮಾಚಾರವನ್ನು ಕೇಳಿ ಸಂತಪ್ತವಾದ ಹೃದಯ ದಿಂದ ದುರ್ಯೋಧನ, ಕರ್ಣ ಮೊದಲಾದವರು ಮಂತ್ರಾಲೋಚನ ಮಾಡಿ ಪುನಃ ಯುದ್ಧಕ್ಕೆ ಸಿದ್ಧರಾದರು.

ವಿ. ವಿ. : ಶ್ರೀಕೃಷ್ಣನು ಪಾಂಡವರಿಗೆ ಮಾಡುವುದರಲ್ಲಿ ತನಗುಂಟಾದ ಸಂತೋಷಕ್ಕಿಂತ, ಕೌರವರಿಗೆ ಹೊಟ್ಟೆಯುರಿಯಲಿ ಎಂಬುದೇ ಆಗಿರಬಹುದೇ?

ಯುದ್ಧಾಯ ತೇಷು ಪುನರೇವ ರಥೈಃ ಪ್ರಯಾತೇ
ಷ್ವಾ ಹಾಗ್ರಜಂ ಸವಿದುರೋಪಿ ನದೀಜ ಮುಖ್ಯಾನ್
ಏತೇ ಹಿ ಪಾಪತಮ ಚೇತಸ ಏತ್ಯ ಪಾರ್ಥಾನ್
ಯುದ್ಧಾಯ ಮೃತ್ಯು ಮುಖಮಯೊಂತಿ ನ ಸಂಶಯೋಽತ್ರ ||೧೭೫||

ದುರ್ಯೋಧನನು ಪುನಃ ಯುದ್ಧಕ್ಕೆ ಸನ್ನದ್ಧನಾದದನ್ನು ಕಂಡು, ವಿದುರನು, ಭೀಷ್ಮರಿಂದೊಡಗೂಡಿ ಅಣ್ಣನಾದ ಧೃತರಾಷ್ಟ್ರನ ಹತ್ತಿರ ಬಂದು ಪಾಪತಮ ಚೇತನರಾದ ದುರ್ಯೋಧನಾದಿಗಳು ಪಾರ್ಥನೊಡನೆ ಯುದ್ಧಕ್ಕೆ ಹೋದರೆ, ಸಾಯುವುದು ಖಂಡಿತ. ಇದಕ್ಕೆ ಸಂದೇಹವಿಲ್ಲ ಎಂದು ಹೇಳಿದನು.

ಭೀಮಾರ್ಜುನೌ ಪ್ರಸಹಿತುಂ ನಹಿಕಶ್ಚನಾಸ್ತಿ
ಸಾಮರ್ಥ್ಯಯುಕ್ಸುರವರೇಷ್ವಪಿ ವರ್ಧಿತಾಸ್ತೇ
ಜ್ಞಾತ್ವೈವ ವತ್ಸರ ಏವ ಮಹಾನಧರ್ಮ ಮಸ್ತೇ
ಷಾ ಮುಪೇಕ್ಷಣ ಕೃತಸ್ತದಲಂ ನಿಯುಂಕ್ಷ್ವ ||೧೭೬||

ಭೀಮ ಮತ್ತು ಅರ್ಜುನರ ಸಾಮರ್ಥ್ಯದ ಮುಂದೆ, ದೇವತೆಗಳ ಸಾಮರ್ಥ್ಯವೂ ಸರಿಯೆನಿಸಲಾರದು. ಅವರು ಅಸಮರ್ಥರೆ, ಪಾಂಡವರು ಈಗ ಅಭಿವೃದ್ಧಿ ಹೊಂದುತ್ತಿದ್ದಾರೆ. ಇದನ್ನು ತಿಳಿದೂ ನೀನು ಅವರನ್ನು ಕರೆಸುವುದರಲ್ಲಿ ಉಪೇಕ್ಷ ಮಾಡುತ್ತಿರುವಿ. ಒಂದು ವರ್ಷವಾದರೂ ಯೋಚಿಸಿಲ್ಲ. ಇದು ಮಹಾನ್ ಅಧರ್ಮವಾಗುತ್ತದೆ. ಅವರನ್ನು ಕರೆಸುವುದಕ್ಕಾಗಿ ದೂತರನ್ನು ಕಳುಹಿಸು" ಎಂದು ಹೇಳಿದನು.

ಆನೀಯತಾಮಿಹ ವಿನಿಯುಜ್ಯ ಸುಸಾಂತ್ವಪೂರ್ವ
ಮಾನೀಯ ಯೋಜಯ ಸ್ವಕೈಷು ತಥಾರ್ಧರಾಜ್ಯಂ
ಏವಂ ಕೃತೇ ತವಭವೇತ್ಕು ವೃದ್ಧಯೇಹಿ
ಧರ್ಮಾಯಚೋಽಭಯ ವಿನಾಶಕರೋಽನ್ಯ ಥಾಪ್ಮಾಃ ||೧೭೭||

ಎಲೈ ರಾಜನೇ ಸಮಾಧಾನ ಪೂರ್ವಕ ಯೋಚಿಸು. ದೂತರನ್ನು ಕಳಿಸಿ ಅವರನ್ನು ಕರೆಯಿಸು. ಅವರಿಗೂ ಅರ್ಧಭಾಗ ರಾಜ್ಯವನ್ನು ಕೊಡು. ಹಾಗೆ ಮಾಡಿದರೆ, ನಿನ್ನ ಕುಲವೃದ್ಧಿಯೂ ಆಗುತ್ತದೆ. ಧರ್ಮವೂ ಆಗುತ್ತದೆ. ಇಲ್ಲದಿದ್ದಲ್ಲಿ ನಿನ್ನ ಕುಲದ ನಾಶ ಖಂಡಿತ. ಜೊತೆಯಲ್ಲಿ ಅಧರ್ಮವು ಕೂಡ.

ಇತ್ಯುಕ್ತವತ್ಯನು ತಥೇತ್ಯವದನ್ನ ದೀಜೋದ್ರೋಣಃ
ಕೃಪಶ್ಚ ವಿದುರಂ ಸನೃಪೋಽಪ್ಯುವಾಚ
ಯಾಹ್ಯಾನಯೇತಿ ಸಚವೇಗಮಥಾರಥೇನ
ತತ್ರಾಗಮತ್ತದನು ತೈರಭಿ ಪೂಜಿತಶ್ಚ ||೧೭೮||

ವಿದುರನು ಆ ರೀತಿ ಹೇಳಿದಾಗ ಭೀಷ್ಮರು, ದ್ರೋಣ, ಕೃಪಾಚಾರ್ಯ ಮುಂತಾದವರು "ಅಹುದಹುದು" ಎಂದರು. ಅವರ ಮಾತನ್ನು ಆಲಿಸಿದ ಧೃತರಾಷ್ಟ್ರನು,

ವಿದುರನನ್ನು ಕರೆದು, "ನೀನೇ ಹೋಗಿ ಅವರನ್ನು ಕರೆದು ತಾ" ಎಂದು ಹೇಳಿದನು. ವಿದುರನು ಕೂಡಲೇ ರಥದಲ್ಲಿ ಕುಳಿತು ವೇಗದಿಂದ ಪಾಂಚಾಲ ನಗರಕ್ಕೆ ಬಂದನು. ಅಲ್ಲಿ ಆತನು ಪಾಂಡವರಿಂದ ಪೂಜೆಯನ್ನೂ ಕೊಂಡನು.

ತತ್ಕಾಲ ಏವ ವಸುದೇವ ಸುತಶ್ಚ ಕೃಷ್ಣೋ
ವ್ಯಾಸಶ್ಚ ತಾನುಪಸಮೇತ್ಯ ದುರಂತ ಶಕ್ತೀ
ಆದಾಯ ಕುಂತಿ ಸಹಿತಾನ್ವಿದುರೇಣ ಯುಕ್ತಾ
ನಾಗಾಹ್ವಯಂ ಪುರಮಿತ್ವಾಂ ಸಹಭಾರ್ಯಯೈವ ॥೧೭೯॥

ಅದೇ ಕಾಲಕ್ಕೆ ವಸುದೇವ ಸುತನಾದ ಶ್ರೀಕೃಷ್ಣನು, ದುರಂತ ಶಕ್ತಿಯುಳ್ಳ ವ್ಯಾಸರು ಅಲ್ಲಿಗೆ ಆಗಮಿಸಿದ್ದರು. ಆಗ ವಿದುರನು, ಕುಂತಿಯನ್ನು ಮಡದಿಯ ಸಹಿತರಾದ ಪಾಂಡವರನ್ನು, ಎಲ್ಲರನ್ನು ಹಸ್ತಿನಾವತಿ ಪಟ್ಟಣಕ್ಕೆ ಕರೆತಂದನು.

ತೇಷ್ವಾಗತೇಷು ಸುಮಹಾನಭವತ್ಪ್ರಹರ್ಷಃ
ಪೌರಸ್ಯ ಜಾನಪದಿಕಸ್ಯ ಜನಸ್ಯ ಚೋಚ್ಚೈಃ
ಭೀಷ್ಮಾದಿಕಾಶ್ಚ ಮುದಿತಾಃ ಪ್ರತಿ ಪೂಜ್ಯಗೇಹ
ಮಾವೇಶ ಯನ್ಸಹ ನೃಪೇಣ ಮಹೋತಸವೇನ ॥೧೮೦॥

ವೇದವ್ಯಾಸರು, ಶ್ರೀಕೃಷ್ಣ ಮತ್ತು ಪಾಂಡವರು ಬಂದದ್ದನ್ನು ಕಂಡು, ಪಟ್ಟಣಿಗರು, ಹಳ್ಳಿಯವರು, ಇತರ ಪ್ರಜೆಗಳು ಬಹಳಷ್ಟು ಹರ್ಷಿತರಾದರು. ಭೀಷ್ಮರಿಗೂ ಆನಂದವಾಯಿತು. ಎಲ್ಲರೂ ಕೂಡಿ ಬಂದವರಿಗೆ ಸ್ವಾಗತಿಸಿದರು. ಧೃತರಾಷ್ಟ್ರನೂ ಬಂದು ಶ್ರೀಕೃಷ್ಣ ಮತ್ತು ವ್ಯಾಸರನ್ನು ಪೂಜಿಸಿ, ಉಳಿದವರನ್ನು ಸ್ವಾಗತಿಸುತ್ತ ತನ್ನ ಅರಮನೆಗೆ ಕರೆದೊಯ್ದನು.

ಕೃಷ್ಣಾಮ ಪೂಜಯದತೀವಚ ಸೌಬಲೀಸಾ
ದುರ್ಯೋಧನಸ್ಯ ದಯಿತಾ ಸಹಿತಾತ್ರ ತೇಷಿ
ಊಷುಸ್ತತಶ್ಚ ನಿಜಪುತ್ರಕ ದುರ್ವಿನೀತ್ಯಾ
ಕೃಷ್ಣಾನಿಮಿತ್ತಮುರುಭೂತಿತ ಆಪಭೀಮಾತ್ ॥೧೮೧॥

ಗಾಂಧಾರಿಯು ಕೂಡ ದ್ರೌಪದಿಯನ್ನು ಬಹು ಆದರದಿಂದ ಸ್ವಾಗತಿಸಿದಳು. ಪಾಂಡವರು ಧೃತರಾಷ್ಟ್ರನ ಮನೆಯಲ್ಲಿಯೇ ವಾಸ ಮಾಡಿದರು. ದುರ್ಯೋಧನನ ಕೆಟ್ಟ ನಡತೆಯನ್ನು ತಾಯಿ ಅರಿತಿದ್ದಳು. ದ್ರೌಪದಿಯ ನಿಮಿತ್ತ ದುರ್ಯೋಧನನು ಭೀಮನ ಕೋಪಕ್ಕೆ ತುತ್ತಾಗಬಾರದು ಎಂಬ ಭೀತಿಯಿಂದ ಕುಂತಿಯನ್ನು ಕುರಿತು ಹೀಗೆ ಹೇಳಿದಳು.

ಕುಂತಿ ಪ್ರಯಾಹಿ ಸಹಿತಾ ಸ್ನುಷಯಾ ಗೃಹಂಸ್ವಂ
ಭೀಮಾದ್ವಿಭೇಮಿ ನಿಜಪುತ್ರಕ ದುರ್ವಿನೀತ್ಯಾ
ಕೃಷ್ಣಾ ತ್ರಿಲೋಕ ವನಿತಾಧಿಕ ರೂಪಸಾರಾ
ಯಸ್ಮಾದಿತಿಸ್ಮ ಸಸುತಾ ಪ್ರಯಯೌ ಗೃಹಂ ಸಾ ॥೧೮೨॥

ಎಲೈ ಕುಂತಿ, ನೀನು ನಿನ್ನ ಸೊಸೆಯನ್ನು ಕೂಡಿಕೊಂಡು, ನಿನ್ನ ಮನೆಗೆ ಹೋಗು. ದ್ರೌಪದಿಯು ತ್ರಿಲೋಕ ಸುಂದರಿಯಾಗಿದ್ದಾಳೆ. ಆ ಕಾರಣದಿಂದ ನನ್ನ ಮಗನ ದುರ್ನಡತೆಗಾಗಿ, ಭೀಮನಿಂದ ಹೆದರುತ್ತೇನೆ ಎಂದಾಗ ಕುಂತಿಯು ಮಕ್ಕಳು, ಸೊಸೆಯ ಸಹಿತಳಾಗಿ ತನ್ನ ಮನೆಗೆ ಹೋದಳು.

**ಊಷುಸ್ತಥೈವ ಪರಿವತ್ಸರ ಪಂಚಕಂತೇ ಪಾಂಡೋ**
**ರ್ಗೃಹೇಷ್ವ್ ಪು ಸುಖಿನೋಽಖಿಲ ಭೋಗಯುಕ್ತಾಃ**
**ಕೃಷ್ಣಾಚ ತೇಷು ಪೃಥಗೇವ ಚತುಃಸ್ವರೂಪಾ**
**ರೇಮೇ ತಥೈಕ ತನುರಪ್ಯ ಭಿಮಾನಿ ಭೇದಾ ತ್** ||೧೮೩||

ಪಾಂಡವರು ತಮ್ಮ ತಂದೆಯ ಮನೆಯಲ್ಲಿ ಐದು ವರ್ಷ ಸುಖವಾಗಿ ಕಾಲ ಕಳೆದರು. ಸಕಲ ಭೋಗಗಳೂ ಯುಕ್ತವಾದವು. ದ್ರೌಪದಿಯು, ಒಂದೇ ದೇಹವಾಗಿ ಕಂಡರೂ, ಆಕೆ ನಾಲ್ಕು ರೂಪಗಳಿಂದ ಬೇರೆ ಬೇರೆಯಾಗಿ ಅವರಲ್ಲಿ ರಮಿಸುತ್ತಿದ್ದಳು.

ವಿ. ವಿ. : ಬೃಹಸ್ಪತಿಯು ಒಂದೊಂದು ರಾಶಿಯಲ್ಲಿ ಸಂಚಾರ ಮಾಡುವ ಕಾಲ ಪರಿಮಿತಿಗೆ ಪರಿಸಂವತ್ಸರ ಎಂದು ಹೆಸರು.

ದೇಹಾಭಿಮಾನಿಗಳಾದ ಶ್ಯಾಮಲಾದಿ ಸ್ತ್ರೀಯರು ಬೇರೆ ಬೇರೆಯಾಗಿದ್ದರೂ, ದೇಹ ಒಂದೇ ಇದ್ದಾಗ ವ್ಯಭಿಚಾರ ದೋಷ ಬರುವುದಿಲ್ಲವೇ ಎಂಬ ಸಂಶಯಕ್ಕೆ ಸಮಾಧಾನ.

**ಕನ್ಯೈವಸಾಽಭವದತಃ ಪ್ರತಿವಾಸರಂಚ**
**ಜನ್ಮಾಭವ ದ್ವ್ಯಭಿಮತೇಃ ಪ್ರಥಗೇವ ನಾಶಾತ್ ।**
**ಪ್ರಾಯೋಽಪಿ ನಾಭಿಮತಿನಾಶ ಮವಾಪ ವಾಣೀ**
**ತಸ್ಮಾನ್ನರುಚ್ಚ ಸಕಲೇಷ್ವ ಭವಿಷ್ಟ ಆಸೀತ್** ||೧೮೪||

ಆ ದ್ರೌಪದಿಯು ಪ್ರತಿ ದಿನವು ಕನ್ಯೆಯಾಗಿಯೇ ಇರುತ್ತಿದ್ದಳು. ಆ ದೇಹದಲ್ಲಿ ಯಾವ ಸ್ತ್ರೀಯ ಅಭಿಮಾನ ಬರುತ್ತಿತ್ತೋ ಅಲ್ಲಿಯೆ ಅವಳ ಉತ್ಪತ್ತಿಯಾಗುತ್ತಿತ್ತು. ಆ ದೇಹದಲ್ಲಿದ್ದ ಅಭಿಮಾನ ನಾಶವಾಗುತ್ತಿತ್ತು. ಕಾರಣ ಅವರಿಗೆ ಕನ್ಯತ್ವ ನಾಶವಾಯಿತು ಎಂಬ ಪ್ರಶ್ನೆಯೇ ಬರುತ್ತಿರಲಿಲ್ಲ. ಆದ್ದರಿಂದ ಅವರು ಸದಾ ಕನ್ಯೆಯರಾಗಿಯೇ ಉಳಿಯುತ್ತಿದ್ದರು. ತಮ್ಮ ತಮ್ಮ ಪತಿಗಳೊಡನೆ ಕೂಡುವಾಗ ಆಯಾ ಸ್ತ್ರೀಯರ ಅಭಿಮಾನ ಅದೇ ಜನನ. ಅಂದಿನ ದಿನ ಮುಗಿದಾಗ ಅಭಿಮಾನ ನಾಶ. ಅದೇ ಅವರ ನಾಶ. ಆದರೆ ಭಾರತಿದೇವಿಯರು ಮಾತ್ರ ಅಂಶರೂಪದಿಂದ ಯಾವಾಗಲೂ ಇರುತ್ತಿದ್ದರು. ಆ ದೇಹ, ಆ ಲಕ್ಷಣಗಳು, ಆ ಸೌಂದರ್ಯ ಭಾರತೀದೇವಿಯದೇ ಅಲ್ಲವೇ? ಆದ್ದರಿಂದಲೇ ವಾಯುದೇವರು ಕೂಡ ಅಂಶರೂಪದಿಂದ ನಾಲ್ಕುಜನ ಪಾಂಡವರಲ್ಲಿ ಇರುತ್ತಿದ್ದರು. ಇಲ್ಲದಿದ್ದಲ್ಲಿ ಅವರಿಗೆ ಸ್ಪರ್ಶಕ್ಕೆ ಅವಕಾಶವಿರುತ್ತಿರಲಿಲ್ಲ. ಭೀಮಸೇನ ದೇವರ ಸರದಿಯೆಂದ ಮಾತ್ರ ಸಂಪೂರ್ಣ ಭಾರತಿದೇವಿಯರೇ! ಉಳಿದ ದೇವಿಯರ ಅಭಿಮಾನವೇ ಅಲ್ಲಿ ಇರುತ್ತಿರಲಿಲ್ಲ. ಪರಸ್ತ್ರೀ ಸಂಗದ ಶಂಕೆಗೆಯೋ ಆಸ್ಪದವಿಲ್ಲ.

ಧರ್ಮರಾಜ, ಆದಿ ಪಾಂಡವರಲ್ಲಿ ಪ್ರವಿಷ್ಟನಾದ ವಾಯುದೇವರು ರಮಿಸುವ ಪ್ರಕರಣದ ಸ್ಪಷ್ಟೀಕರಣ.

**ಧರ್ಮಾತ್ಮ ಜಾದಿಷು ಮರುತ್ಪ್ರತಿ ವಿಷ್ಟ ವಿಷಾಂ**
**ಬುದ್ಧಿಂ ವಿಮೋಹ ರಮತೇ ಸತತಂ ತಯಾಯತ್**
**ಶುದ್ಧೈವ ಸಾಹಿತತ ಏವ ದಿನೇ ದಿನೇಚ**
**ಸನ್ಮೋಹಿತೋ ಮರಣ ಮಪ್ಯವತೀಹ ಕನ್ಯಾ ॥೧೮೫॥**

ಧರ್ಮರಾಜಾದಿಗಳಲ್ಲಿ ಪ್ರವಿಷ್ಟನಾದ ವಾಯುದೇವರು, ಆ ಕ್ರೀಡೆಯ ಸಮಯದಲ್ಲಿ, ಭಾರತೀದೇವಿಯರ ವಿಷಯದಲ್ಲಿ, ಅವರ ಬುದ್ಧಿಗೆ ಮೋಹಗೊಳಿಸುತ್ತಿದ್ದರು ಕಾರಣ ಆ ಸಮಯದಲ್ಲೂ ವಾಯುದೇವರೇ ಭಾರತಿದೇವಿಯರನ್ನು ಕೂಡಿರುತ್ತಿದ್ದರು ಅನ್ಯರ ಸಂಪರ್ಕವಿರಲಿಲ್ಲ. ಕಾರಣ ಅವರು (ಸದಾ) ದಿನಾಲು ಶುದ್ಧವಾಗಿಯೇ ಇರುತ್ತಿದ್ದರು.

**ವಿ. ವಿ. : ಜ್ಞಾನಿಗಳ ದೃಷ್ಟಿಯಲ್ಲಿ ದೇಹಾಭಿಮಾನ ತ್ಯಾಜ್ಯವೇ ಮರಣವಲ್ಲವೇ ?** ಅಂಥವರು ಲೌಕಿಕ ದೃಷ್ಟಿಯಿಂದ ಇದ್ದೂ ಸತ್ತಂತೆಯೇ.

ಅದನ್ನೇ ಮುಂದುವರೆಸಿದ್ದಾರೆ.

**ನೋ ಸುಪ್ತಿ ವತ್ತ್ವದ ಮತೋಽನವಶತ್ವ ತೋಹಿ**
**ದೇಹಸ್ಯ ಸಂಸ್ಕೃತಿತ ಏವ ಹರೇರ್ನಮೋಹಃ**
**ನಾವೇಶವಚ್ಚ ತತಏವ ಮೃತೇ ಸ್ವರೂಪಮೇ ತತ್ತ್ವತಃ**
**ಪ್ರತಿದಿನಂ ಜನನಾದ್ಧಿ ಕನ್ಯಾ ॥೧೮೬॥**

ಶಾಮಲೆ ಧರ್ಮರಾಜನೊಂದಿಗೆ ರಮಿಸುತ್ತಿರುವಾಗ, ಅಲ್ಲಿಯೇ ಇದ್ದ ಶಚಿಯ ಅವಸ್ಥೆ, ದೇಹ ಇನ್ನೊಬ್ಬರ ಅಧೀನವಾದುದರಿಂದ ದೇಹಾಭಿಮಾನವಿಲ್ಲ. ಆದರೂ ಹರಿಸ್ಮರಣೆ ಚೆನ್ನಾಗಿಯಿದೆ, ಕಾರಣ ಇವಳ ಅವಸ್ಥೆ ನಿದ್ರೆಯ ಅವಸ್ಥೆಯಂತಲ್ಲ. ಮೂರ್ಛೆಯಂತೆಯೂ ಅಲ್ಲ. ಆವೇಶದಂತೆಯೂ ಅಲ್ಲ, ಈ ಮೂರು ಅವಸ್ಥೆಗಳಲೂ ಹರಿಸ್ಮರಣೆ ಇರುವುದಿಲ್ಲ. ಇವರ ಅವಸ್ಥೆಯೇ ವಿಚಿತ್ರ. ಇವರ ಅವಸ್ಥೆಗೆ ಜ್ಞಾನಿಗಳ ದೃಷ್ಟಾಂತ ಕೊಡುತ್ತಾರೆ. ಅವರಿಗೆ ಮರಣ ಕಾಲದಲ್ಲಿ ದೇಹಾಭಿಮಾನ ಇರುವುದಿಲ್ಲ. ಆದರೂ ಹರಿಸ್ಮರಣೆ ಬಿಟ್ಟಿರುವುದಿಲ್ಲ.

**ಏವಂ ಸವಾಯುರನುವಿಷ್ಟ ಯುಧಿಷ್ಠಿರಾದಿ**
**ಭೀಮಾತ್ಮನೈವರಮತೇ ಸತತಂ ತಯೈಕಃ**
**ಅನ್ಯಾದೃಶಂ ಹಿ ಸುರಭುಕ್ತಿರತೋಽನ್ಯರೂಪಾ**
**ಮಾನುಷ್ಯಾಭುಕ್ತಿರಿತಿ – ನಾತ್ರ ವಿಚಾರಮಸ್ತಿ ॥೧೮೭॥**

ಈ ರೀತಿಯಾಗಿ ಆ ವಾಯು ಒಂದು ರೂಪದಿಂದ ಎಲ್ಲರಲ್ಲೂ ಆವಿಷ್ಟನಾಗಿ, ಭೀಮನಲ್ಲಿ ಪೂರ್ಣರೂಪದಿಂದ ಇದ್ದು, ಧರ್ಮವನ್ನನುಸರಿಸಿ ಯಾವಾಗಲೂ ರಮಿಸುತ್ತಿದ್ದನು.

ಮಾನವರಾದ ನಾವು, ಮಾನವ ಭೋಗಕ್ಕೆ ಸುರಭೋಗ ಹೋಲಿಸಿ, ಸಂಶಯ ಪಡಬಾರದು. ಅವರ ರೀತಿಯೇ ಬೇರೆ. ಇವರ ರೀತಿಯೇ ಬೇರೆ. ಅದಕ್ಕಾಗಿ ಹೆಚ್ಚು ವಿಚಾರ ಮಾಡಬಾರದು ಎಂದು ಸ್ಪಷ್ಟಪಡಿಸಿದ್ದಾರೆ.

ವಿ. ವಿ. : ಈ ಸಮಸ್ಯೆ ಇನ್ನೂ ಪರಿಹಾರವಾಗಿಲ್ಲ. ಸರಿಯಾಗಿ ತಿಳಿದುಕೊಳ್ಳದೆ ಇನ್ನೂ ಟೀಕಿಸುವವರಿದ್ದಾರೆ.

ಆ ಕಾಲದಲ್ಲಿದ್ದ ದೇವಾಂಶ ಸಂಭೂತನಾದ ಜ್ಞಾನಿಯಾದ ದ್ರುಪದ ರಾಜನೇ ಈ ವಿಷಯವನ್ನು ಸಂಶಯ ದೃಷ್ಟಿಯಿಂದ ನೋಡಿದ್ದಾನೆ. ಭಗವಂತರ ಅನುಗ್ರಹವಾಗಿ ದಿವ್ಯದೃಷ್ಟಿ ದೊರೆತು ಪ್ರತ್ಯಕ್ಷ ನೋಡುವವರೆಗೆ ಆತನಿಗೆ ಸಮಾಧಾನವಾಗಿಲ್ಲ. ಅಂದಮೇಲೆ ಈ ಯುಗದ ಮಾನವನ ಸ್ಥಿತಿ ಏನು?

ಇದು ದೇವತೆಗಳ ವಿಚಾರ ಸೂಕ್ಷ್ಮದೇಹದ ವಿಚಾರ ಮಾನವನಿಗೆ ಎಟುಕದು. ಮಾನವನು ಸ್ಥೂಲದೇಹ ಕಣ್ಣಿಗೆ ಕಂಡರೂ ಅದನ್ನು ಸರಿಯಾಗಿ ಅರಿಯಲಾರ. ಅಂದಮೇಲೆ ಸೂಕ್ಷ್ಮದ ವಿಷಯ ಅರಿಯಬಲ್ಲರೆ. ಅದನ್ನರಿಯಲು ವಿಶಿಷ್ಟವಾದ ಸಾಧನೆ ಅಗತ್ಯ. ನಮಗೆ ಕಾಣದೆ ಇದ್ದದ್ದು, ಇಲ್ಲವೆಂದು ಹೇಳುವುದು ಸರಿಯಲ್ಲ.

ಒಂದು ಚಿಕ್ಕ ಮಗು ಚಿಕ್ಕಂದಿನಲ್ಲಿ ತನ್ನ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾಗಿದೆ ಎಂದು ಭಾವಿಸಿ. ಅದಕ್ಕೆ ತಂದೆ ತಾಯಿಗಳ ಲಾಲನೆ–ಪಾಲನೆ, ವಾತ್ಸಲ್ಯ, ಪ್ರೀತಿ ಇವುಗಳ ಸಂಪರ್ಕವೇ ಇಲ್ಲ. ಆ ಮಗು 'ತಂದೆ ತಾಯಿಗಳಿಲ್ಲ' ಎಂದು ಹೇಳಿದರೆ ಜಗತ್ತು ಒಪ್ಪಬಹುದೇ? ಪಾಂಡವರ ಉಪಭೋಗದ ವಿಷಯಕ್ಕಾಗಿ ನಮ್ಮ ಇಂದಿನ ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಲು ಪ್ರಯತ್ನಿಸುತ್ತೇನೆ.

'ಹಂಸ ಕ್ಷೀರ ನ್ಯಾಯ' ಒಂದು ನಂಬಿಕೆಯಿದೆ ಅದನ್ನು ಇಂದಿಗೂ ಬಳಸಲಾಗುತ್ತದೆ. ಇಂದು ಹಂಸವನ್ನು ಕಂಡವರಿಲ್ಲ. ಅದರ ಪ್ರಯೋಗವನ್ನು ಮಾಡಿದವರೂ ಇಲ್ಲ ಎಂದು ನಂಬೋಣ. ಅಂದರೂ ಆ ವಾಕ್ಯ ಸುಳ್ಳಾಗಲಾರದು. ಹಂಸದ ಎದುರಿನಲ್ಲಿ ಹಾಲುನೀರುಗಳನ್ನು ಕೂಡಿಸಿಟ್ಟಾಗ ಅದು ಕೇವಲ ಹಾಲನ್ನು ಮಾತ್ರ ಹೀರಿ, ನೀರನ್ನು ಬಿಡುತ್ತಿತ್ತಂತೆ. ಈ ಗುಣ ಅದಕ್ಕೆ ಮಾತ್ರ ಸಾಧ್ಯ. ಹಿಂದಿನವರು ಯಾರೋ ಯಾವ ಕಾಲಕ್ಕೊ ಅದನ್ನು ಪ್ರಯೋಗಿಸಿಯೇ ಮನಗಂಡು ಬರೆದಿರಬೇಕು. ಅದನ್ನು ನಾವು 'ಸುಳ್ಳು' ಎನ್ನಲಾಗುವುದಿಲ್ಲ. ಅದರಂತೆ ಪರಮಾತ್ಮನ ಅವತಾರಗಳಾದ ವ್ಯಾಸರು ಬರೆದಿದ್ದಾರೆ. ಅಷ್ಟೇ ಅಲ್ಲ ಅವರು ಪಾಂಡವರಿಗೂ, ದ್ರುಪದನಿಗೂ ಪ್ರತ್ಯಕ್ಷೀಕರಿಸಿ ತೋರಿಸಿದ್ದಾರೆ. ಅವರಿಬ್ಬರೂ ನೇರ ಸಂಬಂಧಪಟ್ಟವರು ಒಪ್ಪಿದ್ದಾರೆ. ಆಚರಣೆಯಲ್ಲೂ ತಂದಿದ್ದಾರೆ. ಅಂದಮೇಲೆ ಇಂದು ಆ ವಿಷಯಕ್ಕೆ ನಮಗೇಕೆ ಸಂಶಯ.

'ಹಂಸ ಕ್ಷೀರ ನ್ಯಾಯ' ಇಂದು ಕೇವಲ ಗುಣ–ದೋಷಗಳನ್ನು ಕಂಡು ಹಿಡಿಯುವಲ್ಲಿ, ಗುಣಗಳನ್ನು ಸ್ವೀಕರಿಸುವಲ್ಲಿ, ದೋಷಗಳನ್ನು ತ್ಯಜಿಸುವುದರಲ್ಲಿ ಮಾತ್ರ ಬಳಸಲಾಗುತ್ತದೆ. ಇದೊಂದು ಸತ್‌ಸಂಪ್ರದಾಯವಾಗಿ ಉಳಿದಿದೆ.

ಯುವ ಬಂಧುಗಳಿಗೆ ಒಂದು ಚಿಕ್ಕ ಉದಾಹರಣೆಯೊಂದಿಗೆ ಸ್ಪಷ್ಟೀಕರಿಸ ಬಯಸಿದ್ದೇನೆ.

ಹಿಂದೆ ದ್ರೌಪದಿಯ ವಿಷಯ ವಿವರಿಸುವಾಗ ಬೆಳಕು (ಬಿಳಿ ಬಣ್ಣ) ಗಾಳಿ ಉದಾಹರಣೆಗಳನ್ನು ಕೊಡಲಾಗಿದೆ. ಇಂದು ಅದನ್ನೇ ಮುಂದುವರಿಸಬಯಸಿದ್ದೇನೆ.

ಗಾಳಿಯಲ್ಲಿ ಅನೇಕ ಅನಿಲಗಳು (ಆಮ್ಲಜನಕ, ಇಂಗಾರಾಮ್ಲ ಇತ್ಯಾದಿ) ಸೇರಿಕೊಂಡಿವೆ. ಅವು ಯಾವವೂ ಕಣ್ಣಿಗೆ ಕಾಣುವುದಿಲ್ಲ. ಆ ಗಾಳಿಯಲ್ಲಿ ಒಂದು ಮೇಣಬತ್ತಿ ಅಥವಾ ದೀಪವನ್ನು ಹಚ್ಚಿ ಇಟ್ಟಾಗ, ಗಾಳಿಯಲ್ಲಿ ಬೇಕಾದ ಘಟಕವನ್ನು ಮಾತ್ರ ಸ್ವೀಕರಿಸಿ, ಉರಿಯುತ್ತದೆ. ಇದು ಪ್ರಯೋಗದಿಂದ, ಅನುಭವದಿಂದ ಸಿದ್ಧವಾದ ವಿಷಯ.

ಅದೇ ರೀತಿಯಾಗಿ ಒಂದು ಗಿಡವನ್ನು ನೆಟ್ಟಾಗ, ಆ ಗಿಡವು ತನ್ನ ಸುತ್ತಲಿರುವ ಗಾಳಿಯಲ್ಲಿ ತನಗೆ ಬೇಕಾದ ಅನಿಲವನ್ನು ಸ್ವೀಕರಿಸಿ, ಬೇಡವಾದುದನ್ನು ಬಿಟ್ಟುಬಿಡುತ್ತದೆ.

ಇದಕ್ಕೆ ಪೂರಕವಾಗಿ ಇನ್ನೊಂದು ದೃಷ್ಟಾಂತ ಕೊಡಬಹುದು. ಕಡಪಕಲ್ಲು (ಕಪ್ಪುಶಿಲೆ) ಅದನ್ನು ಚಿಕ್ಕದಾಗಿ ಚೂರುಗಳನ್ನಾಗಿ ಮಾಡಿ ಕಬ್ಬಿಣದ ಚೂರುಗಳಲ್ಲಿ ಬೆರೆಸಿದಾಗ ಸಾಮಾನ್ಯರಿಗೆ ಅದನ್ನು ಕಂಡು ಹಿಡಿಯುವುದು ಕಷ್ಟವಾಗುತ್ತದೆ. ಆಯಸ್ಕಾಂತ (Magnit) ತಂದು ಅದರಲ್ಲಿಟ್ಟಾಗ ಅದು ಕೇವಲ ಕಬ್ಬಿಣದ ಚೂರುಗಳನ್ನು ಮಾತ್ರ ಆಕರ್ಷಿಸುತ್ತದೆ. ಕಲ್ಲು ಚೂರುಗಳನ್ನು ಮುಟ್ಟುವುದಿಲ್ಲ. ಆಯಸ್ಕಾಂತದ ಗುಣ ನಮ್ಮಲ್ಲಿ ಬಂದಾಗ ನಾವು ದ್ರೌಪದಿ ವಿಷಯ ತಿಳಿಯಬಲ್ಲೆವು.

ಇವು ಜಗತ್ತು ಒಪ್ಪಿದ ವಿಷಯಗಳು. ಅದು ಸೃಷ್ಟಿಯ ನಿಯಮ. ವಿಜ್ಞಾನಿಗಳ ಕಣ್ಣಿಗೆ ಬಿದ್ದದ್ದು ಎಲ್ಲರೂ ಅರಿಯರು.

ಸೃಷ್ಟಿಯನ್ನೇ ಸೃಷ್ಟಿಸುವ ಶಕ್ತಿಯುಳ್ಳವ ಪರಮಾತ್ಮ, ಆತನ ಅನುಯಾಯಿ ಗಳಾದ ದೇವತೆಗಳು ಕೂಡ. ಅಂದಮೇಲೆ ಅವರು ಏನುತಾನೆ ಮಾಡಲಿಕ್ಕಿಲ್ಲ? ಎಂದು ಒಪ್ಪಿಕೊಂಡು ಮುಂದೆ ಸಾಗುವುದೇ ದೇಶಕ್ಕೂ ಹಿತ, ಸಮಾಜಕ್ಕೂ ಒಳಿತು ಎಂದು ವಿನಂತಿಸಬಯಸುತ್ತೇನೆ.

**ವಾಷಿಷ್ಠ ಯಾದವವೃಷಾ ವಪಿಕೇಶವೌತಾ**
**ತತ್ರೋಷತುಃ ಪರಮ ಸೌಹೃವ ತೋ ಹಿತೇಷು**
**ತಾಭ್ಯಾ ಮನಂತ ಗುಣಪೂರ್ಣ ಸುಖಾತ್ಮಕಾಭ್ಯಾಂ**
**ಪಾರ್ಥಾಶ್ಚತೇ ಮುಮುದಿರೇಯುತ ಸತ್ಕಥಾಬಿಃ** ||೧೮೮||

ವಸಿಷ್ಠ ಮತ್ತು ಯಾದವ ಕುಲದಲ್ಲಿಯೂ ಶ್ರೇಷ್ಠರಾದ, ಬ್ರಹ್ಮ, ರುದ್ರ ಪ್ರೇರಕರಾದ, ಶ್ರೀಕೃಷ್ಣ ಮತ್ತು ವ್ಯಾಸರು ಪಾಂಡವರ ಜೊತೆಯಲ್ಲಿ ಬಹು ಪ್ರೀತಿಯಿಂದ ಇರುತ್ತಿದ್ದರು. ಆ ಪಾಂಡವರು ಕೂಡ, ಆನಂದಸ್ವರೂಪರು, ಅಗಣಿತಗುಣಪೂರ್ಣರೂ ಆದ ಅವರಿಂದ ಸತ್ಕಥೆಗಳನ್ನು ಕೇಳುತ್ತ, ಕಾಲಕ್ಷೇಪ ಮಾಡುತ್ತ ಸಂತೋಷದಿಂದ ಇದ್ದರು.

**ಕೌರವರ ವೃತ್ತಾಂತ :**

**ಪೂರ್ವಂ ಹಿತೇಷು ವನಗೇಷು ಬಭೂವ ಕಾಶಿರಾಜ್ಞಃ**
**ಸುತಾ ಕೃತೇ ಉರುಕ್ಷಿತಿ ಪಾಲಯೋಗಃ ।**
**ತತ್ರಸ್ವಯಂ ವರಗತಾಂ ಧೃತರಾಷ್ಟ್ರ ಪುತ್ರಃ**
**ಕನ್ಯಾಂಬಲಾಜ್ಜಗೃಹ ಆತ್ಮ ಬಲಾತಿ ದೃಪ್ತಃ** ॥೧೮೯॥

ದ್ರೌಪದಿ ವಿವಾಹಕ್ಕಿಂತ ಮೊದಲು, ಪಾಂಡವರು ಹಿಡಂಬನ ವನದಲ್ಲಿದ್ದಾಗ ಕಾಶಿರಾಜನ ಮಗಳ ಸ್ವಯಂವರ ಏರ್ಪಟ್ಟಿತು. ಅನೇಕ ರಾಜರು ಸೇರಿದ್ದರು. ಅಲ್ಲಿಗೆ ದುರ್ಯೋಧನನು ಹೋಗಿ ಕನ್ನಿಕೆಯನ್ನು ಬಲಾತ್ಕಾರದಿಂದ ಹಿಡಿದು ತಂದನು.

**ಪೂರ್ವಂ ಹಿತೇಷು ರಾಜಗಣನೇ ಮಗಧಾಧಿರಾಜಃ**
**ಸಂಖ್ಯಾತ ಇತ್ಯ ತಿರುಷಾ ಪ್ರಗೃಹೀತ ಕನ್ಯೇ**
**ದುರ್ಯೋಧನೇ ನೃಪತಯೋಯು ಯುಧುಷ್ಮ ತೇನ**
**ಭಗ್ನಾಶ್ಚ ಕರ್ಣ ಸಹಿತೇನ ಸಹಾನು ಜೇನ** ॥೧೯೦॥

ಆ ಸ್ವಯಂವರದಲ್ಲಿ ಅನೇಕ ರಾಜರು ಬಂದು ನೆರೆದಿದ್ದರು. ಅವರಲ್ಲಿ ಜರಾಸಂಧನ ಹೆಸರು ಮೊದಲು ತೆಗೆದುಕೊಳ್ಳಲಾಯಿತು. ಇದನ್ನು ಕೇಳಿದ ದುರ್ಯೋಧನನು ಕುಪಿತನಾಗಿ ಕನ್ಯೆಯನ್ನು ಬಲಾತ್ಕಾರದಿಂದ ಹಿಡಿದು ಎಳೆದಾಗ, ಉಳಿದ ರಾಜರೆಲ್ಲರು ದುರ್ಯೋಧನನ ಜೊತೆಗೆ ಯುದ್ಧಕ್ಕೆ ನಿಂತರು. ದುರ್ಯೋಧನ, ಕರ್ಣ ಮತ್ತು ಉಳಿದ ಕೌರವರು ಕೂಡಿ ಅವರನ್ನು ಸೋಲಿಸಿದರು.

**ಭಗ್ನೇಷು ತೇಷ ಪುನರಾತ್ತ ಶರಾಸನೇಷು**
**ಕರ್ಣೋ ಜಗಾದ ಧೃತರಾಷ್ಟ್ರ ಸುತಂ ಪ್ರಯಾಹಿ**
**ಯುಕ್ತಃ ಸಹೋದರ ಜನೈರ್ಗುರು ಭೀಷ್ಮ ಮುಖ್ಯೈಃ**
**ಯುರ್ಕ್ತಸ್ಯ ತೇನ ಪುರಮೇತ್ಯಹಿ ಧರ್ಷಣೇಶಾಃ** ॥೧೯೦॥

ಪರಾಜಿತರಾದ ರಾಜರೆಲ್ಲರು ಸೇರಿ, ಪುನಃ ಬಾಣಗಳಿಂದ ಸಜ್ಜಿತರಾಗಿ ದುರ್ಯೋಧನನ ಜೊತೆಗೆ ಯುದ್ಧಕ್ಕೆ ಬಂದರು. ಆಗ ಕರ್ಣನು ದುರ್ಯೋಧನನ ಹತ್ತಿರ ಬಂದು "ನೀನು ತಮ್ಮಂದಿರೊಡನೆ ಹಸ್ತಿನಾವತಿಗೆ ಮರಳು. ಅಲ್ಲಿ ಗುರುಗಳು (ದ್ರೋಣರು) ಭೀಷ್ಮರು ಮುಖಂಡರಿರುವುದರಿಂದ ಇವರು ಅಲ್ಲಿಗೆ ಬಂದು ಯುದ್ಧ ಮಾಡಲು ಶಕ್ತರಾಗಲಾರರು" ಎಂದು ಹೇಳಿದನು.

**ಏಕಾಂತತೋ ಜಯಮವೀಕ್ಷ್ಯ ನಾನು ಯಾತಿ**
**ಬಾರ್ಹದ್ರಥಃ ಪುರುಗತಸ್ಯ ಜಯೇನ ನಿಷ್ಠಾ**
**ದ್ರೌಣೇಂ ಹಿ ರುದ್ರತನು ಮೇಷ ಸದಾ ವಿಜಾನನ್ನೊ**
**ತೇನಯುದ್ಧ ಮಭಿವಾಂಛತಿ ರುದ್ರ ಭಕ್ತಃ** ॥೧೯೨॥

ಜರಾಸಂಧನು ತಾನು ಗೆಲ್ಲುತ್ತೇನೆ ಎಂಬ ವಿಶ್ವಾಸವಿಲ್ಲದೇ ಯುದ್ಧಕ್ಕೆ ಹೊರಡುವುದಿಲ್ಲ. ಪಟ್ಟಣದಲ್ಲಿರುವ ನಿನ್ನನ್ನು ಜಯಿಸುತ್ತೇನೆಂಬ ವಿಶ್ವಾಸವು ಅವನಿಗೆ

ಉಂಟಾಗಲಾರದು. ಕಾರಣ ಅವನು ಅಲ್ಲಿಗೆ ಯುದ್ಧಕ್ಕೆ ಬರುವುದಿಲ್ಲ. ಇದಲ್ಲ ಅಶ್ವತ್ಥಾಮರನ್ನು ಅವನು ರುದ್ರದೇವರ ಅವತಾರವೆಂದೇ ಬಗೆಯುತ್ತಾನೆ. ಶಿವಭಕ್ತನಾ ಜರಾಸಂಧನು ಅಶ್ವತ್ಥಾಮರೊಂದಿಗೆ ಯುದ್ಧ ಮಾಡಲು ಇಚ್ಛಿಸುವುದಿಲ್ಲ. ಈ ಕಾರ ದಿಂದಲೂ ಅವನು ಅಲ್ಲಿಗೆ ಬರುವುದಿಲ್ಲ.

ಏಕೋಽಹಮೇವ ನೃಪತೀನ್ನೃತಿ ಯೋಧಯಿಷ್ಯ
ಏತೈರ್ಮಯಿ ಪ್ರವಿಜಿತೇಽಪನತೇಽಸ್ತ್ಯ ಕೀರ್ತಿಃ
ಏಕಂಚತೇಽನುಜ ಮಿಮೇಯದಿ ಪೌರುಕ್ಷೇಣ
ಗೃಹ್ಣೀಯುರತ್ರ ತವಕೀರ್ತಿರುಪೈತಿ ನಾಶಮ್ ॥೧೯॥

ನಾನೊಬ್ಬನೇ ಉಳಿದ ರಾಜರನ್ನು ಎದುರಿಸಿ ಯುದ್ಧ ಮಾಡಬಲ್ಲೆ. ನಾನ ಸೋತರೂ ನಿನಗೆ ಅಪಕೀರ್ತಿಬಾರದು. ನಿಮ್ಮಲ್ಲಿ ಯಾರನ್ನೇ ಆಗಲಿ ಒಬ್ಬನನ್ನು, ರಾಜರು ಪರಾಕ್ರಮದಿಂದ ಹಿಡಿದು ಬಿಟ್ಟರೆ ನಿನಗೆ ಅಪಕೀರ್ತಿ ಖಂಡಿತ.

ಭೀಷ್ಮಾದಯೋಽಪಿ ನಹಿಯೋಧಯಿತುಂ ಸಮರ್ಥಾಃ
ರಾಜ್ಞಾಹ್ಯನೇನ ತತ ಏವಚ ಬಾಹ್ಲಿಕೋಽಸ್ಯ
ಭೃತ್ಯೋ ಬಭೂವ ನಹಿ ಭೀಷ್ಮ ಮಯಂ ಯುಧೇ
ಗಾದ್ರಾ ಜಾನಹೀತಿ ನಚತೇನ ವಿರೋಧ ಆಸೀತ್ ॥೧೪॥

ಭೀಷ್ಮರು ಕೂಡ ಜರಾಸಂಧನೊಡನೆ ಯುದ್ಧ ಮಾಡಲು ಸಮರ್ಥರಲ್ಲ ಜರಾಸಂಧನು, ರಾಜನಲ್ಲದೆ ಬೇರೊಬ್ಬನೊಂದಿಗೆ ಯುದ್ಧ ಮಾಡುವುದಿಲ್ಲ. ಭೀಷ್ಮರು ರಾಜರಲ್ಲ. ಅವರನ್ನು ಭೃತ್ಯನೆಂದೇ ತಿಳಿದಿದ್ದಾನೆ. ಕಾರಣ ಅವರಲ್ಲಿ ಯುದ್ಧ ಆಗಿಲ್ಲ ವಿರೋಧವೂ ಇಲ್ಲ. ಬಾಹ್ಲಿಕ ರಾಜನನ್ನು ಜರಾಸಂಧ ಸೋಲಿಸಿದ್ದಾನೆ. ಭೀಷ್ಮರ ಕೂಡ ಯುದ್ಧ ಮಾಡಿಲ್ಲ. ಈ ಕಾರಣಕ್ಕಾಗಿಯೇ ಭೀಷ್ಮರು ಅಜೇಯರೆಂದು ಪ್ರಸಿದ್ಧರಾಗಿದ್ದಾರೆ

ಇತ್ಯುಕ್ತ ಆಶು ಸವಿಮೃಶ್ಯ ಯಯೌ ಪುರಂಸ್ವಂ
ಕರ್ಣೋಽಪಿ ತೈ ಪ್ರತಿಯುಯೋಧ ಜಿಗಾಯ ಚೈತಾನ್
ಕರ್ಣಸ್ಯ ವೀರ್ಯ ಮಗಣಯ್ಯ ಜರಾಸುತೋಪಿ
ಹ್ಯೇಕೈಕಮೇವ ನೃಪತಿಂ ಸದಿದೇಶ ಯೋದ್ಧುಮ್ ॥೧೫॥

ಕರ್ಣನು ಈ ರೀತಿ ಹೇಳಿದ್ದನ್ನು ಕೇಳಿ, ದುರ್ಯೋಧನನು ಸ್ವಲ್ಪ ಆಲೋಚಿಸಿ, ಒಪ್ಪಿಕೊಂಡು ತನ್ನ ಊರಿಗೆ ಮರಳಿದನು. ಅತ್ತ ಕರ್ಣನು, ಒಬ್ಬೊಬ್ಬರಂತೆ ಎಲ್ಲ ರಾಜರನ್ನು ಗೆದ್ದನು. ಇದಕ್ಕೆ ಕಾರಣ, ಜರಾಸಂಧನು ಕರ್ಣನ ಸಾಮರ್ಥ್ಯವನ್ನು ಲೆಕ್ಕಿಸಿರಲಿಲ್ಲ. ಅದಕ್ಕಾಗಿ ಒಬ್ಬೊಬ್ಬರನ್ನೇ ಕಳಿಸಿದ್ದನು.

ಸರ್ವೇಷು ತೇಷು ವಿಜಿತೇಷ್ವ ಭಿಜಗ್ಮಿವಾನ್ಸಯೋದ್ಧುಂ
ಬೃಹದ್ರಥಸುತೋಽಪ್ಯ ಮುನಾರಥೇನ
ತಂಚೈವ ರಾಮವರತೋವಿರಥಂ ವಿಶಸ್ತ್ರಂ ಚಕ್ರೇ
ಸ ಚೈನಮಥ ಮುಷ್ಟಿಭಿರಭ್ಯು ಪೇತಾ ॥೧೬॥

ಕರ್ಣನು ಎಲ್ಲ ರಾಜರನ್ನು ಗೆದ್ದನು. ಇದನ್ನು ಕಂಡ ಜರಾಸಂಧನು ತಾನೇ ರಥಾರೂಢನಾಗಿ ಅವನ ಎದುರಿಗೆ ಬಂದನು. ಕರ್ಣನು, ಪರಶುರಾಮರ ವರ ಬಲದಿಂದ ಜರಾಸಂಧನನ್ನೂ ವಿರಥನನ್ನಾಗಿ ಮಾಡಿದನು. ಆಗ ಅವರಿಬ್ಬರಲ್ಲಿ ಮುಷ್ಟಿಯುದ್ಧ ಪ್ರಾರಂಭವಾಯಿತು.

**ಸಂಧೌಯುದ್ಧೈವ ಜರಯೊ ಪ್ರತಿಸಂಧಿ ತಸ್ಯ**
**ಕರ್ಣೋ ಜಘಾನ ನಪರತ್ರ ತುತೋಷ ರಾಜಾ**
**ನ ಜ್ಞಾತ ಮೇತದಪಿ ಹೋ ಹಲಿನಾ ತದೇ ತತ್**
**ಜ್ಞಾತಂ ತ್ವಯಾ ಭವ ತತೋ ಮಮ ಭೃತ್ಯ ಏವ ||೧೯೭||**

ಜರಾಸಂಧ ಮತ್ತು ಕರ್ಣ, ಮುಷ್ಟಿಯುದ್ಧ ಮಾಡುತ್ತಿರುವಾಗ, ಕರ್ಣನು, ಜರಾಸಂಧನ ದೇಹ ಜೋಡಿಸಿದ ಸಂಧಿಯ ಮೇಲೆ ಚೆನ್ನಾಗಿ ಹೊಡೆದನು. ಬೇರೆ ಕಡೆಗೆ ಹೊಡೆಯಲಿಲ್ಲ. ಇದನ್ನು ಕಂಡ ಜರಾಸಂಧನು, ರೇಗದೆ, ಸಂತೋಷಗೊಂಡು, ಈ ನನ್ನ ಮರ್ಮ ಸ್ಥಳವು ಬಲರಾಮನಿಗೂ ಗೊತ್ತಿಲ್ಲ. ಇಂದು ನೀನು ಅರಿತಿರುವೆ. ಇದು ನನಗೆ ಆಶ್ಚರ್ಯವಾಗಿದೆ. ಇರಲಿ, ನಿನ್ನಂದ ಯುದ್ಧ ಬೇಡ – ನೀನು ನನ್ನ ಅಧೀನನಾಗಿರು" ಎಂದು ಹೇಳಿದನು.

**ಏವಂ ವಿಧಂ ಸುಕುಶಲಂ ಬಹುಯುದ್ಧ ಶೌಂಡಂ**
**ನತ್ವಾಂ ಹನಿಷ್ಯ ಉತತೇ ವಿತುರೇವ ಪೂರ್ವಂ**
**ಬಾಹ್ವೋರ್ಬಲಾದಭಿಹೃತಂ ಹಿ ಮಯಾಂಗರಾಜ್ಯಂ**
**ತತ್ತ್ವಂ ಗೃಹಾಣ ಯುಧಿಕರ್ಮಕರಶ್ಚ ಮೇಸ್ಯಾಃ ||೧೯೮||**

"ನಿನ್ನಂಥ ಕುಶಲನನ್ನು, ಯುದ್ಧ ಪರಾಕ್ರಮಿಯನ್ನು ನಾನು ಕೊಲ್ಲುವುದಿಲ್ಲ. ಬದಲಾಗಿ, ನಾನು ನನ್ನ ಬಾಹುಬಲದಿಂದ ಹಿಂದೆ ನಿನ್ನ ತಂದೆಯಿಂದ ಗೆದ್ದುಕೊಂಡ ಅಂಗ ರಾಜ್ಯವನ್ನು ನಿನಗೆ ಕೊಡುತ್ತೇನೆ. ಅದನ್ನು ನೀನು ತೆಗೆದುಕೋ. ಪ್ರಸಂಗ ಬಂದಾಗ ನನಗೆ ಸಹಾಯಕನಾಗು" ಎಂದು ಹೇಳಿದನು.

**ವಿ. ವಿ. :** ಹಿಂದೆ ವಿದ್ಯಾಭ್ಯಾಸದ ಪ್ರಸಂಗದಲ್ಲಿ ದುರ್ಯೋಧನನು, 'ಕರ್ಣನಿಗೆ ಅಂಗರಾಜ್ಯ ಕೊಟ್ಟನು' ಎಂದು ಹೇಳಿ ಆಗಿದೆ. ಈಗ ಜರಾಸಂಧನಲ್ಲಿ ಅದು ಮತ್ತೆ ಎಲ್ಲಿಂದ ಬಂತು? ಎಂಬ ಶಂಕೆಗೆ ಸಮಾಧಾನ.

**ಇತ್ಯುಕ್ತ ಆಶು ಸತಥೈವ ಚಕಾರ ಕರ್ಣಃ**
**ಪೂರ್ವಂ ಹಿ ತಸ್ಯ ನಿಜರಾಜ್ಯ ಪದೈಕ ದೇಶಃ**
**ದುರ್ಯೋಧನೇನ ವಿಹಿತೋ ಮಗದಾಧಿ ರಾಜಂ**
**ಜಿತ್ವಾ ವೃಕೋದರ ಹೃತಃ ಪಿತು ರೇವದತ್ತಃ ||೧೯೯||**

ಜರಾಸಂಧನ ಮಾತುಗಳನ್ನು ಕೇಳಿದ ಕರ್ಣನು ಹಾಗೇ ಆಗಲಿ ಎಂದು ರಾಜ್ಯವನ್ನು ಸ್ವೀಕರಿಸಿದನು. (ಈಗ ಕರ್ಣನು ಪೂರ್ಣ ಅಂಗರಾಜ್ಯಕ್ಕೆ ರಾಜನಾಗಿದ್ದಾನೆ.)

ಪೂರ್ವದಲ್ಲಿ ಅಂಗರಾಜ್ಯ ಕರ್ಣನ ತಂದೆಯ (ಅತಿರಥನ) ಸ್ವಾಧೀನದಲ್ಲಿತ್ತು. ಧರ್ಮರಾಜನ ಯುವರಾಜ ಪಟ್ಟದ ನಂತರ ಅದನ್ನು ಜರಾಸಂಧನು ಗೆದ್ದಿದ್ದನು. ಭೀಮಸೇನನು ಜರಾಸಂಧನಿಂದ ಅಂಗ ದೇಶದ ಕೆಲ ಭಾಗವನ್ನು ಕಸಿದು ತಂದು ಧೃತರಾಷ್ಟ್ರನಿಗೆ ಇತ್ತಿದ್ದನು. ಅದನ್ನೇ ದುರ್ಯೋಧನನು ಆಗ ಕರ್ಣನಿಗೆ ಕೊಟ್ಟಿದ್ದನು. ಈಗ ಉಳಿದ ಭಾಗ ಜರಾಸಂಧ ಕರ್ಣನಿಗೆ ಕೊಟ್ಟಿದ್ದಾನೆ.

**ಅಂಗಾಧಿರಾಜ್ಯ ಮುಪಲಭ್ಯ ಜರಾಸುತಸ್ಯ**
**ಸ್ನೇಹಂಚ ಸೂರ್ಯಸುತ ಆಶು ಕುರೂನ್ಸಗಾಮ**
**ದೃಷ್ಟ್ವೈವತಂ ಮುಮುದಿರೇ ಧೃತರಾಷ್ಟ್ರ ಪುತ್ರಾ**
**ನಾನೇನತುಲ್ಯ ಮ ಭಿ ಜಗ್ಮುರತೋ ಹರೀಂಚ ॥೨೦೦॥**

ಕರ್ಣನು ಜರಾಸಂಧನಿಂದ ಅಂಗರಾಜ್ಯ ಪಡೆದು, ಆತನೊಡನೆ ಸ್ನೇಹ ಸಂಪಾದಿಸಿ, ಕುರು ದೇಶಕ್ಕೆ ಹೋದನು. ಕರ್ಣನನ್ನು ಕಂಡ ಕೌರವರು ಬಹಳ ಸಂತುಷ್ಟ ಗೊಂಡರು. ಜರಾಸಂಧನನ್ನೇ ಗೆದ್ದಿದ್ದಾನೆ ಅಂದಮೇಲೆ ಇವನಿಗೆ ಸದೃಶರಾದ ವೀರರಿಲ್ಲ. ಅಷ್ಟೇ ಅಲ್ಲ ಶ್ರೀಕೃಷ್ಣನಿಗಿಂತಲೂ ಕರ್ಣನನ್ನು ಅಧಿಕನೆಂದೇ ಬಗೆದರು.

ವಿ. ವಿ. : ಶ್ಲೋಕ ೧೮೯ ರಿಂದ ೨೦೦ ಶ್ಲೋಕಗಳ ವರೆಗೆ ಓದಿದಾಗ ಓದುಗರು ಈ ಕೆಲವು ವಿಷಯಗಳನ್ನು ಸಂಗ್ರಹಿಸಬಹುದು.

೧) ಕರ್ಣನ ನಿಷ್ಠೆ – ತಾನು ಸತ್ತರೂ ಚಿಂತೆಯಿಲ್ಲ ತನಗೆ ಅಪಕೀರ್ತಿ ಬಂದರೂ ಚಿಂತೆಯಿಲ್ಲ. ದುರ್ಯೋಧನನಿಗೆ ಆತನ ಮನೆತನಕ್ಕೆ ಕೇಡಾಗದಿರಲಿ ಎಂಬುದೇ ಅವನ ಉದ್ದೇಶ. ಒಳ್ಳೆಯ ವೀರನಿದ್ದನು. ಅಂತೆಯೇ ಎಲ್ಲರನ್ನು ಗೆದ್ದನು. (ಇಲ್ಲಿ ಸ್ಪರ್ಧೆಯಿರಲಿಲ್ಲ. ಅದಕ್ಕಾಗಿ ಪರಶುರಾಮರ ವರ ಫಲಿಸಿತು) ಆದರೂ ಜರಾಸಂಧನನ್ನು ಗೆಲ್ಲುವ ಸಾಮರ್ಥ್ಯ ವಿರಲಿಲ್ಲ. ಜರಾಸಂಧನ ಶರೀರದ ಮರ್ಮಯುಕ್ತವಾದ ಸಂಧಿಯನ್ನು ಬಲ್ಲವನಾಗಿದ್ದ ಕಾರಣ ಅವನಿಗೆ ಜಯ, ರಾಜ್ಯ, ಸ್ನೇಹ ಎಲ್ಲವೂ ದೊರೆತವು. ಅವನ ತರ್ಕಶಕ್ತಿ.

ಈ ಸಂಧಿ, ಕೇವಲ ಶ್ರೀಕೃಷ್ಣ ಮತ್ತು ಭೀಮ ಇಬ್ಬರು ಮಾತ್ರ ಬಲ್ಲವರಾಗಿದ್ದರು. ಕರ್ಣನಿಗೆ ಹೇಗೆ ತಿಳಿಯಿತು ವಿಚಾರಾರ್ಹ. ಆಕಸ್ಮಿಕವಾಗಿದ್ದರೆ ಆ ಮಾತು ಬೇರೆ. ದೈವಸಂಕಲ್ಪ ಎನ್ನಬೇಕು.

೨) ದುರ್ಯೋಧನನ ಅಳಿದೆ ತಾನು ಬದುಕಿದರೆ ಸಾಕು ಎನ್ನುವ ಆಕಾಂಕ್ಷೆ ಶ್ರೀಕೃಷ್ಣನ ಬಗೆಗೆ ಇರುವ ಅವನ ಅಜ್ಞಾನ.

೩) ಭೀಮನ ಸಾಹಸ ಮತ್ತು ಪರಾಕ್ರಮ ಇತರರು ತೋರದ ಶೌರ್ಯವನ್ನು ಪ್ರದರ್ಶಿಸಿದ್ದಾನೆ.

೪) ಆಗಿನ ಕಾಲದಲ್ಲಿದ್ದ ಜರಾಸಂಧನ ಸಾಮರ್ಥ್ಯ. ಅಂತೆಯೇ ಗಣನೆಯಲ್ಲಿ ಮೊದಲಿಗನಾಗಿದ್ದ. ಕರ್ಣನ ಸಾಮರ್ಥ್ಯವನ್ನು ಗಣನೆಗೆ ತಂದಿರಲಿಲ್ಲ. ಪ್ರಸಂಗ ಬಂದಾಗ, ಗುಟ್ಟು ರಟ್ಟಾದಾಗ, ರಾಜ್ಯದ ಲೋಭ ಒಡ್ಡಿ, ವೈರಿಯನ್ನು ಸ್ನೇಹಿತನನ್ನಾಗಿ

ಮಾಡಿಕೊಂಡಿದ್ದಾನೆ. ಸಮಯ ಬಂದಾಗ ಸಹಾಯಕ್ಕಾಗಿಯೂ ಕೇಳಿಕೊಂಡಿದ್ದಾನೆ. ಅವನ ಶಿವಭಕ್ತಿ ಮತ್ತು ಗುರುಭಕ್ತಿ. ಭೀಮನಿಗೂ ಸಿಕ್ಕದಂತೆ ಅರ್ಧ ಅಂಗರಾಜ್ಯವನ್ನು ದಕ್ಕಿಸಿಕೊಂಡಿದ್ದಾನೆ.

೫) ಅಂಗರಾಜ್ಯದ ಬಗೆಗೆ ಇರುವ ಅನುಮಾನಕ್ಕೆ ಪರಿಹಾರ.

**ಉದ್ವಾಹ್ಯಕಾಶಿ ತನಯಾಂ ಗಿರಿಜಾಭಿವಿಷ್ಟಾಂ**
**ಸಾಕ್ಷಾನ್ನರೇಷು ಜನಿತಾಂ ಪ್ರಥಮಾಮಲಕ್ಷ್ಮೀಂ**
**ತಸ್ಯಾಂ ಸುತಂತ್ವ ಜನಯೆತ್ಪುರ ಆನಯೋಽಷಃ**
**ಕನ್ಯಾಂ ಪುರಾಪ್ರಿಯತಮ್ಸಾಂಟ ಷಡಾನನಸ್ಯ** ॥೨೦೧॥

ಆ ದುರ್ಯೋಧನನು ಕಾಶಿರಾಜನ ಮಗಳನ್ನು ಮದುವೆ ಮಾಡಿಕೊಂಡನು. ಆ ಕನ್ಯೆಯು ಪೂರ್ವದಲ್ಲಿ ಸಮುದ್ರದ ಮಥನದ ಕಾಲದಲ್ಲಿ ಲಕ್ಷ್ಮೀ ದೇವಿಯರಿಗಿಂತಲೂ ಮೊದಲು ಹುಟ್ಟಿದ್ದಳು. ಅವಳೇ ಅಲಕ್ಷ್ಮೀ. ಇಂದು ಆಕೆ, ಪಾರ್ವತಿಯ ಆವೇಶದಿಂದ ಕೂಡಿ ಕಾಶಿಯ ನರೇಶನಲ್ಲಿ ಜನಿಸಿದ್ದಾಳೆ. ಹಿಂದೆ ರಾವಣನಮಗನಾದ ಅಕ್ಷಕುಮಾರರು ಇಂದು ಈಕೆಗೆ ಮಗನಾಗಿದ್ದಾನೆ. ಷಣ್ಮುಖನ ಪತ್ನಿಯೇ ಇಂದು ಇವಳಿಗೆ ಮಗಳಾಗಿ ಹುಟ್ಟಿದ್ದಾರೆ.

**ವಿ. ವಿ. :** ದುರ್ಯೋಧನ ಸಾಕ್ಷಾತ್ ಕಲಿಸ್ವರೂಪನು. ಅಲಕ್ಷ್ಮಿ ಅವನಿಗೆ ತಕ್ಕ ಹೆಂಡತಿ. ನಿಯತಪತಿತ್ವ ತಪ್ಪಬಹುದೇ. ಅವರಿಗೆ ತಕ್ಕಂತೆ ಅವರ ಮಕ್ಕಳು ಕೇಳಿ.

**ಪುತ್ರೋಽಬಭೂವ ಸತುಲಕ್ಷಣ ನಾಮಧೇಯಃ**
**ಸಾಲಕ್ಷಣೇತ್ಯಧಿಕರೂಪ ಗುಣಾಽಸ ಕನ್ಯಾ**
**ತಸ್ಯಾನುಜಾಶ್ಚ ನಿಜಯೋಗ್ಯ ಗುಣ ಅವಾಪು**
**ಭಾರ್ಯಾಯೋಃ ಪುನಶ್ಚ ಸ ಸುಯೋಧನ ಆಪಭಾರ್ಯಾಃ** ॥೨೦೨॥

ಅವರ ಮಗ ಅಲಕ್ಷಣನು. ಮಗಳು ಸುರೂಪಿಯಾದ ಕಾರಣ ಲಕ್ಷಣೆ. (ಗುಣದಿಂದಲ್ಲ) ದುರ್ಯೋಧನನಿಗೆ ತಕ್ಕಂತೆ ನಿಜಗುಣಗಳ ಯೋಗ್ಯತೆಗೆ ಅನುಸರಿಸಿ ತಮ್ಮಂದಿರಾಗಿ ಹುಟ್ಟಿದ್ದಾರೆ. ಅವರವರಿಗೆ ತಕ್ಕಂತೆ ಅವರವರ ಹೆಂಡಂದಿರು. (ಒಟ್ಟು ದುರ್ಗುಣಗಳ ಸಮೂಹ).

**ಪೂರ್ವಂಸುರಾಂತಕ ಇತಿ ಪ್ರಥಿತಃ ಸುತೋಽಭೂತ್**
**ದುಶ್ಯಾಸನಸ್ಯ ತದನು ಪ್ರತಿತಪ್ಯ ಮಾನಾಃ**
**ದೃಷ್ಟ್ವೈವ ಪಾರ್ಥ ಬಲವೀರ್ಯ ಗುಣಾನ್**
**ಸಮೃದ್ಧಿಂ ತಾಂ ಚೈವತೇ ಪ್ರತಿಯಯುಃ ಸ್ಮ ಕಲಿಂಗದೇಶಮ್** ॥೨೦೩॥

ಹಿಂದೆ ರಾಮಾಯಣ ಕಾಲದ ಸುರಾಂತಕ ಎಂಬ ರಾಕ್ಷಸನೇ ಇಂದು ದುಶ್ಯಾಸನನಿಗೆ ಮಗನಾಗಿ ಹುಟ್ಟಿದ್ದಾನೆ. ಪಾಂಡವರು ಬಂದ ಮೇಲೆ ಅವರ ಬಲ ಸಾಮರ್ಥ್ಯವನ್ನು ಸಮೃದ್ಧಿ ಕಂಡ ಕೌರವರು ಸಹಿಸದೆ ಕಲಿಂಗ ದೇಶದತ್ತ ನಡೆದರು.

**ಆಸೀತ್ಸ್ವಯಂವರ ಉತಾತ್ರ ಕಲಿಂಗ ರಾಜಪುತ್ರ್ಯಾಃ**
**ಸುವಜ್ರ ಇತಿಯಂ ವದಂತಿ ಭೂಪಾಃ**
**ಕೌದ್ರಾದ್ವರಾದ ವಿಜಿತಸ್ಯ ಚ ತಸ್ಯ ಕನ್ಯಾಂದೃಷ್ಟ್ವೋ**
**ಬಲಾತ್ಸ ಜಗೃಹೇ ಧೃತರಾಷ್ಟ್ರ ಸೂನುಃ ॥೨೦೪॥**

ಅಲ್ಲಿ ಕಲಿಂಗ ರಾಜನು ತನ್ನ ಮಗಳ ಸ್ವಯಂವರವನ್ನು ಏರ್ಪಡಿಸಿದ್ದನು. ಅವನನ್ನು ಎಲ್ಲ ರಾಜರು 'ಸುವಜ್ರ' ಎಂದೇ ಕರೆಯುತ್ತಿದ್ದರು. ಅವನಿಗೆ ಮಹಾರುದ್ರ ದೇವರ ವರವಿದ್ದ ಪ್ರಯುಕ್ತ ಅನೇಕ ರಾಜರನ್ನು ಗೆದ್ದಿದ್ದನು. ಅಲ್ಲಿಗೆ ಸುಯೋಧನ ಹೋಗಿ ಬಲಾತ್ಕಾರದಿಂದ ಆ ಕಲಿಂಗ ರಾಜನ ಕನ್ಯೆಯನ್ನು (ಹಿಡಿದನು) ಅಪಹರಿಸಿದನು.

**ತತ್ರಾಥ ರುದ್ರವರತಃ ಸ ಜರಾಸುತೇನಯುಕ್ತೋ**
**ಬಬಂಧ ಚ ಸುಯೋಧನ ಮಾಶು ಚಿತ್ರಾ**
**ಕರ್ಣಃ ಪರಾದ್ರವದಹಸ್ಯ ಸುತೇಷು ಪಾಂಡೋಃ**
**ಯಸ್ಮಾತ್ ಸ್ಪಧಾಗಮದತಃ ಸ ಪರಾಜಿತೋಽಭೂತ್ ॥೨೦೫॥**

ಅಲ್ಲಿ ಸುವಜ್ರನು ಜರಾಸಂಧನ ಸಹಾಯದಿಂದ ದುರ್ಯೋಧನನೊಂದಿಗೆ ಯುದ್ಧ ಮಾಡಿದನು. ರುದ್ರದೇವರ ವರದ ಪ್ರಯುಕ್ತ ಅವನು ಗೆದ್ದನು. ದುರ್ಯೋಧನ ನನ್ನು ಕಟ್ಟಿ ಹಾಕಿದನು. ಇಲ್ಲಿ ಕರ್ಣನು ಪಾಂಡವರ ಮೇಲಿನ ಸ್ಪರ್ಧೆಯಿಂದ ಬಂದಿದ್ದನು. ಕಾರಣ ಅವನಿಗೆ ಜಯ ಆಗಲಿಲ್ಲ, ಓಡಿಹೋದನು.

**ದುರ್ಯೋಧನೇಽನುಜಜನೈಃ ಸಹಿತೇ ಗೃಹೀತೇ**
**ಭೀಷ್ಮಾಂಬಿಕೇಯ ವಿದುರಾಗ್ರಜ ವಾಕ್ಯನುನ್ನಃ**
**ಭೀಮೋ ವಿಜಿತ್ಯ ನೃಪತೀನ್ಸ ಜರಾಸುತಾಂಸ್ತಾನ್**
**ಹತ್ವಾಸ ವಜ್ರ ಮಮುಚ ಧೃತರಾಷ್ಟ್ರ ಪುತ್ರಾನ್ ॥೨೦೬॥**

ದುರ್ಯೋಧನನ್ನು ತಮ್ಮನ ಸಹಿತನಾಗಿ ಬಂಧಿಸಲ್ಪಟ್ಟನೆಂದು ತಿಳಿದು ಭೀಷ್ಮ, ಧೃತರಾಷ್ಟ್ರ, ವಿದುರ, ಅಣ್ಣನಾದ ಧರ್ಮ ಇವರೆಲ್ಲರೂ ಭೀಮನಿಗೆ ಹೇಳಿದರು. ಅವರ ಆಜ್ಞೆಯ ಪ್ರಕಾರ ಭೀಮನು ಯುದ್ಧ ಮಾಡಿ, ಜರಾಸಂಧನನ್ನು ಗೆದ್ದು, ಸುವಜ್ರನನ್ನು ಕೊಂದು, ದುರ್ಯೋಧನ ಮೊದಲಾದವರನ್ನು ಬಂಧನದಿಂದ ಮುಕ್ತರನ್ನಾಗಿ ಮಾಡಿದನು.

**ತೇಽಪಿಸ್ಮ ಕರ್ಣಸಹಿತಾ ಮೃತಕ ಪ್ರತೀಕಾ ನಾಗಾಹ್ವಯಂ**
**ಪುರಮಥಾಯ ಯುರಸ್ಯ ಮೀಷಾಂ**
**ದೃಷ್ಟ್ವಾ ವಿರೋಧಮವದನ್ನೃಪತಿಶ್ಚ ಧರ್ಮ ಪುತ್ರಂ**
**ಪುರಂದಕೃತಸ್ಥಲ ಮಾಶು ಯಾಹಿ ॥೨೦೭॥**

ದುರ್ಯೋಧನಾದಿಗಳು, ಕರ್ಣನ ಕೂಡಿಕೊಂಡು ಸತ್ತವರಂತೆ, ಅಪಮಾನಿತರಾಗಿ ಹಸ್ತಿನಾವತಿಗೆ ಹಿಂದಿರುಗಿ ಬಂದರು. ಧೃತರಾಷ್ಟ್ರನು, ದುರ್ಯೋಧನ ಮತ್ತು ಪಾಂಡವರಲ್ಲಿ ಉಂಟಾದ ಒಳಜಗಳ ಮತ್ತು ವಿರೋಧ ದ್ವೇಷವನ್ನು ಕಂಡು, ಧರ್ಮರಾಜನನ್ನು ಕರೆದು

ನೀವೆಲ್ಲರೂ, ಇಂದ್ರನಿಂದ ನಿರ್ಮಿತವಾದ, ಬ್ರಹ್ಮ ರುದ್ರರು ವಾಸ ಮಾಡಿದ ಇಂದ್ರನು ಅಲ್ಲೇ ಇದ್ದು ರಾಜ್ಯವಾಳಿದ ಇಂದ್ರಪ್ರಸ್ಥಕ್ಕೆ ನೀವು ಹೋಗಿರಿ" ಎಂದು ಹೇಳಿದನು.

**ತ್ವಂ ವೀರಶಕ್ರಸಮ ಏವ ತತಸ್ತ್ವ ವೈವಯೋಗ್ಯಂ**
**ಪುರಂ ತದಿತ ಅಶ್ವಭಿಷೇಚ ಯೊಮಿ**
**ಇತ್ಯುಕ್ತ ಆಹ ಸಯುಧಿಷ್ಠಿರ ಓ ಮಿತಿಸ್ಮ**
**ಚಕ್ರೇಭಿಷೇಕಮಪಿ ತಸ್ಯ ಸ ಅಂಬಿಕೇಯಃ ॥೨೦೯॥**

ನೀವು ವೀರರು, ಇಂದ್ರನಿಗೆ ಸಮರಾದವರು, ಆದ್ದರಿಂದ ಆ ಪಟ್ಟಣವೇ ನಿಮಗೆ ವಾಸಕ್ಕೆ ಯೋಗ್ಯವು. ಈಗಲೇ ನಿಮಗೆ ಪಟ್ಟಾಭಿಷೇಕ ಮಾಡುತ್ತೇನೆ" ಎಂದಾಗ, ಧರ್ಮರಾಜನು 'ಹಾಗೇ ಆಗಲಿ' ಎಂದನು. ಕೂಡಲೇ ಧೃತರಾಷ್ಟ್ರನು ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿದನು.

**ತಸ್ಯಾಭಿಷೇಕ ಮಕರೋತ್ಪ್ರಥಮಂ ಸಕೃಷ್ಣೋ–**
**ವಾಸಿಷ್ಠನಂದನ ಉರುರ್ಭವ ಚಕ್ರವರ್ತೀ**
**ಯಷ್ಟಾಶ್ವಮೇಧ ನಿಖಿಲಾತ್ಮ ಕರಾಜ ಸೂಯ**
**ಪೂರ್ವೈ ರ್ಮಖೈಃ ಸತತಮೇವಚ ಧರ್ಮಶೀಲಃ ॥೨೧೦॥**

ಆ ಧರ್ಮರಾಜನ ಪಟ್ಟಾಭಿಷೇಕ ಸಮಯದಲ್ಲಿ ಮೊದಲು ವೇದವ್ಯಾಸರು ಬಂದು, "ಶ್ರೇಷ್ಠ ಚಕ್ರವರ್ತಿಯಾಗು, ಅಶ್ವಮೇಧ, ರಾಜಸೂಯ ಮೊದಲಾದ ಎಲ್ಲ ಯಾಗಗಳನ್ನು ಮಾಡು. ಎಲ್ಲ ಫಲಪ್ರದ ಯಾಗಗಳನ್ನು ಮಾಡುತ್ತ ಸತತ ಧರ್ಮ ಶೀಲನಾಗಿ ಬಾಳು" ಎಂದು ಆಶೀರ್ವದಿಸಿದರು.

**ವಿ. ವಿ. :** ಇದು ಕೇವಲ ಆಶೀರ್ವಾದವಾಗಿರಲಿಲ್ಲ. ಧರ್ಮರಾಜನ ಬಾಳಿನ ಭವಿಷ್ಯವಾಗಿತ್ತು. ಜೀವನದ ಮಾರ್ಗದರ್ಶಕವಾಗಿತ್ತು.

**ಇತ್ಯೇವ ಪಾರ್ಷತಸುತಾ ಸಹಿತೇಽಭಿಷಿಕ್ತೇ**
**ಕೃಷ್ಣೋಽಪಿ ವೃಷ್ಣಿ ವೃಷಭಃ ಸತಧಾಭ್ಯಿಷಿಂಚತ್**
**ಏವಂ ಚ ಮಾರುತಿಶರಸ್ಯಭಿಷೇಕ ಮೇತೌ**
**ಸಂ ಚಕ್ರತುಃಸ್ಮಯುವ ರಾಜಪದೇ ಸಭಾರ್ಯೇಂ ॥೨೧೧॥**

ವ್ಯಾಸರು ಈ ರೀತಿಯಾಗಿ ಆಶೀರ್ವದಿಸಿ, ಧರ್ಮರಾಜ ಮತ್ತು ದ್ರೌಪದಿಗೆ ಅಭಿಷೇಕ ಮಾಡಿದರು. ನಂತರ ವೃಷ್ಣಿಯರಲ್ಲಿ ಶ್ರೇಷ್ಠವಾದ, ಯಾದವ ಕೃಷ್ಣನು ಕೂಡ ಮೇಲಿನಂತೆ ಆಶೀರ್ವದಿಸಿ ಅಭಿಷೇಕ ಮಾಡಿದನು. ನಂತರ ಭೀಮಸೇನ ಮತ್ತು ದ್ರೌಪದಿ ದೇವಿಯರನ್ನು ಕೂಡಿಸಿ ಯುವರಾಜ್ಯದ ಪಟ್ಟಾಭಿಷೇಕವೂ ಆಯಿತು.

**ಭೀಮೇಚ ಪಾರ್ಷಾತಸುತಾ ಸಹಿತೇಽಭಿಷಿಕ್ತೇ**
**ತಾಭ್ಯಾಮನಂತ ಸುಖಶಕ್ತಿ ಚಿದಾತ್ಮ ಕಾಭ್ಯಾಂ**
**ಅನ್ಯೈಶ್ಚ ವಿಪ್ರ ವೃಷಭೈಃ ಸುಕೃತೇಽಭಿಷೇಕೇ**
**ಧರ್ಮಾತ್ಮಜಾನು ಮುಮುದುರ್ನಿಖಿಲಾಶ್ಚ ಸಂತಃ ॥೨೧೨॥**

ದ್ರೌಪದಿಯುಕ್ತರಾದ ಭೀಮಸೇನ ದೇವರಿಗೆ ಚಿದಾತ್ಮ ದೇಹನು, ಅನಂತ ಶಕ್ತಿಯುಳ್ಳ, ಪರಮಾತ್ಮನ ಸ್ವರೂಪುಳ್ಳ ಶ್ರೀಕೃಷ್ಣನು ಅಭಿಷೇಕ ಮಾಡಿದ ನಂತರ, ಇತರ ಅನೇಕ ವಿಪ್ರ ಶ್ರೇಷ್ಠರು ಆಶೀರ್ವಾದಪೂರ್ವಕ ಅಭಿಷೇಕ ಮಾಡಿದರು. ಎಲ್ಲರೂ ಸಂತಸಗೊಂಡರು.

**ತಸ್ಮಿನ್ಮಹೋತ್ಸವವರೇ ದಿನಸಪ್ತಕಾನು ವೃತ್ತೇ**
**ವಸಿಷ್ಠ ವೃಷಭೇಣ ಚ ವೃಷ್ಣಿ ಹೇನ**
**ಕೃಷ್ಣೇನ ತೇಯು ಯುರಮಾ ಪೃಥಯಾತಯಾಚ**
**ಪಾಂಚಾಲ ರಾಜ ಸುತಯಾ ಸ್ಥಲ ಮಿಂದ್ರ ವಾಸಮ್ ||೨೧೩||**

ಆ ಪಟ್ಟಾಭಿಷೇಕ ಮಹೋತ್ಸವವು ಏಳು ದಿನಗಳ ವರೆಗೆ ನಡೆಯಿತು. ವೇದವ್ಯಾಸರು ಮತ್ತು ಶ್ರೀಕೃಷ್ಣ, ಕುಂತಿ, ಪಾಂಚಾಲಿ ಮತ್ತು ಪಾಂಡವರಿಂದ ಕೂಡಿ, ದೇವೇಂದ್ರನು ವಾಸಿಸಿದ್ದ, ಇಂದ್ರಪ್ರಸ್ಥಕ್ಕೆ ಬಂದರು.

**ಕೋಶಸ್ಯಚಾರ್ಥಸಹಿತಾಸ್ತು ಯದೈವ ಪಾರ್ಥಾ**
**ಗಚ್ಛಂತಿ ತಾನನುಯ ಯುರ್ಗಿಖಿಲಾ ಶ್ಚಪೌರಾಃ**
**ಊಚುಶ್ಚ ಪಾಬತ ಸುಯೋಧನ ಏಷ**
**ಪಾಪೋ ದೂರೇಚಕಾರನನು ಪಾಂಡುಸುತಾನ್ ಗುಣಾಢ್ಯಾನ್ ||೨೧೪||**

ಕೋಶದ ಅರ್ಧಭಾಗವನ್ನು ತೆಗೆದುಕೊಂಡು ಪಾಂಡವರು ಹೋದ ಕೂಡಲೇ, ಪೌರರು, ನಾಗರಿಕರು ಅವರನ್ನು ಅನುಸರಿಸಿ ನಡೆದರು. ಈ ಪಾಪಿಷ್ಠನಾದ ದುರ್ಯೋಧನನು ಗುಣಾಢ್ಯರಾದ ಪಾಂಡವರನ್ನು ಹೊರಗ್ಹಾಕಿದನಲ್ಲ! ಏನಾಶ್ಚ! ಎಂತಹ ಕಷ್ಟ!! ಎಂದ ಉದ್ಗರಿಸಿದರು. (ಉದ್ಗಾರ ತೆಗೆದರು.)

**ಭೀಮ ಪ್ರತಾಪ ಮವಲಂಬ್ಯ ಕಲಿಂಗ ಬಂಧಾನ್**
**ಮುಕ್ತಾಃ ಸುತಾಮಪಿ ಹಿತಸ್ಯ ಪುರಂನಿನಾಯ**
**ದ್ವೇಷ್ಟ್ಯೇವ ಮುಞ್ಚತಿ ಬಲಾನ್ ಹಿ ಸದೈವ ಪಾರ್ಥಾ**
**ಸ್ಯಾಮೋ ವಯಂ ಗುಣಭಿರದ್ಯ ಸಹೈವ ಪಾರ್ಥೈಃ ||೨೧೫||**

ಭೀಮಸೇನನ ಸಾಮರ್ಥ್ಯದಿಂದಲೇ, ಈ ಕೌರವರು ಕಲಿಂಗನ ಬಂಧನದಿಂದ ಮುಕ್ತರಾದರು. ಆತನ ಮಗಳನ್ನು ಪಡೆದರು. ಹಸ್ತಿನಾವತಿಗೆ ಬಂದರು. ಇಷ್ಟಿದ್ದರೂ ಅತಿ ಬಲಿಷ್ಠರಾದ ಪಾಂಡವರನ್ನು ದ್ವೇಷಿಸುವರಲ್ಲಾ! ಇರಲಿ. ನಾವು ಗುಣಿಗಳಾದ ಪಾಂಡವರೊಂದಿಗೆ ಇರೋಣ ಎನ್ನುತ್ತಿದ್ದರು.

**ಆಜ್ಞಾಪಯತ್ಯಪಿ ಸಭೇರಿರವೇಣ ಪಾರ್ಥಾನ್**
**ನೈವಾನುಗಚ್ಛಚ ಯದಿ ವ್ರಜಧಾನು ಪೋಂದ್ಯ**
**ವಿತ್ತಂ ಹರಿಷ್ಯ ಇಹ ಸರ್ವಮಪೀ ಆ ತಚ್ಚ-**
**ಪಾಪಃ ಕರೋತು ನವಯಂ ವಿಜಹಾಮ ಪಾರ್ಥಾನ್ ||೨೧೬||**

ದುರ್ಯೋಧನನು, ದೂತನಿಂದ, "ಯಾರೂ ಪಾಂಡವರನ್ನು ಅನುಸರಿಸಿ ಹೋಗಬಾರದು. ಇದಕ್ಕೂ ಮೀರಿ ಹೋದರೆ, ಅವರ ಹಣ, ಸಂಪತ್ತು ಇತ್ಯಾದಿಗಳನ್ನು ಮುಟ್ಟುಗೋಲು ಹಾಕಲಾಗುವುದು" ಎಂದು ಭೇರಿಯ ವಾದ್ಯದೊಂದಿಗೆ ಡಂಗುರ ಹಾಕಿಸಿದ್ದನು. ಆದರೂ ಪ್ರಜರು, "ಆ ಪಾಪಿಷ್ಠನು ಏನು ಮಾಡುತ್ತಾನೋ, ಎಲ್ಲವನ್ನೂ ಮಾಡಿಕೊಳ್ಳಲಿ. ನಾವಂತೂ ಪಾಂಡವರ ಜೊತೆಗೆ ಹೋಗುವೆವು" ಎನ್ನುತ್ತಿದ್ದರು.

ಸದ್ಭಿರ್ಹಿಸಂಗತಿರಿಹೈವ ಸುಖಸ್ಯ ಹೇತುಃ
ಮೋಕ್ಷೈಕ ಹೇತುರುತ ತದ್ವಿಪರೀತ ಮನ್ಯತ್
ತಸ್ಮಾದ್ವ್ರಜೇಷು ಸಹ ಪಾಂಡು ಸುತೈರ್ಹಿ
ಶಕ್ರ ಪ್ರಸ್ಥಂ ತ್ವಿತಿಸ್ಮ ಧೃತ ಚೇತಸ ಆಹಧರ್ಮಃ ॥೨೧೭॥

"ಸಜ್ಜನರ ಸಂಗವು ಸುಖಕ್ಕೆ ಕಾರಣ, ಮೋಕ್ಷಕ್ಕೆ ಸಾಧನವೂ ಅಹುದು. ಅದರ ವಿರುದ್ಧವಾದರೆ ನರಕ ನಿಶ್ಚಯ. ಅದಕ್ಕಾಗಿ ನಾವೆಲ್ಲರೂ ಪಾಂಡವರ ಜೊತೆಯಲ್ಲಿ ಇಂದ್ರಪ್ರಸ್ಥದಲ್ಲಿಯೇ ಇರುತ್ತೇವೆ. ಇದೇ ನಮಗೆ ಶ್ರೇಷ್ಠ ಧರ್ಮ" ಎಂದು ಹೇಳಿದರು.

ವಿ. ವಿ. : ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ.

ಪ್ರೀತಿರ್ಯದಿಸ್ಮ ಭವತಾಂ ಮಯಿ ಸಾನುಜೇಽಸ್ತಿ
ತಿಷ್ಠ ಧ್ವಮತ್ರ ಪಿತುರೇ ವಹಿ ಶಾಸನೇಯೇ
ಕೀರ್ತಿರ್ಹಿ ವೋಽನುಗಮಾ ನ್ನಾಪ್ತಿತುರತ್ಯ ಯೇನ
ನ ಶ್ರೇಯ್ನ ಇತ್ಯನುಸರಧ್ವ ಮಿಹಾಂಬಿಕೇಯಮ್ ॥೨೧೮॥

"ನನ್ನಲ್ಲಿ, ನನ್ನ ತಮ್ಮಂದಿರಲ್ಲಿ ನಿಮಗೆ ಪ್ರೀತಿಯಿರುವುದಾದರೆ, ನೀವು, ತಂದೆಯಾದ ಧೃತರಾಷ್ಟ್ರನ ಶಾಸನದಲ್ಲಿಯೇ ಉಳಿಯಿರಿ. ನೀವು ನಮ್ಮನ್ನು ಅನುಸರಿಸಿದರೆ, ತಂದೆಯ ಆಜ್ಞೆಯನ್ನು ಮೀರಿದಂತಾಗುತ್ತದೆ. ಅದರಿಂದ ನಮ್ಮ ಕೀರ್ತಿ ಹಾಳಾಗುತ್ತದೆ. ಕಾರಣ ನೀವು ಈ ಹಸ್ತಿನಾವತಿಯಲ್ಲಿಯೇ ಧೃತರಾಷ್ಟ್ರನನ್ನು ಅನುಸರಿಸಿಕೊಂಡು ನಡೆಯಿರಿ. ಅದೇ ನಿಮಗೆ ಧರ್ಮ" ಎಂದು ಧರ್ಮರಾಜನು ಹಿಂಬಾಲಿಸಿದ ಪ್ರಜರಿಗೆ ಹೇಳಿದನು.

ಇತ್ಯೇವತ್ತೈಃ ಪುರಜನಾ ನಿಖಿಲೈ ರ್ನಿಷಿದ್ಧಾಃ
ಕೃಚ್ಛ್ರೇಣತಸ್ಥುರಪಿ ತಾನ್ನನಸಾನ್ವಗಚ್ಛನ್
ಪ್ರಾಪ್ಯಾಥ ಶಕ್ರಪುರಮಸ್ಯರತೌಂಚ ಕೃಷ್ಣೌ
ದೇವೇಶ ಪಾರ್ಥಕಿ ಮಥಾಗಮದತ್ರ ಸೋಽಪಿ ॥೨೧೯॥

ಈ ರೀತಿಯ ಪಾಂಡವರ ಹೇಳಿಕೆಯಿಂದ (ಆಜ್ಞೆಯಿಂದ) ಎಲ್ಲ ಜನರು ತಡೆಯಲ್ಪಟ್ಟರು. ಆದರೂ ಕೆಲವರು ಮನಸ್ಸಿಗೆ ಸಮಾಧಾನವಾಗದೆ ಅನುಸರಿಸಿಯೇ ಹೋದರು. ಶ್ರೀಕೃಷ್ಣ ಮತ್ತು ವೇದವ್ಯಾಸರು ಪಾಂಡವರ ಜೊತೆಯಲ್ಲಿ ಇಂದ್ರಪ್ರಸ್ಥಕ್ಕೆ

ಬಂದರು. ದೇವ ಬಡಿಗನಾದ ವಿಶ್ವಕರ್ಮನನ್ನು ಸ್ಮರಿಸಿದರು. ಕೂಡಲೇ ಅವನು ಬಂದೇಬಿಟ್ಟನು.

**ವಾಸಿಷ್ಠ ಹೇನ ಯದು ಹೇನ ಚ ಪಾಂಡವಾನಾಂ**
**ರತ್ನೋತ್ಕರಂ ಕುರುಪುರಂ ಪುರುಹೂತಪೂರ್ಯೋಃ**
**ಸಾದೃಶ್ಯ ತಸ್ತ್ವಿತಿ ನಿಯುಕ್ತ ಉಭೌ ಪ್ರಣಮ್ಯ**
**ಸರ್ವೇಶ್ವರೌಸಕೃತವಾಂಶ್ಚ ಪುರಂ ತಥೈವ** ||೨೨೦||

"ವಾಸಿಷ್ಠ ಶ್ರೇಷ್ಠ ವ್ಯಾಸರು, ಯದುಕುಲ ಶ್ರೇಷ್ಠ ಶ್ರೀಕೃಷ್ಣ ಕೂಡಿ, ಪಾಂಡವರಿಗಾಗಿ, ಇಂದ್ರನ ಪಟ್ಟಣ ಅಮರಾವತಿಗೆ ಸದೃಶವಾದ, ರತ್ನಮಯವಾದ ಪುರವನ್ನು ರಚಿಸು" ಎಂದು ಆಜ್ಞಾಪಿಸಿದರು. ಆ ವಿಶ್ವಕರ್ಮನು ಸಕಲರಿಗೂ ಸ್ವಾಮಿಗಳಾದ ಆ ಉಭಯತರಿಗೂ ನಮಸ್ಕರಿಸಿ 'ಹಾಗೆ ಆಗಲಿ' ಎಂದು ಹೇಳಿ ರತ್ನಮಯವಾದ ಪಟ್ಟಣವನ್ನು ಸಿದ್ಧ ಮಾಡಿಯೇ ಬಿಟ್ಟನು.

**ಏವಂ ಚನಾತಿ ಜನಸಂವೃತಮನ್ಯದೇಶ**
**ಸಂಸ್ಥೈರ್ಜನೈರಭಿ ಪು ಪೂರಿರ ಆಶು ಪಾರ್ಥಾಃ**
**ತೇಷಾಂ ಗುಣೈ ರ್ಹರಿಪದಾನತಿ ಹೇತು ತಶ್ಚ**
**ರಾಷ್ಟ್ರಾಂತರಾ ಇಹ ಶುಭಾವಸತೀಃ ಸ್ಮಚಕ್ರುಃ** ||೨೨೧||

ಪಾಂಡವರು ಬರುವ ಪೂರ್ವದಲ್ಲಿ ಆ ಭಾಗದಲ್ಲಿ ಜನವಸತಿ ನಿಬಿಡವಾಗಿರಲಿಲ್ಲ. ಪಾಂಡವರು ಬಂದ ನಂತರ ಬೇರೆ ಬೇರೆ ದೇಶದ ಜನರು ಬಂದು ಅಲ್ಲಿ ಮನೆಗಳನ್ನು ಮಾಡಿದರು. ಇದಕ್ಕೆ ಎರಡು ಕಾರಣಗಳು.

೧) ಪಾಂಡವರ ಉತ್ತಮ ಗುಣಗಳ ಆಕರ್ಷಣೆ (ಸಜ್ಜನರ ಸಂಗ).

೨) ಶ್ರೀಕೃಷ್ಣನ ಪಾದಗಳ ಸಾನ್ನಿಧ್ಯ. (ಹರಿದರ್ಶನ ಮತ್ತು ವಂದನಕ್ಕಾಗಿ) ಅಂತು ಇಂದ್ರಪ್ರಸ್ಥ ಪ್ರದೇಶ ಜನರಿಂದ ತುಂಬಿತು.

**ಪ್ರಸ್ಥಾಪ್ಯ ದೂರ ಮನುಜಸ್ಯ ಸುತಾನ್ಸ ರಾಜಾ**
**ಚಕ್ರೇಽಭಿಷೇಕ ಮಪಿ ತತ್ರಸುಯೋಧನಸ್ಯ**
**ದುಃಶಾಸನಂ ಚ ಯುವರಾಜ ಮಸೌ ವಿಧಾಯಮೇನೇ**
**ಕೃತಾರ್ಥ ಮಿವಚ ಸ್ವಮಶಾಂತಕಾಮಃ** ||೨೨೨||

ಆ ರಾಜನಾದ ಧೃತರಾಷ್ಟ್ರನು ತಮ್ಮನ ಮಕ್ಕಳನ್ನು ದೂರ ಕಳುಹಿಸಿ, ತನ್ನ ಮಗನಾದ ದುರ್ಯೋಧನನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಜೊತೆಯಲ್ಲಿ ದುಶ್ಶಾಸನನಿಗೆ ಯುವರಾಜ ಪಟ್ಟವನ್ನು ಕಟ್ಟಿ, ಸಂತೃಪ್ತ ಮನಸ್ಸಿಲ್ಲದ, ವಿಷಯಾಭಿಯುಳ್ಳ ಆ ರಾಜನು ತನ್ನನ್ನು ತಾನೇ ಕೃತಕೃತ್ಯನೆಂದು ತಿಳಿದುಕೊಂಡನು.

ಪಾರ್ಥಾಶ್ಚ ತೇ ಮುಮುದುರತ್ರ ವಸಿಷ್ಠ ವೃಷಿವರ್ಯ
ಉದಿತಾ ಸಖಿಲ ತತ್ವವಿನಿರ್ಣಯಾಂಸ್ತು
ಶೃಣ್ವಂತ ಏವ ವಹ ಸದಾ ಪೃಥಿವೀಂಚ
ಧರ್ಮಾದ್ಭುಂಜಂತ ಆಶ್ರಿತ ರಮಾಪತಿ ಪಾದಯುಗ್ಮಾಃ ॥೨೨೩॥

ಇತ್ತ ಪಾಂಡವರು ಇಂದ್ರಪ್ರಸ್ಥದಲ್ಲಿ, ಶ್ರೀಕೃಷ್ಣ ಮತ್ತು ವ್ಯಾಸರು ಅವರ ಎಲ್ಲ ತತ್ವಗಳ ವಿಶೇಷ ನಿರ್ಣಯಗಳನ್ನು ಸದಾ ಕೇಳುತ್ತ, ಅವರ ಮಾರ್ಗದರ್ಶನದಲ್ಲಿ ರಾಜ್ಯವನ್ನು ಧರ್ಮದಿಂದ ಪಾಲಿಸುತ್ತಿದ್ದರು. ಲಕ್ಷ್ಮೀಪತಿಯ ಚರಣಾರವಿಂದಗಳಲ್ಲಿ ಭಕ್ತಿಯುಳ್ಳವರಾಗಿ ಅವರ ಆಶ್ರಯದಲ್ಲಿ ಆನಂದದಿಂದ ಇದ್ದರು.

ಇತಿ ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯೇ ಪಾಂಡವರಾಜ್ಯ ಲಾಭೋ ನಾಮ ಏಕೋನ ವಿಂಶೋಧ್ಯಾಯಃ ॥

ಇಲ್ಲಿಗೆ ಶ್ರೀಮದ ಆನಂದತೀರ್ಥ ಭಗವತ್ಪಾದರಿಂದ ರಚಿತವಾದ ಶ್ರೀಮನ್ಮಾಹಾಭಾರತ ತಾತ್ಪರ್ಯ ನಿರ್ಣಯದಲ್ಲಿ **'ಪಾಂಡವರಿಗೆ ರಾಜ್ಯ ಲಾಭ'** ಎಂಬ ಹತ್ತೊಂಭತ್ತನೆಯ ಅಧ್ಯಾಯದ ಕನ್ನಡಾನುವಾದ ಮುಗಿದುದು ಶ್ರೀಕೃಷ್ಣಾರ್ಪಣಮಸ್ತು. ಶ್ರೀಕೃಷ್ಣನು ಇದನ್ನು ಸ್ವೀಕರಿಸಿ ಪ್ರೀತನಾಗಲಿ.

# ಅಧ್ಯಾಯದ ಚಿಂತನೆ

ಪ್ರಾರಂಭದಲ್ಲಿ ಎರಡು ರಾಜನೀತಿಗಳನ್ನು ವಿವರಿಸಿದ್ದಾರೆ.

೧) ಕಲಿಂಗ ಅಥವಾ ಕಣಿಕ ನೀತಿ ಇದು ಕಪಟ, ಮೋಸ್ಯ, ಸ್ವಾರ್ಥ ಏನೆಲ್ಲ ದುರ್ಗುಣ, ದುರ್ನೀತಿಗಳಿಂದ ಕೂಡಿದ್ದು ಇದರ ಪ್ರೇರಕನು ಶಕುನಿ. ಪೋಷಕನು ದುರ್ಯೋಧನ. ಅದು ಇಂದಿಗೂ ಬದುಕಿ ಉಳಿದಿದೆ. ಭಾರತ ಮೊದಲ್ಗೊಂಡು ಅನೇಕ ದೇಶದ ರಾಜಕಾರಣಿಗಳು ಅದನ್ನು ಅಳವಡಿಸಿಕೊಂಡಿದ್ದಾರೆ. ಅದು ದೇಶಕ್ಕೆ ಹಿತಕಾರಿಯಲ್ಲ. ಮಹಾಭಾರತಧ ಯುದ್ಧವೇ ಸಾಕ್ಷಿ.

೨) ವಿದುರ ನೀತಿ. ಶ್ರೇಷ್ಠ ನೀತಿ. ಧರ್ಮ, ನೀತಿ, ನ್ಯಾಯ, ಪ್ರೇಮ ಇತ್ಯಾದಿಗಳಿಂದ ಕೂಡಿದ್ದು. ವಿದುರನು ಪ್ರೇರಕ, ಪಾಂಡವರು ಪೋಷಕರು ಶ್ರೀಕೃಷ್ಣನು ರಕ್ಷಕನು.

ದುರ್ಯೋಧನನು ಕಳಿಂಗ ನೀತಿಯನ್ನು ಹೆಜ್ಜೆ ಹೆಜ್ಜೆಗೆ ಬಳಸಿ, ಧೃತರಾಷ್ಟ್ರನ ಮನಸ್ಸನ್ನು ಕಲುಷಿತಗೊಳಿಸಿದ್ದಾನೆ. ಆಗಾಗ ಶಕುನಿ ಬೆಂಕಿಯಲ್ಲಿ ತುಪ್ಪವನ್ನು ಸುರಿದಿದ್ದಾನೆ. ಪಾಂಡವರ ನಾಶಕ್ಕಾಗಿ ಪ್ರಯತ್ನ ನಡೆದಿದೆ. ಪಾಂಡವರನ್ನು ವಾರಣಾವತಕ್ಕೆ ಕಳಿಸಲು ಸಿದ್ಧತೆ ನಡೆದಿದೆ.

ಧೃತರಾಷ್ಟ್ರನ ಮಾತಿಗೆ ಧರ್ಮರಾಜನು ಒಪ್ಪಿದ್ದಾನೆ. ಭೀಮನು ವಿರೋಧಿಸಿ ನಿಜ ಸ್ಥಿತಿಯನ್ನು ತಿಳಿಸಿದ್ದಾನೆ. ಕೊನೆಗೆ ಅಣ್ಣನ ಆಜ್ಞೆಗೆ ಕಟ್ಟುಬಿದ್ದು ಒಪ್ಪಿದ್ದಾನೆ.

ಪಾಂಡವರನ್ನು ಕೊಲ್ಲಲು ದುರ್ಯೋಧನನು ದಾರಿಯಲ್ಲಿ ಅರಗಿನ ಮನೆ ನಿರ್ಮಿಸಿದ್ದಾನೆ. ಇದನ್ನರಿತ ವಿದುರನು, ಅದರಿಂದ ಪಾರಾಗುವ ಉಪಾಯವನ್ನು ಪಾಂಡವರಿಗೆ ಸೂಚಿಸಿದ್ದಾನೆ. ದಾರಿಯಲ್ಲಿ ಅವರಿಗೆ ಅನುಕೂಲವಾಗುವಂತೆ ಎಲ್ಲ ಸಾಧನಗಳನ್ನೂ ಮಾಡಿದ್ದಾನೆ.

ಆ ಅರಗಿನ ಮನೆ ವಿರೋಚನ, ಆತನ ಅಕ್ಕ, ಆಕೆಯ ಮಕ್ಕಳನ್ನೇ ಬಲಿ ತೆಗೆದು ಕೊಂಡಿತು. ನಿರಪರಾಧಿಗಳನ್ನು ಕೊಲ್ಲಲು ಪ್ರಯತ್ನಿಸಿದರೆ, ದೇವರು ಅವರನ್ನೇ ಕೊಂದನು.

ಪಾಂಡವರು ಸುರಕ್ಷಿತವಾಗಿ ಪಾರಾಗಿದ್ದಾರೆ. ಹಿಡಂಬನ ವನಕ್ಕೆ ಬಂದಿದ್ದಾರೆ. ಪಾಂಡವರು ಆಯಾಸದಿಂದ ನಿದ್ರಿಸುತ್ತಿದ್ದಾರೆ. ಭೀಮನು ಎಚ್ಚರಿಕೆಯಿಂದಿದ್ದಾನೆ. ಹಿಡಂಬಿಯು ಬಂದು ಭೀಮನನ್ನು ಬಯಸಿ ಮದುವೆ ಮಾಡಿಕೊಳ್ಳಲು ಕೇಳುತ್ತಾಳೆ. ಭೀಮನ ನಿರಾಕರಣೆ ಹಿಡಂಬನೊಡನೆ ಯುದ್ಧವಾಗುತ್ತದೆ. ಹಿಡಂಬ ಹತನಾಗುತ್ತಾನೆ. ಪಾಂಡವರು ಎಚ್ಚೆತ್ತು, ಪರಿಸ್ಥಿತಿಯನ್ನರಿತು ಭೀಮನಿಗೆ ಮದುವೆಯಾಗಲು ಹೇಳುತ್ತಾರೆ. ಭೀಮನು ನಿರಾಕರಿಸುತ್ತಾನೆ. (ಅಜ್ಞಾನದಿಂದಲ್ಲ) ಮುಂದೆ ಕಥೆ ಮುಂದುವರಿಯಬೇಕಾಗಿದೆ. ವ್ಯಾಸರು ಬಂದು ಹಿಡಂಬಿಯ ಹಿನ್ನೆಲೆಯನ್ನು ಹೇಳಿ ಮದುವೆಯಾಗಲು ಹೇಳುತ್ತಾರೆ. ಒಂದು ಮಗುವು ಹುಟ್ಟುವ ಪರ್ಯಂತ ಅಲ್ಲಿದ್ದು ನಂತರ ಮುಂದೆ ಸಾಗಲು ಒಪ್ಪಿ

ಭೀಮನು ಮದುವೆಯಾಗುತ್ತಾನೆ. ಹಿಡಂಬಿಯ ಮಗನೇ ಪಾರ್ಥನ ರಕ್ಷಣೆಗೆ ಬಲಿಯಾಗುತ್ತಾನೆ. ಅಂತರ್ಜಾತಿ ವಿವಾಹವಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಅಲ್ಲಿಂದ ಅವರನ್ನು ವ್ಯಾಸರು ಏಕಚಕ್ರ ನಗರಕ್ಕೆ ಕರೆತಂದು. ವಿಪ್ರರ ವೇಷದಲ್ಲಿದ್ದು ವಿದ್ಯಾ ಕಲಿಯಲು ಹೇಳಿ ಒಬ್ಬರ ಮನೆಯಲ್ಲಿಟ್ಟು ವ್ಯವಸ್ಥೆ ಮಾಡಿ ಹೋಗುತ್ತಾರೆ. ಭಿಕ್ಷಾಟನೆಯಿಂದ ಅವರ ಉಪಜೀವನ ಭೀಮನು ಎಂದೂ ಯಾಚಿಸಿದವನಲ್ಲ. ಕೇವಲ ಹುಂಕಾರದಿಂದಲೇ ಗಳಿಕೆ ಧರ್ಮರಾಜನು ಗಾಬರಿಯಾಗಿ ಭೀಮನನ್ನು ಮನೆಯಲ್ಲಿಯೇ ಇರಲು ಹೇಳಿ ಉಳಿದವರು ಆಹಾರ ತರುತ್ತಾರೆ.

ಪಕ್ಕದ ವಿಪ್ರರರ ಮನೆಯಲ್ಲಿ ರೋದನ. ಭೀಮನು ತಾನು ಹೋಗದೆ ತಾಯಿಯನ್ನು ಕಳಿಸುತ್ತಾನೆ. ಬಕಾಸುರ ವೃತ್ತಾಂತ ತಿಳಿಯುತ್ತದೆ. ಕುಂತಿಯು ಭೀಮನನ್ನು ಬಕನಲ್ಲಿಗೆ ಕಳಿಸಲು ಒಪ್ಪಿಯೇ ಬಂದುಬಿಡುತ್ತಾಳೆ. ಧರ್ಮನು ಗಾಬರಿಗೊಂಡಾಗ ಕುಂತಿ ಭೀಮನ ಬಾಲ್ಯ ವಿವರಿಸಿ, ಧರ್ಮನ ಭಯ ಬಿಡಿಸುತ್ತಾಳೆ.

ಮಾರನೆಯ ದಿನ ಭೀಮನು ಆಹಾರ ತೆಗೆದುಕೊಂಡು ಬಕನ ಹತ್ತಿರ ಹೋಗುತ್ತಾನೆ. ದಾರಿಯಲ್ಲಿ ತಾನೇ ಎಲ್ಲವನ್ನು ಭುಂಜಿಸಿ, ಬಕನೊಡನೆ ಹೋರಾಡಿ, ಅವನನ್ನು ಕೊಂದು, ಶರೀರವನ್ನು ತಂದು ನಗರದ ಬಾಗಿಲಿಗೆ ನಿಲ್ಲಿಸಿ, ಮನೆಗೆ ಬಂದು ವಿಶ್ರಾಂತಿ ಪಡೆಯುತ್ತಾನೆ.

ಭೀಮನಿಂದಲೇ ಈ ಕಾರ್ಯ ಆಯಿತೆಂದು ಕೇಳಿ ಎಲ್ಲರೂ ಹರ್ಷಗೊಳ್ಳುತ್ತಾರೆ. ಭೀಮನಿಗೆ ಕರ ಕೊಡಲು ಬರುತ್ತಾರೆ. ಭೀಮನು ಅದಕ್ಕೆ ಒಪ್ಪದೆ ನಿಮ್ಮ ಊರಲ್ಲಿರುವ ನರಸಿಂಹದೇವರ ಪೂಜೆ ಮತ್ತು ನೈವೇದ್ಯದ ವ್ಯವಸ್ಥೆ ಮಾಡಿರಿ ಎಂದು ಊರವರಿಗೆ ಹೇಳುತ್ತಾನೆ. ಜನರು ಅದಕ್ಕೂ ವ್ಯವಸ್ಥೆ ಮಾಡಿದರು.

ವೇದವ್ಯಾಸರು ಬಂದು ಇಲ್ಲಿ ಸಾಕು, ಪಾಂಚಾಲದಲ್ಲಿ ಪಾಂಚಾಲಿಯ ಸ್ವಯಂವರ ನಡೆದಿದೆ. ನೀವು ಅಲ್ಲಿಗೆ ಇದೇ ವೇಷದಿಂದಲೇ ಹೋಗಿರಿ ಎಂದು ಹೇಳುತ್ತಾನೆ. ದ್ರೌಪದಿಯ ಹುಟ್ಟಿನ ಹಿನ್ನೆಲೆಯನ್ನು ವಿವರಿಸಿದರು. ಪಾಂಡವರು ಉಳಿದ ವಿಪ್ರರಂತೆ ಅವರ ಜೊತೆಯಲ್ಲಿ ನಡೆದರು.

ದ್ರುಪದ ರಾಜನು, ಯಜ್ಞದಲ್ಲಿ ಮತ್ತು ಗುರುಗಳ ಮಾತಿನಲ್ಲಿ ವಿಶ್ವಾಸವಿಟ್ಟು ಪಾಂಡವರು ಸತ್ತಿಲ್ಲ ಬದುಕಿದ್ದಾರೆ ಎಂದು ನಿಶ್ಚಯಿಸಿದನು. ರುದ್ರದೇವರನ್ನು ಕುರಿತು ತಪಸ್ಸು ಮಾಡಿ, ಅರ್ಜುನನಿಂದ ಮಾತ್ರ ಎತ್ತಲು ಮತ್ಸ್ಯವನ್ನು ಭೇದಿಸಲು ವರ ಪಡೆದು, ರುದ್ರದೇವರಿಂದ ಬಿಲ್ಲು ಸಂಪಾದಿಸಿದನು.

ಶ್ರೀಕೃಷ್ಣನು ಧೃತರಾಷ್ಟ್ರನ ಹತ್ತಿರ ಹೋಗಿ ಸಾಂತ್ವನಗೊಳಿಸಿ ಪಾಂಡವರು ಸತ್ತಿದ್ದಾರೆ ಎನ್ನುವಂತೆ ನಟಿಸಿದನು. ದ್ವಾರಕೆಗೆ ಬರುವುದರೊಳಗಾಗಿ ದ್ರುಪದ ರಾಜನಿಂದ ಸ್ವಂಯವರದ ಆಮಂತ್ರಣ ಬಂದಿತ್ತು. ಕೇವಲ ಪ್ರೇಕ್ಷಕರಾಗುವಂತೆ ಹೇಳಿ, ಎಲ್ಲ ಯಾದವರನ್ನು ಬಲರಾಮನ ಸಹಿತವಾಗಿ ಕರೆದುಕೊಂಡು ಶ್ರೀಕೃಷ್ಣನು ಪಾಂಚಾಲ ನಗರಕ್ಕೆ ಬಂದನು.

ದಾರಿಯಲ್ಲಿ ಬರುವಾಗ ಭೀಮರ ಆಕಾರ, ರೂಪ, ಇವುಗಳನ್ನು ಕಂಡು ಸ್ವಯಂವರದಲ್ಲಿ ಈತನೇ ದ್ರೌಪದಿಯನ್ನು ಪಡೆಯುತ್ತಾನೆ ಎಂದು ವಿಪ್ರರು ಭವಿಷ್ಯ ನುಡಿದರು. ಗಂಗಾನದಿಯನ್ನು ದಾಟುತ್ತಿರುವಾಗ ರಾತ್ರಿ ಸಮಯ. ಮುಂದೆ ಅರ್ಜುನ ನಡುವೆ ಇತರರು ಕುಂತಿ ಕೊನೆಯಲ್ಲಿ ಭೀಮ. ಅರ್ಜುನ ಕೈಯಲ್ಲಿ ಬೆಳಕಿನ ಕೊಳ್ಳಿ ಇದ್ದಿತು. ಅದನ್ನು ಕಂಡ ಗಂಧರ್ವನು ಇದು ಮಾನವರಿಗೆ ಸಂಚಾರದ ಸಮಯವಲ್ಲ. ನಿಮ್ಮನ್ನು ಕೊಲ್ಲುತ್ತೇನೆಂದು ಬೆದರಿಸಿದನು. ಆಗ ಅರ್ಜುನನು ಅಸ್ತ್ರ ವಿದ್ಯೆ ಬಲ್ಲೆವು. ನಿನ್ನಿಂದ ನಮಗೆ ಭಯವಿಲ್ಲ ಎಂದು ಹೇಳಿದನು. ಇಬ್ಬರಲ್ಲಿ ಯುದ್ಧವಾಯಿತು. ಗಂಧರ್ವನು ಸೋತನು. ಅರ್ಜುನನೊಡನೆ ಸ್ನೇಹವಾಯಿತು. ಅರ್ಜುನನು ಗಂಧರ್ವನಿಗೆ ಅಗ್ನ್ಯಾಸ್ತ್ರ ಹೇಳಿಕೊಟ್ಟನು. ಪ್ರತಿಫಲ ಪಡೆಯಲಿಲ್ಲ. ಸಮಯ ಬಂದಾಗ ಇರಲಿ ಎಂದು ಹೇಳಿದನು. ಅಲ್ಲಿಂದ ಧೌಮ್ಯ ಋಷಿಗಳ ಆಶ್ರಮಕ್ಕೆ ಬಂದು ಅವರನ್ನೇ ಪುರೋಹಿತರನ್ನಾಗಿ ಮಾಡಿಕೊಂಡು ಮುಂದೆ ನಡೆದರು. ರಾಜಸಭೆಗೆ ಬಂದರು.

ಧೃಷ್ಟದ್ಯುಮ್ನನು ತಂಗಿಗೆ ಎಲ್ಲ ರಾಜರ ಪರಿಚಯ ಮಾಡಿಸಿದನು. ಅನೇಕ ರಾಜರು ಬಂದು ಪ್ರಯತ್ನಿಸಿದರು. ಕೆಲವರಿಗೆ ಉದ್ದಿನ ಕಾಳಿನಷ್ಟು ಮತ್ತೆ ಕೆಲವರಿಗೆ ಹೆಸರು ಕಾಳು. ಇನ್ನೂ ಕೆಲವರಿಗೆ ಕೂದಲಿನಷ್ಟು ಅಂತರ ಉಳಿಯಿತು. ಬಿಲ್ಲು ಮೈಮೇಲೆ ಹಾಕಿಕೊಂಡು ಮೂರ್ಛೆಹೋದರು. ಕೆಲವರು ಪೆಟ್ಟು ತಿಂದು ಓಡಿಹೋದರು. ಯಾವ ರಾಜನಿಂದಲೂ ಮತ್ಸ್ಯಭೇದ ಆಗಲಿಲ್ಲ.

ವಿಪ್ರರ ಗುಂಪಿನಿಂದ ಅರ್ಜುನನು ಎದ್ದನು. ಕೆಲವು ವಿಪ್ರರು ತಡೆದರೆ ಕೆಲವರು ಪ್ರೋತ್ಸಾಹಿಸುತ್ತಿದ್ದರು. ಕೃಷ್ಣನ ಅನುಮತಿ ಪಡೆದು ಮನದಲ್ಲಿ ನಮಿಸಿ ಬಿಲ್ಲಿನ ಹತ್ತಿರ ಬಂದನು. ಲೀಲಾಜಾಲವಾಗಿ ಮತ್ಸ್ಯಭೇದವಾಯಿತು. ದ್ರೌಪದಿ ಮಾಲೆ ಹಾಕಿದಳು.

ಉಳಿದ ರಾಜರು ಕ್ರೋಧದಿಂದ ಅರ್ಜುನನೊಂದಿಗೆ ಯುದ್ಧಕ್ಕೆ ಬಂದರು. ಭೀಮನು ಒಂದು ವೃಕ್ಷವನ್ನೇ ಕಿತ್ತು ತಂದಾಗ ಎಲ್ಲರೂ ಓಡಿಹೋದರು. ಕೃಷ್ಣನು ಬಲರಾಮನಿಗೆ ಪಾಂಡವರ ಪರಿಚಯ ಮಾಡಿಸಿಕೊಟ್ಟನು. ಬಲರಾಮ ಹರ್ಷಿತನಾದನು.

ಕರ್ಣ—ಅರ್ಜುನರಿಗೆ ಯುದ್ಧವಾಯಿತು. ಅರ್ಜುನನ ಕೈ ಮೇಲಾಯಿತು. ಆಗ ಕರ್ಣನು, ವಿಪ್ರವೇಷದಲ್ಲಿದ್ದ ವೀರನಿಗೆ, ನೀನು ಅರ್ಜುನನೋ, ಇಂದ್ರನೋ ಅಥವಾ ಮೂರ್ತಿಮತ್ತಾದ ವಿಪ್ರರ ತಪಸ್ಸೋ ಎಂದು ಕೇಳಿದನು. ಕೊನೆಗೆ ಬ್ರಾಹ್ಮಣನೊಡನೆ ಯುದ್ಧ ಬೇಡವೆಂದು ಹಿಂದಿರುಗಿದನು.

ಪಾಂಡವರು ತಾವಿದ್ದಲ್ಲಿಗೆ ಬಂದರು ಬರುವಾಗ "ಇಂದು ಅಪರೂಪದ ಭಿಕ್ಷೆ ಬಂದಿದೆ" ಎಂದು ಹೇಳಿದರು. ಒಳಗಿದ್ದ ಕುಂತಿ ಆಹಾರವೆಂದು ತಿಳಿದು ಐದು ಜನರು ಹಂಚಿಕೊಳ್ಳಿರಿ' ಎಂದು ಹೇಳಿದಳು. ಹೊರಗೆ ಬಂದು ನೋಡುತ್ತಾಳೆ. ದ್ರೌಪದಿ ನಿಂತಿದ್ದಾಳೆ. ಒಬ್ಬಳನ್ನು ಐದು ಜನ ಮದುವೆಯಾಗುವುದು ಹೇಗೆ? ಎಲ್ಲರಿಗೂ ಚಿಂತೆಯಾಯಿತು.

ದ್ರುಪದನಿಗೆ ಯಾರೆಂಬುದು ತಿಳಿಯದು. ಬ್ರಾಹ್ಮಣರ ವೇಷ ಕ್ಷತ್ರಿಯರ ಸಾಹಸ. ಗುಟ್ಟನ್ನರಿಯಲು ಮಗನನ್ನೇ ಕಳಿಸಿದನು. ಅವರ ನಡೆನುಡಿಗಳಿಂದ 'ಇವರು ಕ್ಷತ್ರಿಯರು' ಎಂದು ಧೃಷ್ಟದ್ಯುಮ್ನ ನಿಶ್ಚಯಿಸಿ ತಂದೆಗೆ ಬಂದು ಹೇಳಿದನು.

ದ್ರುಪದರಾಜನು ಮಾರನೇ ದಿನ ಪಾಂಡವರನ್ನು ಮನೆಗೆ ಸ್ವಾಗತಿಸಿದನು. ಅವರಿಗಾಗಿ ನಾಲ್ಕು ಮನೆಗಳನ್ನು ಸಿದ್ಧಪಡಿಸಿ, ನಾಲ್ಕು ವರ್ಣಗಳಿಗೆ ತಕ್ಕಂತೆ ಆಕರ್ಷಕ ವಸ್ತುಗಳನ್ನಿಡಿಸಿದನು. ಪಾಂಡವರು ಕ್ಷತ್ರಿಯರಿಗೆ ಯೋಗ್ಯವಾದ ಮನೆಯನ್ನು ಆಯ್ದುಕೊಂಡರು. ದ್ರುಪದನಿಗೆ ಇನ್ನೂ ಸಂತೋಷವಾಯಿತು. ಪಾಂಡವರ ಹತ್ತಿರ ಬಂದು ನೀವು ಆರು ಎಂದು ಕೇಳಿದನು. ಧರ್ಮನು ಕೂಡಲೇ ಹೇಳಲಿಲ್ಲ. ವಿನೋದ ಮಾಡಿದನು. ಕೊನೆಗೆ ಕುಂತಿ ಎಲ್ಲವನ್ನು ವಿವರಿಸಿದಾಗ, ನನ್ನ ಪ್ರಯತ್ನ ಕೈಗೂಡಿತು. ಅರ್ಜುನನಿಗಾಗಿಯೇ ನಾನು ಇಷ್ಟೆಲ್ಲ ಮಾಡಿದ್ದೆ ಎಂದು ಹೇಳಿದನು. ಸಂತೋಷಗೊಂಡನು. ಐದು ಮಂದಿ ಶಾಸ್ತ್ರ ಸಮ್ಮತವೂ ಅಲ್ಲ. ಧರ್ಮದ ರೀತಿಯೂ ಅಲ್ಲ ಎಂದು ಹೇಳಿ ನಿರಾಕರಿಸಿದನು. ನಮ್ಮ ಮನಸ್ಸು ಧರ್ಮ ಬಿಟ್ಟು ಚಲಿಸಲಾರದು. ಈಗ ನಮ್ಮ ಮನಕ್ಕೆ ಬಂದಿದೆ. ಇದು ದೈವ ಸಮ್ಮತವೇ ಎಂದನು" ಧರ್ಮನು ಹೇಳಿದಾಗಲು, ದ್ರುಪದ ಒಪ್ಪಲಿಲ್ಲ. ಕೊನೆಗೆ ವ್ಯಾಸರು ಬಂದರು ಅವರು ಹೇಳಿದರೂ ದ್ರುಪದನು ಸಮ್ಮತಿಸಲಿಲ್ಲ. ಕೊನೆಗೆ ವ್ಯಾಸರು ದ್ರುಪದನಿಗೆ ದಿವ್ಯದೃಷ್ಟಿಯನ್ನಿತ್ತು, ಪಾಂಡವರ ಮೂಲಸ್ವರೂಪ, ದ್ರೌಪದಿಯ ದೇಹದಲ್ಲಿದ್ದು ಅವರವರ ಪತ್ನಿಯರನ್ನೂ ತೋರಿಸಿದಾಗ ಅದನ್ನು ಪ್ರತ್ಯಕ್ಷ ಕಂಡ ನಂತರ ದ್ರುಪದನು ಒಪ್ಪಿ ವ್ಯಾಸರಿಗೆ ನಮಸ್ಕರಿಸಿದನು. ತನ್ನ ತಪ್ಪಿಗಾಗಿ ಕ್ಷಮೆಯನ್ನು ಯಾಚಿಸಿದನು. ವಿವಾಹ ನೆರವೇರಿತು. ಎಲ್ಲರೂ ಆನಂದಿಸಿದರು. ಬಂಧು ಬಳಗದವರು ಅನೇಕ ಉಡುಗೊರೆಗಳನ್ನಿತ್ತರು. ಶ್ರೀಕೃಷ್ಣ ಮತ್ತು ದ್ರುಪದರಾಜ ವಿಶೇಷ ಆಭರಣ, ರಥ, ಗಜ, ತುರಗ, ದಾಸ, ದಾಸಿಯರನ್ನು ಕೊಟ್ಟನು. ಸ್ವಯಂವರದಲ್ಲಿ ಸೋತ ನಂತರ ಕೌರವರು ಪುನಃ ಯುದ್ಧಕ್ಕೆ ಬಂದರು. ದ್ರುಪದನಿಗೆ ಶಕ್ಯವಾಗಲಿಲ್ಲ. ಆತನ ಇಬ್ಬರು ಮಕ್ಕಳು ಯುದ್ಧದಲ್ಲಿ ಸತ್ತರು. ಕೊನೆಗೆ ಭೀಮಾರ್ಜುನರು ಬಂದು ಎದುರಿಸಿದಾಗ ಎಲ್ಲರೂ ಓಡಿಹೋದರು. ಪಾಂಡವರು ಒಂದು ವರ್ಷ ಪಾಂಚಾಲ ದೇಶದಲ್ಲಿ ಇದ್ದರು.

ಒಂದು ದಿನ ವಿದುರನು, ಧೃತರಾಷ್ಟ್ರನನ್ನು ಕುರಿತು, ನಿನ್ನ ಮಕ್ಕಳಿಗೆ 'ಅಭಿವೃದ್ಧಿಯಾಗಿದೆ' ಎಂದಾಗ ಅವನು ತನ್ನ ಮಗನೇ ಸ್ವಯಂವರ ಗೆದ್ದನೆಂದು ತಿಳಿದು ಶ್ರೇಷ್ಠ ಉಡುಗೊರೆ ಕೊಟ್ಟನು. ಇದನ್ನರಿತ ವಿದುರನು ನಂತರ 'ಪಾಂಡವರು' ಎಂದನು. ಆದರೂ ಧೃತರಾಷ್ಟ್ರನು ತನ್ನ ಮನಸ್ಸಿನ ನಿಜಸಂಗತಿಯನ್ನು ಮರೆಮಾಚಿ ಕೃತ್ರಿಮ ಸಂತಸ ವ್ಯಕ್ತಪಡಿಸಿದನು. ವಿದುರನು ಧೃತರಾಷ್ಟ್ರನಿಗೆ ಬುದ್ಧಿವಾದವನ್ನು ಹೇಳಿದನು. ಈಗಲಾದರೂ ಅವರನ್ನು ಕರೆಸು, ಅರ್ಧರಾಜ್ಯವನ್ನು ಕೊಡು ಎಂದು ಹೇಳಿದಾಗ, ಧೃತರಾಷ್ಟ್ರನು ವಿದುರನನ್ನೇ ಪಾಂಡವರನ್ನು ಕರೆತರಲು ಕಳಿಸಿದನು. ಅದೇ ಸಮಯಕ್ಕೆ ಶ್ರೀಕೃಷ್ಣ ಮತ್ತು ವ್ಯಾಸರು ಧೃತರಾಷ್ಟ್ರ, ಗಾಂಧಾರಿ, ಭೀಷ್ಮ, ಆದಿಯಾಗಿ ಪುರಜನರೆಲ್ಲ ಸ್ವಾಗತಿಸಿದರು. ದ್ರೌಪದಿಯ ಸೌಂದರ್ಯವನ್ನು ಕೇಳಿದ ಗಾಂಧಾರಿ, "ನನ್ನ ಮಗ ದುಷ್ಟನು, ದ್ರೌಪದಿ ಗಾಗಿ, ಭೀಮನಿಂದ ಕಲಹ ಉಂಟಾಗಬಾರದು ಕಾರಣ ನೀನು ನಿನ್ನ ಮನೆಯಲ್ಲಿ

ಮಕ್ಕಳೊಡನೆ ವಾಸಿಸು" ಎಂದು ಹೇಳಿದಾಗ ಕುಂತಿ ಅದಕ್ಕೊಪ್ಪಿ, ಪಾಂಡುರಾಜನ ಮನೆಯಲ್ಲಿದ್ದರು. ಪಾಂಡವರು ತಮ್ಮ ಮನೆಯಲ್ಲಿ ಐದು ವರಿಸಂವತ್ಸರಗಳನ್ನು ಕಳೆದರು. ದ್ರೌಪದಿ ಒಂದೇ ದೇಹವಾಗಿ ಕಂಡರೂ ನಾಲ್ಕು ರೂಪಗಳಿಂದ ಬೇರೆ ಬೇರೆಯಾಗಿಯೂ ಅವರಲ್ಲಿ ರಮಿಸುತ್ತಿದ್ದಳು.

ಈ ಸಂದರ್ಭದಲ್ಲಿ ಶ್ರೀಮಾದಾಚಾರ್ಯ ದ್ರೌಪದಿಯ ವಿಷಯವನ್ನು ಕುರಿತು ಭೋಗಗಟ್ಟವನ್ನು ವಿವರಿಸಿದ್ದಾರೆ.

ದ್ರೌಪದಿಯ ವ್ಯಕ್ತಿತ್ವವನ್ನು ಆಚಾರ್ಯರು ಮೂರು ಘಟ್ಟಗಳಲ್ಲಿ ವರ್ಣಿಸಿದ್ದಾರೆ. ಮೊದಲ ಘಟ್ಟದಲ್ಲಿ ಐದು ಜನ ಸ್ತ್ರೀಯರು ಮಾಡಿದ ಅಪರಾಧ. ಅದಕ್ಕೆ ಫಲ. 'ದೊಡ್ಡವರೊಡನೆ ಸರಸ ಒಳಿತಲ್ಲ' ಎಂಬುದನ್ನು ತೋರಿದ್ದಾರೆ. ನಂತರ ಆ ಎಲ್ಲ ಸ್ತ್ರೀಯರು ಕೂಡಿ ಭಾರತೀದೇವಿಯರಿಗೆ ಮೊರೆಹೊಕ್ಕದ್ದು. ಭಾರತಿದೇವಿಯರು ಕರುಣಿಸಿ, ತಮ್ಮ ಅವತಾರದ ಕಾಲಕ್ಕೆ ಅವರಿಗೆ ತಮ್ಮ ದೇಹದಲ್ಲಿ ಅವಕಾಶ ಕಲ್ಪಿಸಿದ್ದು ಇತ್ಯಾದಿಗಳನ್ನು ವಿವರಿಸಿ, ದ್ರೌಪದಿ ಜನಿಸಿದಾಗ ಒಂದು ಜೀವವಿರಲಿಲ್ಲ. ಅದರಲ್ಲಿ ಐದು ಜನರು ಅಡಕವಾಗಿದ್ದರು ಎಂಬುದನ್ನು ಸ್ಪಷ್ಟೀಕರಿಸಿದ್ದಾರೆ.

ಪಾಂಡವರು, ಪರಮಾತ್ಮನ ಕಾರ್ಯದಲ್ಲಿ ಸೇವೆ ಸಲ್ಲಿಸಲು ಅಂಗಭೂತರಾಗಿ ಅವತರಿಸಿದಾಗ, ದ್ರೌಪದಿ ದೇವಿಯರು ಅಗ್ನಿಕುಂಡದಲ್ಲಿ ಪ್ರಕಟಗೊಂಡಿದ್ದಾಳೆ. ಒಂದು ಜೀವದಲ್ಲಿ ಐದು ದೇಹಗಳು ಹೇಗೆ? ಎಂಬುದನ್ನು ಕುರಿತು ಲೇಖಕರು ವೈಜ್ಞಾನಿಕ ಆಧಾರದಿಂದ ವಿವರಿಸಲು ಪ್ರಯತ್ನಿದ್ದಾರೆ.

ಎರಡನೇ ಘಟ್ಟ ವಿವಾಹ : ಸ್ವಯಂವರದಲ್ಲಿ ಅರ್ಜುನನು ಒಬ್ಬನೇ ಗೆದ್ದಿದ್ದಾನೆ. ಪಾಂಡವರು ತಾಯಿಯ ಮಾತಿಗೆ ಕಟ್ಟುಬಿದ್ದು (ತೋರಿಕೆಗೆ ದೈವಸಂಕಲ್ಪಕ್ಕನುಸಾರ ವಾಗಿಯೇ) ಐವರು ಮದುವೆ ಮಾಡಿಕೊಳ್ಳಲು ಸಿದ್ಧರಾಗಿದ್ದಾರೆ. ದ್ರುಪದನಿಗೆ ಸಮ್ಮತ ವಾಗಲಿಲ್ಲ. ಕೊನೆಗೆ ವ್ಯಾಸರು ಬಂದು ದಿವ್ಯದೃಷ್ಟಿಯನ್ನಿತ್ತು ಪ್ರತ್ಯಕ್ಷ ಕಂಡು ಒಪ್ಪಿದ್ದಾನೆ. ಪಾಂಡವರು ಒಪ್ಪಿ ಮದುವೆಯಾಯಿತು.

ಇಲ್ಲಿಯೂ ಒಂದು ದೇಹದಲ್ಲಿ ಐದು ಜೀವರು ಹೇಗೆ? ಎಂಬ ಪ್ರಶ್ನೆಗೆ ವ್ಯಾಸರ ಪರಿಹಾರ ಆಶ್ರಯಿಸಿ ಆಚಾರ್ಯರು ತಿಳಿಸಿಕೊಟ್ಟಿದ್ದಾರೆ. ಸಾಮಾನ್ಯ ಜನರ ತಿಳುವಳಿಕೆಗಾಗಿ ಲೇಖಕನು ಕೂಡ ವಿಜ್ಞಾನದ ಉದಾಹರಣೆ ಇತ್ತೇ ಸ್ಪಷ್ಟೀಕರಿಸಿದ್ದಾನೆ.

ಮೂರನೆಯದು ಭೋಗ ಘಟ್ಟ. ಇದು ಸ್ವಲ್ಪ ಕ್ಲಿಷ್ಟವಿಷಯ. ಕೂಡಲೇ ಒಪ್ಪುವುದು ಕಷ್ಟ. ಶ್ರೀಮನಾಚಾರ್ಯರು ಅನೇಕ ವಿವರಣೆಗಳನ್ನಿತ್ತು ವಿವರಿಸಿದ್ದಾರೆ. ಆದರೂ ಮಾನವರ ಮಂದ ಬುದ್ಧಿಗೆ ಇದು ಎಟುಕಲಾರದು ಎಂದು, ಅದು ದೇವತಾ ವಿಹಾರ, ಅವರ ರೀತಿ–ನೀತಿಗಳೇ ಬೇರೆ, ಅವುಗಳನ್ನು ಮಾನವನ ಮಾನದಂಡ ದಿಂದ ಅಳೆಯಲಾಗದು. ಹಿರಿಯರು, ಜ್ಞಾನಿಗಳು ಹೇಳಿದ್ದನ್ನು ಒಪ್ಪಬೇಕು. ಸಂಶಯ ಪಡಬಾರದು, ಪಟ್ಟರೆ ಅನರ್ಥ ಎಂದು ನಿರ್ಣಯಾತ್ಮಕ ಅಪ್ಪಣೆ ಕೊಡಿಸಿದ್ದಾರೆ. ಈ

ಸಂದರ್ಭದಲ್ಲೂ ಲೇಖಕನು ಯಥಾಮತಿ ವಿಜ್ಞಾನವನ್ನೇ ಆಶ್ರಯಿಸಿ ತೊಡಕನ್ನು ಬಿಡಿಸಲು ಪ್ರಯತ್ನಿಸಿದ್ದಾನೆ. ಅದರ ಒಪ್ಪಿಗೆ ಅಥವಾ ವಿಮರ್ಶೆ ಓದುಗರಿಗೆ ಬಿಟ್ಟದ್ದು.

ಮುಂದೆ ಶ್ರೀಮದಾಚಾರ್ಯರು ದುರ್ಯೋಧನನ ವಿವಾಹದ ಪ್ರಸಂಗ ವಿವರಿಸಿದ್ದಾರೆ.

ಪಾಂಡವರು ಇನ್ನು ಹಿಡಂಬ ವನದಲ್ಲಿರುವಾಗಲೇ ಕಾಶಿರಾಜನು ತನ್ನ ಮಗಳ ಸ್ವಯಂವರನ್ನು ಏರ್ಪಡಿಸಿದ್ದನು. ಅನೇಕ ರಾಜರು ನೆರೆದಿದ್ದರು. ದುರ್ಯೋಧನನು ಅಲ್ಲಿಗೆ ಹೋಗಿದ್ದನು. ಸ್ವಯಂವರದ ನಿಯಮಗಳನ್ನು ಪಾಲಿಸಲಿಲ್ಲ. ಬಲಾತ್ಕಾರದಿಂದ ಕನ್ಯೆಯನ್ನು ಅಪಹರಿಸಿದನು. ಅಲ್ಲಿ ನೆರೆದಿದ್ದ ರಾಜರಲ್ಲಿ ಜರಾಸಂಧನು ಬಲಿಷ್ಠನು ಮತ್ತು ಮೊದಲಿಗ ಆಗಿದ್ದನು. ದುರ್ಯೋಧನನ ಬಲಾತ್ಕಾರವನ್ನು ಕಂಡು ಸಹಿಸದೆ, ಜರಾಸಂಧನು ದುರ್ಯೋಧನನ ಮೇಲೆ ಯುದ್ಧಕ್ಕೆ ಬಂದನು. ಉಳಿದ ರಾಜರೂ ಅವನಿಗೆ ಸಹಾಯಕ ರಾದರು. ದುರ್ಯೋಧನನು ಸೋಲುವ ಪ್ರಸಂಗ ಬಂದಿತು. ಆಗ ಕರ್ಣನು ದುರ್ಯೋಧನನ ಹತ್ತಿರ ಬಂದು ನೀನು ಹಸ್ತಿನಾವತಿಗೆ ಹಿಂದಿರುಗು. ಭೀಷ್ಮ, ದ್ರೋಣರ ಭಯದಿಂದ ಈ ಜನರು ಅಲ್ಲಿ ಬಂದು ಯುದ್ಧ ಮಾಡಲಾರರು. ಜರಾಸಂಧನು ಅಲ್ಲಿಗೆ ಬರುವುದಿಲ್ಲ. ಭೀಷ್ಮರನ್ನು ಅವನು ವೀರರೆಂದೇ ತಿಳಿಯುವುದಿಲ್ಲ. ಜರಾಸಂಧನು ಶ್ರೇಷ್ಠ ಶಿವಭಕ್ತನಾದ ಕಾರಣ, ಅಶ್ವತ್ಥಾಮರು ರುದ್ರಾಂಶರೆಂದು ತಿಳಿದು ಅವರೊಡನೆ ಯುದ್ಧ ಮಾಡುವುದಿಲ್ಲ. ಇಲ್ಲಿ ನಾನೊಬ್ಬನೇ ಅವನನ್ನು ಸೋಲಿಸಬಲ್ಲೆ. ಒಂದುವೇಳೆ ನಾನು ಸೋತರೂ, ಚಿಂತೆಯಿಲ್ಲ. ನೀನು ಅಥವಾ ನಿಮ್ಮಲ್ಲಿ ಯಾರಾದರೂ ಸೋತರೆ ನಿಮ್ಮ ಕುಲಕ್ಕೆ ಅಪಕೀರ್ತಿ ಬರುತ್ತದೆ. ಅದು ಆಗಬಾರದು ಎಂದು ಹೇಳಿದನು. ದುರ್ಯೋಧನನು ಕರ್ಣನ ಮಾತಿಗೆ ಒಪ್ಪಿ ತನ್ನ ಊರಿಗೆ ಮರಳಿದನು.

ಕರ್ಣನು ಅಲ್ಲೇ ಉಳಿದನು. ಜರಾಸಂಧನು ಕರ್ಣನ ಬಲವನ್ನು ಲೆಕ್ಕಿಸಿರಲಿಲ್ಲ. ಕಾರಣ ಒಬ್ಬೊಬ್ಬ ರಾಜನನ್ನು ಯುದ್ಧಕ್ಕೆ ಕಳಿಸಿದನು. ಅಲ್ಲಿ ಸ್ಪರ್ಧೆಯಿಲ್ಲದ ಕಾರಣ, ಪರಶುರಾಮರ ವರದಂತೆ ಆತನಿಗೆ ಗೆಲುವಾಯಿತು. ಮುಂದೆ ಜರಾಸಂಧ ಮತ್ತು ಕರ್ಣರ ಮಧ್ಯೆ ಯುದ್ಧವಾಯಿತು. ಬಾಣ ಬತ್ತಳಿಕೆ, ರಥ, ತುರಗ, ಎಲ್ಲ ಮುಗಿದವು. ಕೊನೆಗೆ ಮುಷ್ಠಿಯುದ್ಧ ಪ್ರಾರಂಭವಾಯಿತು. ಕರ್ಣನು ಬೇರೆಲ್ಲೂ ಹೊಡೆಯದೆ, ಅವನ ಶರೀರದ ಜೋಡಣೆಯ ಸ್ಥಳದ ಸಂಧಿಯಲ್ಲಿ ಬಲವಾಗಿ ಗುದ್ದಿದನು. ಗುಟ್ಟು ರಟ್ಟಾಯಿತೆಂದು ಜರಾಸಂಧನು ರೇಗಲಿಲ್ಲ. ಅವನಿಗೆ ಅಂಗರಾಜ್ಯದ ಉಳಿದ ಭಾಗವನ್ನು ಕೊಟ್ಟು ಸ್ನೇಹಿತನನ್ನಾಗಿ ಮಾಡಿಕೊಂಡನು. 'ಪ್ರಸಂಗ ಬಂದಾಗ ನಿನ್ನ ಸಹಾಯವಿರಲಿ' ಎಂದು ಹೇಳಿಯೂಬಿಟ್ಟನು.

ಅಂಗರಾಜ್ಯದ ಅರ್ಧ ಭಾಗವನ್ನು ಮೊದಲು ದುರ್ಯೋಧನನು ಕರ್ಣನಿಗೆ ಕೊಟ್ಟಿದ್ದನು. ಅದು ಭೀಮನು ಜರಾಸಂಧನಿಂದ ಗೆದ್ದು ತಂದಿದ್ದನು. ಈಗ ಉಳಿದ ಭಾಗ ಜರಾಸಂಧ ಕರ್ಣನಿಗೆ ಕೊಟ್ಟಿದ್ದಾನೆ. ಈಗ ಕರ್ಣನು ಪೂರ್ಣ ಅಂಗದೇಶದ ರಾಜ. (ಅದೂ ಅವನ ತಂದೆಯದೇ ಹಿಂದೆ ಜರಾಸಂಧ ಗೆದ್ದಿದ್ದನು.)

ಕಾಶಿರಾಜನ ಮಗಳೊಂದಿಗೆ ದುರ್ಯೋಧನನ ಮದುವೆ ಆಗಿದೆ. ಅವಳು ಕಲಿಯ ಹೆಂಡತಿ. ಅಲಕ್ಷ್ಮಿ, ಸಮುದ್ರದ ಕಾಲಕ್ಕೆ ಲಕ್ಷ್ಮಿ ದೇವಿಯರಿಗಿಂತಲೂ ಮೊದಲು ಬಂದವಳು. ದುರ್ಯೋಧನನು ಇಬ್ಬರಲ್ಲೂ ನಿಯತ ಪತಿ ಪತ್ನಿತ್ವ ಅಲ್ಲದೇ ಮದುವೆ ಆಯಿತು. ಅನೇಕ ರಾಕ್ಷಸರು ಅವರ ಉದರದಲ್ಲಿ ಜನಿಸಿ, ಈಗ ಕೌರವನಿಗೆ ಮಕ್ಕಳಾಗಿದ್ದಾರೆ.

ಕಲಿಂಗದ ರಾಜನು ಮಗಳ ಸ್ವಯಂವರ ಏರ್ಪಡಿಸಿದ್ದನು. ಅವನನ್ನು ಮಿಕ್ಕ ರಾಜರೆಲ್ಲ ಸುವಜ್ರ ಎಂದೇ ಕರೆಯುತ್ತಿದ್ದರು. ಅವನಿಗೆ ರುದ್ರದೇವರ ವರವೂ ಇದ್ದಿತು. ದುರ್ಯೋಧನನು ಅಲ್ಲಿಗೆ ಹೋಗಿ ಅಲ್ಲಿಯೂ ಬಲಾತ್ಕಾರದಿಂದ ಕನ್ಯೆಯನ್ನು ಅಪಹರಿಸಲು ಪ್ರಯತ್ನ ನಡೆಸಿದನು. ಸುವಜ್ರನು ಜರಾಸಂಧನ ಸಹಾಯದಿಂದ ಯುದ್ಧ ಮಾಡಿದನು. ಕರ್ಣನಿಗೆ ಸೋಲಾಯಿತು. ದುರ್ಯೋಧನನು ಬಂಧಿತನಾದನು. ಭೀಷ್ಮ, ಧೃತರಾಷ್ಟ್ರ ಮೊದಲಾದವರೆಲ್ಲರೂ ಧರ್ಮರಾಜನನ್ನು ಕೇಳಿಕೊಂಡರು. ಧರ್ಮರಾಜನ ಆಜ್ಞೆಯ ಮೇರೆಗೆ ಭೀಮನು ಯುದ್ಧಕ್ಕೆ ಹೋಗಿ ಜರಾಸಂಧನನ್ನು ಗೆದ್ದು, ಸುವಜ್ರನನ್ನು ಕೊಂದು ದುರ್ಯೋಧನನ್ನು ಬಿಡಿಸಿ ತಂದನು.

ದುರ್ಯೋಧನನಿಗೆ ಸಮಾಧಾನವಾಗಲಿಲ್ಲ. ಕೌರವ ಪಾಂಡವರಲ್ಲಿ ದ್ವೇಷ ಬೆಳೆಯಹತ್ತಿತು. ಇದನ್ನರಿತ ಧೃತರಾಷ್ಟ್ರನು, ಧರ್ಮನನ್ನು ಕರೆದು, ನೀವು ಇಂದ್ರಪ್ರಸ್ಥಕ್ಕೆ ಹೋಗಿರಿ. ಅಲ್ಲಿದ್ದು ರಾಜ್ಯವಾಳಿರಿ ಎಂದು ಹೇಳಿ ಅರ್ಧರಾಜ್ಯ ಕೊಟ್ಟನು.

ಧರ್ಮನು ಒಪ್ಪಿ ಇಂದ್ರಪ್ರಸ್ಥಕ್ಕೆ ನಡೆದನು. ಪುರಜನರು ಪಾಂಡವರನ್ನು ಅನುಸರಿಸಿದರು. ಸಜ್ಜನ ಸಂಗದಲ್ಲಿಯೇ ನಮಗೆ ಸುಖವಿದೆ. ನಾವು ದುರ್ಯೋಧನನ ಆಶ್ರಯದಲ್ಲಿರಲಾರೆವು ಎಂದು ಹೇಳಿದರು. ಧರ್ಮರಾಜನು ಅವರಿಗೆ ಸಮಾಧಾನ ಹೇಳಿ ಹಿಂದಿರುಗಿಸಿದನು. ಕೆಲವರು ಬಂದರು.

ಇಂದ್ರಪ್ರಸ್ಥದಲ್ಲಿ ಧರ್ಮರಾಜನಿಗೆ ಪಟ್ಟಾಭಿಷೇಕ ಆಯಿತು. ವಾಯುಪುತ್ರನು ಯುವರಾಜನಾದನು. ಶ್ರೀಕೃಷ್ಣ ಮತ್ತು ಇತರರು ಉಡುಗೊರೆಗಳನ್ನಿತ್ತರೆ, ವ್ಯಾಸರು ಸಾತ್ವಿಕರಾಗಿ, ಯಜ್ಞ ಯಾಗಾದಿಗಳೂ ಮಾಡುತ್ತ ಧರ್ಮದಿಂದ ಬಾಳಿರಿ ಎಂದು ಆಶೀರ್ವಾದವಿತ್ತರು.

ಧೃತರಾಷ್ಟ್ರನು ದುರ್ಯೋಧನನಿಗೆ ಪಟ್ಟಗಟ್ಟಿ ದುಶ್ಶಾಸನನಿಗೆ ಯುವರಾಜನನ್ನಾಗಿ ಮಾಡಿದನು. ದುರ್ಯೋಧನನು ಕಲಿಂಗ ನೀತಿಯನ್ನೇ ಅನುಸರಿಸಿ ರಾಜ್ಯವಾಳಿದರೆ, ಪಾಂಡವರು ವಿದುರ ನೀತಿಯನ್ನು ಅನುಸರಿಸಿ ಪ್ರಜೆರನ್ನು ಪಾಲಿಸುತ್ತಿದ್ದರು. ಶ್ರೀಕೃಷ್ಣ ಮತ್ತು ವ್ಯಾಸರ ಮಾರ್ಗದರ್ಶನದಲ್ಲಿ ರಾಜ್ಯವನ್ನು ಅಭಿವೃದ್ಧಿಪಡಿಸಿ ಕೀರ್ತಿಯನ್ನು ಪಡೆದನು.

# ಅಧ್ಯಾಯ ಇಪ್ಪತ್ತು

ಈ ಇಪ್ಪತ್ತನೆಯ ಅಧ್ಯಾಯದಲ್ಲಿ ಪಾಂಡವರಲ್ಲಿ ಒಬ್ಬೊಬ್ಬರು ಯಾವ ಯಾವ ಕಾರ್ಯವನ್ನು ಒಪ್ಪಿಕೊಂಡರು ಮತ್ತು ಅದನ್ನು ಹೇಗೆ ನಿರ್ವಹಿಸಿದರು ಎಂದು ಪ್ರಾರಂಭಿಸಿದ್ದಾರೆ.

**ಓಂ ಯಜ್ಞೋಽರುದಾನನರದೇವ ವಂದ್ಯತಾ–**
**ಪ್ರಶ್ನರ್ಷಿಪೂಜಾಸು ಯುಧಿಷ್ಠಿರೋಽಭೂತ್**
**ಧರ್ಮಾನುಶಾಸ್ತಿ, ಹರಿತತ್ತ್ವ ಶಂಸನ–**
**ಸ್ವ ರಾಷ್ಟ್ರ ರಕ್ಷಾ ದಿಷು ಭೀಮ ಆಸೀತ್** ||೧||

ಯುಧಿಷ್ಠಿರನು, ಯಜ್ಞ–ಯಾಗಗಳನ್ನು ನಿರ್ವಹಿಸುವುದು. ದಾನ ಧರ್ಮಾದಿಗಳನ್ನು ಮಾಡುವುದು, ಬ್ರಾಹ್ಮಣರನ್ನು ಪೂಜಿಸುವುದು ಇತರ ರಾಜರಿಂದ ಮನ್ನಣೆಯನ್ನು, ಕಪ್ಪಗಳನ್ನು ಸ್ವೀಕರಿಸುವುದು ಇತ್ಯಾದಿಗಳನ್ನು ವಹಿಸಿಕೊಂಡನು.

ಇವು, ಹಿರಿಯರು ಮತ್ತು ಮುಖ್ಯಸ್ಥರು ಮಾಡಬೇಕಾದ ಕಾರ್ಯಗಳು. ಧರ್ಮದಂತೆ ಅನುಶಾಸನ ಮಾಡುವುದು, ಪರಮಾತ್ಮನ ತತ್ತ್ವಗಳನ್ನು ಪ್ರಚಾರ ಮಾಡುವುದು, ತಮ್ಮ ರಾಷ್ಟ್ರವನ್ನು ರಕ್ಷಿಸುವುದು, ಇವುಗಳನ್ನು ಭೀಮಸೇನನು ವಹಿಸಿಕೊಂಡನು.

ಇಲ್ಲಿ ಭಾಗವತ ಧರ್ಮನಿಷ್ಠೆ, ಭಗವಂತನಲ್ಲಿ ಭಕ್ತಿ ಮತ್ತು ದೇಶಪ್ರೇಮ ಇವು ಭೀಮಸೇನನ ಸ್ವಾಭಾವಿಕ ಗುಣಗಳಾಗಿದ್ದವು.

**ಸ್ತ್ರೀ ಧರ್ಮಸಂಶಾಸನ ಭೃತ್ಯ ಕೋಶ–**
**ರಕ್ಷಾವ್ಯಯಾದೌ ಗುಣದೋಷ ಚಿಂತನೇ**
**ಅಂತಃ ಪುರಸ್ಥಸ್ಯ ಜನಸ್ಯ ಕೃಷ್ಣಾ**
**ಹ್ಯಾ (ತ್ಯಾ) ಸೀದ್ಧರೇರ್ಧರ್ಮರ್ಮ ನಿದರ್ಶಿ (ಶ) ನೀ ಚ** ||೨||

ಸ್ತ್ರೀ ಧರ್ಮವನ್ನು ಉಪದೇಶಿಸುವುದು, ಮನೆಯ ವ್ಯವಸ್ಥೆಯನ್ನು ನೋಡಿಕೊಳ್ಳುವುದು, ಸೇವಕರನ್ನು ಪೋಷಿಸುವುದು, ಕೋಶದ ರಕ್ಷಣೆಯ ಹೊಣೆ, ಆಯವ್ಯಯ, ಅರಮನೆಯಲ್ಲಿರತಕ್ಕ ಸೇವಕರ ಸುಖ ದುಃಖಗಳ ಚಿಂತನೆ, ಶ್ರೀಹರಿಯ ಧರ್ಮದ ಉಪದೇಶ ಮುಂತಾದ ಕಾರ್ಯಗಳನ್ನು ದ್ರೌಪದಿ ದೇವಿಯರು ಮಾಡುತ್ತಿದ್ದರು.

**ಭೀಭತ್ಸು ರಾಶೀತ್ಪರರಾಷ್ಟ್ರ ಮರ್ದನೇ**
**ತೇನಾ ನಿಯುಮ್ಯಾಂಸ್ತು ಜರಾಸುತಾದೀನ್**
**ಸ ಕೀಚಕಾದೀಂಶ್ಚ ಮಮರ್ದ ಭೀಮಃ**
**ತಸ್ಯೈವ ತೇ ಬಲತೋ ನಿತ್ಯಭೀ ತಾಃ** ||೩||

ಪರ ರಾಷ್ಟ್ರಗಳಿಂದ ಭಯವುಂಟಾದಾಗ, ಅವರನ್ನು ಮರ್ದಿಸುವುದು, ಜೊತೆಯಲ್ಲಿ ನಿಯಮ್ಮಿಸುವುದು (ನಿಗ್ರಹಿಸುವುದು) ಅರ್ಜುನನ ಕೆಲಸವಾಗಿತ್ತು. ಆತನ ಶಕ್ತಿಗೆ ಮೀರಿದ ಜರಾಸಂಧ ಮತ್ತು ಕೀಚಕ ಮುಂತಾದವರನ್ನು ಭೀಮನು ಮರ್ದಿಸಿದನು. ಭೀಮನ ಬಲದಿಂದಲೇ ಅವರು ಸದಾ ಭೀತರಾಗಿರುತ್ತಿದ್ದರು.

**ರಾಷ್ಟ್ರೇಷು ಭೀಮೇನ ವಿಮರ್ದಿತೇಷು**
**ಚಿತಾಶ್ಚ ಯುದ್ಧೇಷು ನಿರುದ್ಯ ಮಾಸ್ತೇ**
**ಬಭೂವು ರಾಷೀದ್ಧರಿಧರ್ಮ ನಿಷ್ಠಃ**
**ಪ್ರಾಯೇಣ ಲೋಕಶ್ಚ ತದೀಯ ಶಾಸನಾತ್** ||೪||

ಭೀಮಸೇನನು ಇತರ ರಾಷ್ಟ್ರಗಳನ್ನು ಮರ್ದಿಸಿ, ಗೆಲ್ಲುತ್ತಿರುವಾಗ ಆಯಾ ದೇಶಗಳೆಲ್ಲ ಭೀಮನ ಅಧೀನದಲ್ಲಾದವು. ಇದರಿಂದ ಜರಾಸಂಧನಿಗೆ ಉದ್ಯೋಗವಿಲ್ಲ ದಾಯಿತು. ಲೋಕದ ಬಹುಭಾಗವು ಭೀಮನ ಶಾಸನದಲ್ಲಿ ಬಂದಿತು. ಅಲ್ಲೆಲ್ಲ ಶ್ರೀಹರಿಯ ಧರ್ಮವೇ ಸ್ಥಾಪಿತವಾಯಿತು.

ವಿ. ವಿ. : ಜರಾಸಂಧನ ನಿರುದ್ಯೋಗಕ್ಕೆ ಕಾರಣಗಳು ಎರಡು:

೧) ಜರಾಸಂಧ ಶೈವಭಕ್ತ. ಶೈವಭಕ್ತರ ಗುರುವೂ ಕೂಡ. ಭೀಮನ ಪ್ರಚಾರದಿಂದ ಅವನಿಗೆ ಆಸ್ಪದವಿಲ್ಲದಾಯಿತು. ಪ್ರಚಾರದ ದೃಷ್ಟಿಯಿಂದ ನಿರುದ್ಯೋಗಿಯಾದ.

೨) ಜರಾಸಂಧ ಆಗಿನ ಕಾಲದಲ್ಲಿ ಅತ್ಯಂತ ಬಲಶಾಲಿ ರಾಜ. ಅದಕ್ಕಾಗಿ ಆಗಾಗ ತನಗೆ ಎದುರಾದ ಎಲ್ಲರೊಡನೆ ಯುದ್ಧಮಾಡುತ್ತಿದ್ದರು. ಭೀಮನ ಬಲದ ಮುಂದೆ ಅವನ ಆಟ ನಡೆಯಲಿಲ್ಲ. ಅದಕ್ಕಾಗಿ ಯುದ್ಧದ ದೃಷ್ಟಿಯಿಂದ ನಿರುದ್ಯೋಗಿಯಾಗಿದ್ದನು.

**ಆಜೀವಿನಾಂ ವೇತನದಸ್ತು ದಾಸೀತ್**
**ಮಾದ್ರಿಸುತಃ ಪ್ರಥಮೋಽಥ ದ್ವಿತೀಯಃ**
**ಸಂಧಾನ ಭೇದಾದಿಷು ಧರ್ಮರಾಜ**
**ಪಶ್ಚಾಚ್ಚ ಖಡ್ಗೀ ಸ ಬಭೂವ ರಕ್ಷನ್** ||೫||

ವೇತನದಿಂದಲೇ ಉಪ ಜೀವಿಸುವವರಿಗೆ, ಮಾದ್ರಿಯ ಹಿರಿಯ ಮಗ ನಕುಲನು ವೇತನ ವಿತರಣೆಯನ್ನು ಮಾಡುತ್ತಿದ್ದನು.

ಮಾದ್ರಿಯ ಎರಡನೆಯ ಮಗನಾದ ಸಹದೇವನು ಸಂಧಾನ ಭೇದಗಳಿಂದ ವೈರಿಗಳ ಬಲವನ್ನು ಕುಗ್ಗಿಸಿ, ಧರ್ಮರಾಜನಿಗೆ ಖಡ್ಗಧಾರಿಯಾಗಿ ರಕ್ಷಕನಾಗಿದ್ದನು. (ಇಲ್ಲಿ ಸಹದೇವನ ಬುದ್ಧಿಚಾತುರ್ಯ ವ್ಯಕ್ತವಾಗುತ್ತದೆ.)

**ಧೃಷ್ಟದ್ಯುಮ್ನಸ್ತತ್ರ ಸೇನಾಪ್ರಣೇತಾ**
**ಶಕ್ರ ಪ್ರಸ್ಥೇ ನಿತ್ಯಮಾಸ್ತೇಽತಿ ಹಾರ್ದಾತ್**
**ವಿಶೇಷತೋ ಭೀಮಸಖಾ ಸ ಆಸೀತ್**
**ರಾಷ್ಟ್ರಂ ಚೈಷಾಂ ಸರ್ವಂ ಕಾಮ್ಯೈಃ ಸುಪೂರ್ಣಮ್** ||೬||

ಧೃಷ್ಟದ್ಯುಮ್ನನು ಪಾಂಡವರ ಸೇನಾಪತಿಯಾಗಿ ಇಂದ್ರಪ್ರಸ್ಥದಲ್ಲಿಯೇ ಇದ್ದನು. ಎಲ್ಲರೊಡನೆಯೂ ಸೌಹಾರ್ದದಿಂದ (ಪ್ರೀತಿಯಿಂದ) ಕಾಲ ಕಳೆಯುತ್ತಿದ್ದನು. ವಿಶೇಷವಾಗಿ ಭೀಮಸೇನ ದೇವರಿಗೆ ಮಿತ್ರನಾಗಿದ್ದನು. ಇವರ ರಾಜ್ಯವು ಸಮೃದ್ಧವಾಗಿತ್ತು. ಕಾರಣ ಎಲ್ಲರ ಕಾಮನೆಗಳು ಪೂರ್ತಿಗೊಳ್ಳುತ್ತಿದ್ದವು.

**ನಾ ವೈಷ್ಣವೋ ನ ದರಿದ್ರೋ ಬಭೂವ ।**
**ನ ಧರ್ಮ ಹಾನಿಶ್ಚ ಬಭೂವ ಕಸ್ಯಚಿತ್ ।**
**ತೇಷಾಂ ರಾಷ್ಟ್ರೇ ಶಾಸತಿ ಭೀಮಸೇನೇ ।**
**ನ ವ್ಯಾಧಿತೋಽಪ್ಯಪಿ ವಿಪರ್ಯಯಾನ್ಮೃತಿಃ ॥೭॥**

ಭೀಮಸೇನನು ಯುವರಾಜನಾಗಿ ರಾಜ್ಯವನ್ನು ಆಳುತ್ತಿರುವಾಗ ರಾಜ್ಯದಲ್ಲಿ ಅವೈಷ್ಣವರು ಯಾರೂ ಇರಲಿಲ್ಲ. ದರಿದ್ರನೂ ದೊರೆಯುತ್ತಿರಲಿಲ್ಲ. ರೋಗಗಳ ಉಪಟಳವಿರಲಿಲ್ಲ. ಅಧರ್ಮಕ್ಕೆ ಆಸ್ಪದವಿರಲಿಲ್ಲ. ಆಧಿವ್ಯಾಧಿಗಳ ಭಯವಿರಲಿಲ್ಲ. ಅಕಾಲ ಮೃತ್ಯುವಿರಲಿಲ್ಲ. ಹಿರಿಯರ ಮುಂದೆ ಕಿರಿಯರು ಸಾಯುತ್ತಿರಲಿಲ್ಲ. ಪಾಪಿಗಳೂ ಇರಲಿಲ್ಲ. ಇದು ಭೀಮನ ರಾಜ್ಯದ ವೈಶಿಷ್ಟ್ಯವಾಗಿತ್ತು.

**ವಿ. ವಿ. :** ಅಂದರೆ ಭೀಮನ ರಾಜ್ಯದಲ್ಲಿ ಇತರ ಮತದವರು ಇರಲಿಲ್ಲವೇ? ಇದ್ದರು. ಸಾಕಷ್ಟು ಜನರಿದ್ದರು. ಅನೇಕ ದೇವತೆಗಳಲ್ಲಿ ಭಕ್ತಿಯುಳ್ಳವರು ಆಗಿದ್ದರು. ಆದರೂ ಆಯಾ ದೇವತೆಯ ಅಂತರ್ಗತ ವಿಷ್ಣುವಿನಲ್ಲಿಯೇ ಸಮನ್ವಯವೂ ಅಹುದು.

**ಯುಧಿಷ್ಠಿರಂ ಯಾಂತ್ಯಥ ದರ್ಶನೋತ್ಸುಕಾಃ**
**ಪ್ರತಿಗ್ರಹಾಯಾಪ್ಯಥ ಯಾಜನಾಯ**
**ಕಾರ್ಯಾರ್ಥಿನೋ ನೈವ ವೃಕೋದರೇಣ**
**ಕಾರ್ಯಾಣಿ ಸಧ್ಯಂತಿ ಯಶೋಽಖಿಲಾನಿ ॥೮॥**

ಧರ್ಮರಾಜನನ್ನು ನೋಡುವ ಕುತೂಹಲವುಳ್ಳವರು, ದಾನವನ್ನು ಕೇಳುವವರು, ಯಜ್ಞ ಯಾಗಾದಿಗಳನ್ನು ಮಾಡತಕ್ಕವರು ಯುಧಿಷ್ಠಿರನ ಹತ್ತಿರ ಬರುತ್ತಿದ್ದರು. ಏನಾದರೂ ಕೆಲಸವಾಗಬೇಕಾದರೆ, ಅವರು ಭೀಮಸೇನರ ಹತ್ತಿರವೇ ಬಂದು ಕಾರ್ಯವನ್ನು ಮಾಡಿಸಿ ಕೊಳ್ಳುತ್ತಿದ್ದರು. ಎಲ್ಲ ಕಾರ್ಯಗಳ ಸಿದ್ಧಿ ಅಲ್ಲಿಯೇ ಆಗುತ್ತಿತ್ತು.

**ಗಂಧರ್ವ ವಿದ್ಯಾಧರ ಚಾರಣಾಶ್ಚ**
**ಸೇವಂತ ಏತಾನ್ಸತತಂ ಸಮಸ್ತಾಃ**
**ಯಥಾ ಸುರೇಂದ್ರಂ ಮುನಯಶ್ಚ ಸರ್ವೇ**
**ಆಯಾಂತಿ ದೇವಾ ಅಪಿ ಕೃಷ್ಣ ಮರ್ಚಿತುಮ್ ॥೯॥**

ಗಂಧರ್ವರು, ವಿದ್ಯಾಧರರು, ಚಾರಣ ಮುಂತಾದವರೆಲ್ಲ ಬಂದು ದೇವೇಂದ್ರನನ್ನು ಪೂಜಿಸುವಂತೆ ಪಾಂಡವರ ಸೇವೆಯನ್ನು ಯಾವಾಗಲೂ ಮಾಡುತ್ತಿದ್ದರು. ಅಷ್ಟೇ ಅಲ್ಲ ಶ್ರೀಕೃಷ್ಣನು ಅಲ್ಲಿದ್ದ ಕಾರಣ ಅನೇಕ ದೇವತೆಗಳು ಆತನನ್ನು ಪೂಜಿಸಲು ಅಲ್ಲಿಗೆ ಬರುತ್ತಿದ್ದರು.

**ತೇಷಾಂ ರಾಷ್ಟ್ರೇ ಕಾರ್ತಯುಗಾ ಹಿ ಧರ್ಮಾ:**
**ಪ್ರವರ್ತಿತಾ ಏವ ತತೋಽಧಿಕಾಶ್ಚ**
**ವೃದ್ಧಿಶ್ಚ ತಸ್ಮಾ ದಧಿಕಾ ಸುವರ್ಣ**
**ರತ್ನಾಂಬರಾದೇರಪಿ ಸಸ್ಯ ಸಂಪದಾಮ್ ॥೧೦॥**

ಪಾಂಡವರ ರಾಷ್ಟ್ರವು ಕೃತಯುಗವಾಗಿ ಮಾರ್ಪಟ್ಟಿತು. ಕೃತಯುಗಕ್ಕಿಂತಲೂ ಅಧಿಕ ಧರ್ಮಗಳು ಇಲ್ಲಿ ಆಚರಿಸಲ್ಪಡುತ್ತಿದ್ದವು. ಆದ್ದರಿಂದ ಅನ್ನ–ವಸ್ತ್ರ, ಮುತ್ತು–ರತ್ನ, ಬೆಳ್ಳಿ–ಬಂಗಾರ ಇವುಗಳಿಗೆ ಕೊರತೆಯಿರಲಿಲ್ಲ. ಸಸ್ಯ ಸಂಪತ್ತೂ ಸಾಕಷ್ಟು ಬೆಳೆದಿತ್ತು.

ವಿ. ವಿ. : ಕೃತಯುಗದಲ್ಲಿ ಪೂರ್ಣಧರ್ಮ, ದ್ವಾಪರದಲ್ಲಿ ಅರ್ಧಧರ್ಮ. ಇದು ಪ್ರಸಿದ್ಧ ಆದರೆ ಪಾಂಡವರ ರಾಜ್ಯದಲ್ಲಿ ಪೂರ್ಣಧರ್ಮ ಆವರಿಸಿತ್ತು. ಅಧರ್ಮಕ್ಕೆ ಎಡೆಯೇ ಇರಲಿಲ್ಲ. ಇಂದಿನ ಆಡಳಿತಕಾರರು ಇದನ್ನು ಅರಿಯುವುದುತ್ತಮ.

**ಅಥೋಪಯೇಮೇ ಶಿಶುಪಾಲ ಪುತ್ರೀಂ**
**ಯುದಿಷ್ಠಿರೋ ದೇವಕೀಂನಾಮ ಪೂರ್ವಂ**
**ಸ್ವೀಯಾಂ ಭಾರ್ಯಾಂ ಯತ್ಸಹಜೋ ಧೃಷ್ಟಕೇತು:**
**ಅನುಹ್ಲಾದಸ್ಸವಿತುಶ್ಚಾಂಶಯುಕ್ತ: ॥೧೧॥**

ಶಿಶುಪಾಲನ ಮಗಳು ದೇವಕಿ – ಆಕೆಯನ್ನು ಯುದಿಷ್ಠಿರನು ಮದುವೆ ಮಾಡಿಕೊಂಡನು. ಅವಳು ಪೂರ್ವ ಜನ್ಮದಲ್ಲಿ ಧರ್ಮನ ಹೆಂಡತಿ. (ನಿಯತ ಪತ್ನಿ) ದೇವಕಿಯ ಸಹೋದರ ಧೃಷ್ಟಕೇತು. ಇವನು ಪ್ರಹ್ಲಾದನ ತಮ್ಮ ಅನುಹ್ಲಾದ ಶಾಮಲೆ (ಸವಿತೃ) ಅಂಶದಿಂದ ಕೂಡಿದವನು.

**ತಸ್ಯಾಂ ಸುಹೋತ್ರೋ ನಾಮತ: ಪುತ್ರ ಆಸೀತ್**
**ಯಸ್ಚಿತ್ರ ಗುಪ್ತೋನಾಮ ಪೂರ್ವಂ ಸುಲೇಖ:**
**ಕಷ್ಯಾ ಸೈವಾಪ್ಯನ್ಯ ರೂಪೇಣ ಜಾತಾ**
**ಕಾಶೀಶ ಪುತ್ರೀ ಯಾಂ ಪ್ರವದಂತಿ ಕಾಲೀಮ್ ॥೧೨॥**

ದೇವಕಿಯ ಉದರದಲ್ಲಿ ಸುಹೋತ್ರನೆಂಬ ಮಗನು ಹುಟ್ಟಿದನು. ಅವನು ಪೂರ್ವದಲ್ಲಿ ಪ್ರಸಿದ್ಧನಾದ ಚಿತ್ರಗುಪ್ತನು. ಕಾಶೀರಾಜನ ಮಗಳೇ ಕಾಲಿ. ಆಕೆಯೇ ಮತ್ತೊಂದು ರೂಪದಿಂದ ದ್ರೌಪದಿಯಾಗಿ ಹುಟ್ಟಿದಳು.

**ಸಾ ಕೇವಲಾ ಭಾರತೀ ನಾನ್ಯದೇವ್ಯೈ:**
**ತತ್ರಾವಿಷ್ಟಾಸ್ತತ್ಪರೇ ಕಾಶಿರಾಜ:**
**ಸ್ವಯಂ ವರಾರ್ಥೇ ನೃಪತೀ ನಾಜುಹಾವ**
**ಸರ್ವಾಂಸ್ತೇಽಪಿ ಹ್ಯತ್ರ ಹರ್ಷಾತ್ಸಮೇತಾ: ॥೧೩॥**

ಆ ಕಾಲಿಯು ಕೇವಲ ಭಾರತಿಯೇ ಆಗಿದ್ದಳು. ಬೇರೆ ದೇವತೆ ಅಲ್ಲ. ಅಷ್ಟ ಭಾರತಿದೇವಿ – ಕಾಶಿರಾಜ ಮಗಳ ಸ್ವಯಂವರ ಏರ್ಪಡಿಸಿದ್ದನು. ಅನೇಕ ರಾಜರು ಬಂದಿದ್ದರು. ಅವರೆಲ್ಲರೂ (ದ್ರೌಪದಿ) ಕಾಳಿಯನ್ನು ಪಡೆಯುವೆವು ಎಂಬ ಹರ್ಷದಲ್ಲಿದ್ದರು.

**ತೇಷಾಂ ಮಧ್ಯೇ ಭೀಮಸೇನಾಂಸ ಏಷಾ**
**ಮಾಲಾ ಮಥಾತ್ತತ್ರ ಜರಾಸುತಾದ್ಯಾಃ**
**ಕ್ರುದ್ಧಾ ವಿಷ್ಣೋ ರಾಶ್ರಿತಾ ಸಾಕ್ಷಿ ಪಂಕ್ತ**
**ಆಸೇದು ರುಕ್ಥೈಃ ಶಿವಮಾಸ್ತು ವಂತಃ** ||೧೪||

ಆ ರಾಜರ ಮಧ್ಯದಲ್ಲಿ ಭೀಮಸೇನನೂ ಒಬ್ಬನು. ಆತನಿಗೆ ಕಾಲಿಯು ಮಾಲೆಯನ್ನು ಹಾಕಿದಳು. ಇದನ್ನು ಕಂಡ ಜರಾಸುತ ಮೊದಲಾದ ರಾಜರು ಕ್ರುದ್ಧ ರಾದರು. ವಿಷ್ಣು ಭಕ್ತನಿಗೆ ಕನ್ಯ ಸಲ್ಲುತಲ್ಲ ಎಂದು ನೊಂದರು. ಅವರೆಲ್ಲರು ಶ್ರೇಷ್ಠ ಶಿವಭಕ್ತರಾಗಿದ್ದರು. ಶಿವನನ್ನೇ ಸ್ತೋತ್ರ ಮಾಡತಕ್ಕವರಾದರು.

ವಿ. ವಿ. : 'ಕಾಳಿ ಭೀಮನಿಗೆ (ಭಾರತಿ–ವಾಯು) ನಿಯತ ಪತ್ನಿಯಲ್ಲವೇ? ಅದಕ್ಕಾಗಿ ಇತರರನ್ನು ನಿರಾಕರಿಸಿದಳು. ಭೀಮಸೇನ ಮತ್ತು ಇತರ ರಾಜರಲ್ಲಿ ವಾಕ್ಯಾರ್ಥ (ವಾಗ್ಯುದ್ಧ) ಪ್ರಾರಂಭವಾಯಿತು.

**ಪೂರ್ವಂ ವಾಕ್ಯೈರ್ವೇದಿಕೈಸ್ತಾನ್ಸ ಭೀಮೋ**
**ಜಿಗ್ಯೇ ತರ್ಕೈಃ ಸಾಧುಭಿಃ ಸಂಪ್ರಯುಕ್ತೈಃ**
**ವೇದಾ ಹ್ಯದೋಷಾ ಇತಿ ಪೂರ್ವಮೇವ**
**ಸಂಸಾಧಯಿತ್ವೈವ ಸದಾಗಮೈಶ್ಚ** ||೧೫||

ಪ್ರಾರಂಭದಲ್ಲಿ, ಪ್ರಾಚೀನ ವೇದೋಕ್ತ ವಾಕ್ಯಗಳಿಂದ ಆ ಭೀಮಸೇನನು ಎದುರಾಳಿಗಳನ್ನು ಸೋಲಿಸಿದನು. ತನ್ನ ವಾದವು ತರ್ಕಬದ್ಧವಾದುದು, ಸಾಧು ವಾಕ್ಯಗಳಿಂದ ಕೂಡಿದುದು, ಒಳ್ಳೆಯ ನಿರ್ದೋಷಗಳಾದವು. ಪಂಚರಾತ್ರ, ಆಗಮ ಇತ್ಯಾದಿಗಳು ಅಪೌರುಷೇಯವೆಂದು ಸಿದ್ಧಪಡಿಸಿದನು. ಇವುಗಳ ಆಧಾರದಿಂದಲೇ ಚರ್ಚೆ ನಡೆಯಿತು.

**ವೈದಾಧಿಕ್ಯಂ ಶೈವಶಾಸ್ತ್ರಾಣಿ ಚಾಹುಃ**
**ವೇದೋಜ್ಝಿತಾನಾಂ ಬಹುಲಾಂ ಚ ನಿಂದಾಂ**
**ತಥಾ ಶಾಕ್ತೇಯ ಸ್ಕಾಂದ ಸೌರಾ ದಿಕಾನಾಂ**
**ತತ್ರೈವೋಕ್ತಂ ಛಂದಸಾಂ ವೈಷ್ಣವತ್ವಮ್** ||೧೬||

ಶೈವ ಪುರಾಣಗಳೂ ವೇದಗಳಿಗೆ ಶ್ರೇಷ್ಠವೆಂದೇ ಹೇಳಿವೆ. ಪ್ರಮಾಣಗಳು ಎಂದೇ ಸಾರಿವೆ. ಆದರೂ ಅವುಗಳನ್ನು ಅಂಗೀಕರಿಸದವರಿಗೆ ನಿಂದಾತ್ಮಕವಾದ ಅರ್ಥಗಳನ್ನೂ ಕಲ್ಪಿಸುತ್ತವೆ. ಶಾಕ್ತ, ಸ್ಕಾಂದ ಮತ್ತು ಸೌರ ಮತಗಳೂ ನಿಂದಿಸುತ್ತಿವೆ.

ವಿ. ವಿ. : ವೇದಗಳಿಗೆ ಅನೇಕ ಅರ್ಥಗಳುಂಟು. ವಿಶೇಷವಾಗಿ ಬಾಹ್ಯಾರ್ಥ ಮತ್ತು ಗುಹ್ಯಾರ್ಥ. ಇವುಗಳನ್ನು ಚೆನ್ನಾಗಿ ಅರಿಯದೆ ವೇದಗಳಿಗೆ ಅರ್ಥ ಮಾಡಿದರೆ, ವಿರೋಧಾಭಾಸಕ್ಕೆ ಆಸ್ಪದವಿದೆ. ಇದು ವೇದ ಭಾಷೆಯ ವೈಶಿಷ್ಟ್ಯ. ಅಂತೆಯೇ ಅನೇಕ ದಾರ್ಶನಿಕರು ಬಂದರು. ಮತಗಳೂ ಹುಟ್ಟಿಕೊಂಡಿವೆ.

**ವಿಷ್ಣೋರಾಧಿಕ್ಯಂ ತಾನಿ ಶಾಸ್ತ್ರಾಣಿ ಚಾಹುಃ**
**ಶಿವಾದಿಷ್ವಪಿ ಕುತ್ರ ಚಿನ್ನೈವ ವೇದೇ**
**ವಿಷ್ಣೋತ್ಕರ್ಷಃ ಕಥಿತೋ ಬೌದ್ಧ ಪೂರ್ವಾಃ**
**ಚಾಹುರ್ವಿಷ್ಣುಂ ಪರಮಂ ಸರ್ವತೋಽಪಿ** ||೧೭||

ಎಲ್ಲ ಶಾಸ್ತ್ರಗಳು ವಿಷ್ಣುವಿನ ಆಧಿಕ್ಯವನ್ನೇ ಹೇಳಿವೆ. ಶಿವನ ಬಗೆಗೆ ಎಲ್ಲಿಯೂ ಉತ್ತಮನೆಂದು ಹೇಳಿಲ್ಲ. ಕೇವಲ ವೈದಿಕರಷ್ಟೇ ಅಲ್ಲ ಪೂರ್ವದಲ್ಲಿ ಅವೈದಿಕರಾದ ಬುದ್ಧರು ಕೂಡ ವಿಷ್ಣುವು ಪರಮನೆಂದು ಒಪ್ಪಿಕೊಂಡಿದ್ದಾರೆ. ಎಲ್ಲರಿಗೂ ಇದು ಸಮ್ಮತವಿದೆ.

**ಲೋಃ ಕಾಯತಾಶ್ಚ ಕ್ವಚಿದಾಹು ರಗ್ರ್ಯಂ**
**ವಿಷ್ಣುಂ ಗುರುಂ ಸರ್ವಪರಂ ಬೃಹಸ್ಪತೇಃ**
**ಸರ್ವಾಗಣೇಷು ಪ್ರಥಿತೋಽತ ಏವ**
**ವಿಷ್ಣುಃ, ಸಮಸ್ತಾಧಿಕ ಏವ ಮುಕ್ತಿದಃ** ||೧೮||

ಚಾರ್ವಾಕರು ಕೂಡ ಕೆಲವು ಕಡೆಗಳಲ್ಲಿ ವಿಷ್ಣುವಿನ ಶ್ರೇಷ್ಠತೆಯನ್ನು ಹೇಳಿದ್ದುಂಟು. ಶ್ರೀ ವಿಷ್ಣುವು ಬೃಹಸ್ಪತಿಗೂ ಶ್ರೇಷ್ಠ ಗುರು ಎಂದು ಹೇಳಲಾಗಿದೆ. ವಿಷ್ಣುವೇ ಮುಕ್ತಿಯನ್ನು ಕೊಡಲು ಸಮರ್ಥನು (ಅನ್ಯರಲ್ಲ) ಎಂದು ಸರ್ವ ಆಗಮಗಳು ಒಪ್ಪಿಕೊಂಡಿವೆ.

ವಿ. ವಿ. : ವಿಷ್ಣುವು ಅವತಾರ ರೂಪಗಳಲ್ಲಿ ಅಚಿಂತ್ಯ ಕಾರ್ಯಗಳನ್ನು ಮಾಡಿದ್ದಾನೆ. ಅಂತಹ ಕಾರ್ಯ ಮತ್ತಾರೂ ಮಾಡಿಲ್ಲ. ಕಾರಣ ವಿಷ್ಣುವೇ ಸರ್ವ ಶ್ರೇಷ್ಠನು.

**ತೇಷ್ವಾಗಮೇಷ್ವೇವ ಪರಸ್ಪರಂ ಚ**
**ವಿರುದ್ಧತಾ ಹ್ಯನ್ಯ ಪಕ್ಷೇಷು ಭೂಪಾಃ**
**ಪ್ರತ್ಯಕ್ಷತಶ್ಚಾತ್ರ ಪಶ್ಯಧ್ವಮಾಶು**
**ಬಲಂ ಬಾಹ್ವೋರ್ಮೇ ವಿಷ್ಣು ಪದಾಶ್ರಯಸ್ಯ** ||೧೯||

(ವೇದಗಳಲ್ಲಿ ಕೆಲವೆಡೆ ಪರಸ್ಪರ ವಿರುದ್ಧಾರ್ಥ ಬರುವಂತೆ ತೋರುವ ವಾಕ್ಯಗಳು ಇರುವುದು ನಿಜ. ಅವು ನಿಜವಾದ ವಿರೋಧಗಳಲ್ಲ. ತೋರಿಕೆಗೆ ಮಾತ್ರ ಅಂಥವುಗಳನ್ನು ತಿಳಿದುಕೊಳ್ಳುವಾಗ ಎಚ್ಚರಿಕೆ ವಹಿಸಬೇಕು. ಒಳ್ಳೆಯ, ಬಲ್ಲ ಗುರುಮುಖದಿಂದ ಅರಿಯಬೇಕು.)

ಎಲೈ ರಾಜರೇ ನೀವು ನಂಬಿರುವ ಆಗಮಗಳಲ್ಲೂ ಅನೇಕ ಕಡೆಗಳಲ್ಲಿ ವಿರುದ್ಧಾರ್ಥ ಬರುವ ಸಂಭವವುಂಟು. ಉದಾಹರಣೆಗೆ ಶಿವ ಸರ್ವೋತ್ತಮತ್ವ ಒಪ್ಪಿದರೆ, ಮೋಹಿನಿ ವೇಷ, ಭಸ್ಮಾಸುರನ ಘಟನೆ, ವಿಷಪಾನ, ಇವುಗಳ ಅರ್ಥವನ್ನು ನೋಡಿದಾಗ ವಿಪರೀತವಾಗುವುದಿಲ್ಲವೇ? ಇರಲಿ.

ಈಗ ಇಲ್ಲಿ ಪ್ರತ್ಯಕ್ಷ ನೋಡಿರಿ. ನಾನು ಹರಿಪದಾಶ್ರಯ ಪಡೆದವ. ನೀವು ಬೇಕಾದರೆ ನನ್ನೊಡನೆ ಯುದ್ಧಕ್ಕೆ ಬಂದು ನನ್ನ ಬಲವನ್ನು ಪರೀಕ್ಷೆ ಮಾಡಿ ಪ್ರತ್ಯಕ್ಷ ನೋಡಿ. ಇದು ಭೀಮನ ವಾದ.

**ಪೂರ್ವಂ ಹಿ ಗಂಗಾ ಮಮ ವಿಷ್ಣು ಪೂಜಾ –**
**ವಿಘ್ನಾರ್ಥ ಮಾಯಾದ್ಧಾಮಕರೇಣ ಸಾ ಮೇ**
**ನುನ್ನಾ ಪರಸ್ತಾದ್ಬಹು ಯೋಜನಂ ಗತಾ**
**ಪುರೇ ಕುರುಣಾಂ ಶಿವ ಆಗತಸ್ತದಾ ॥೨೦॥**

ಹಿಂದೆ, ಒಂದು ಸಲ ಹಸ್ತಿನಾವತಿಯಲ್ಲಿ, ನಾನು ಗಂಗಾ ದಂಡೆಯ ಮೇಲೆ ಪೂಜೆಗೆ ಕುಳಿತಿದ್ದೆ. ಆಗ ಗಂಗೆಯು ವಿಷ್ಣು ಪೂಜೆಗೆ ವಿಘ್ನ ಒಡ್ಡುವುದಕ್ಕಾಗಿ, ತೆರೆಗಳ ಮೂಲಕ ಆಕ್ರಮಿಸಿದಳು. ನಾನು ನನ್ನ ಎಡಗೈಯಿಂದ ಹಿಂದೆ ಸರಿಸಿದಾಗ ಬಹು ಯೋಜನ ದೂರ ಓಡಿಹೋದಳು. ಆಗ ಶಿವನು ಅಲ್ಲಿಗೆ ಬಂದನು.

**ಸ ವ್ಯಾಘ್ರರೂಪೀ ಕಲಿಲಾತ್ಮ ಕಾಮುಮಾಂ**
**ಪರೀಕ್ಷಯನ್ ಹಂತುಮಿವಾದ್ರವದ್ರುತಂ**
**ಸ ಮೇ ಯುದ್ಧೇ ವಿಜಿತೋ ಮೂರ್ಧಿತಶ್ಚ**
**ಗದಾ ಪ್ರಹಾರಾದಾಸ ಲಿಂಗಾಂತರಸ್ಥಃ ॥೨೧॥**

ಆ ಶಿವನು ವ್ಯಾಘ್ರ ರೂಪವನ್ನು ಧರಿಸಿದನು. ಉಮಾದೇವಿಯನ್ನು ಆಕಳನ್ನಾಗಿ ಮಾಡಿದನು. ನನ್ನ ಪರೀಕ್ಷೆಯ ದೃಷ್ಟಿಯಿಂದ ಆ ಆಕಳನ್ನು ಕೊಲ್ಲುವಂತೆ ನಟಿಸಿದನು. ಆ ಆಕಳು ಆದ್ರರವದಲ್ಲಿ ಕೂಗುತ್ತ ನನ್ನ ಕಡೆಗೆ ಬಂದಿತು. ಅದನ್ನು ರಕ್ಷಿಸುವುದಕ್ಕಾಗಿ ನಾನು ವ್ಯಾಘ್ರದೊಡನೆ ಯುದ್ಧ ಮಾಡಿದೆ. ಗದಾ ಪೆಟ್ಟಿಗೆ ಸೋತ ಶಿವನು ಅಲ್ಲಿ ಲಿಂಗದಲ್ಲಿ ಅಡಗಿದನು.

**ವ್ಯಾಘ್ರೇಶ್ವರಂ ನಾಮ ಲಿಂಗಂ ಪೃಥಿವ್ಯಾಂ**
**ಖ್ಯಾತಂ ತದಾ(ಸ್ತೇ) ತದ್ವದನ್ಯತ್ರ ಯುದ್ಧಂ**
**ತೀರೇ ಗೋಮತ್ಯಾ ಹೈಮವತೇ ಗಿರೌ ಹಿ**
**ಜಿತಸ್ತತ್ರಾ ಪ್ಯಾಸ ಶಾರ್ದೂಲ ಲಿಂಗಮ್ ॥೨೨॥**

ಇಂದಿಗೂ ಅದು ವಾಘ್ರಲಿಂಗವೆಂದೇ ಜಗತ್ತಿನಲ್ಲಿ ಪ್ರಖ್ಯಾತ ಆಗಿದೆ. ಅದರಂತೆಯೇ ಇನ್ನೊಂದು ಸಲ ಗೋಮತಿ ತೀರದಲ್ಲೂ ಯುದ್ಧವಾಯಿತು. ಆಗ ರುದ್ರನು ಶಾರ್ದೂಲನಾಗಿ ಬಂದಿದ್ದನು. ಅಲ್ಲಿಯೂ ಸೋತಾಗ ಶಾರ್ದೂಲ ಲಿಂಗವಾಗಿಯೇ ಹೆಸರು ಪಡೆದನು.

**ಏವಂ ಪ್ರತ್ಯಕ್ಷೇ ವಿಷ್ಣು ಪದಾಶ್ರಯಸ್ಯ**
**ಬಲಾಧಿಕ್ಯೇ ಕಿಮು ವಕ್ತವ್ಯಮತ್ರ**
**ವಿಷ್ಣೋರಾಧಿಕ್ಯೇ ಕ್ಷತ್ರಿಯಾಣಾಂ ಪ್ರಮಾಣಂ**
**ಬಲಂ ವಿಪ್ರೇ ಜ್ಞಾನಮೇ ವೇತಿ ಚಾಹುಃ ॥೨೩॥**

ಈ ರೀತಿ ಪ್ರತ್ಯಕ್ಷವಾಗಿ ವಿಷ್ಣುಭಕ್ತನ ಬಲವು ಕಂಡುಬಂದಿದೆ. ಭಕ್ತನ ಬಲವೇ ಅಧಿಕವಿದ್ದಾಗ, ವಿಷ್ಣುವಿನ ಬಲವು ಅಧಿಕವೆಂದು ಬೇರೆ ಹೇಳಬೇಕೇ? ಕ್ಷತ್ರಿಯರಿಗೆ ವಿಷ್ಣು ಪದಾಶ್ರಯ ಬಲವೇ ಪ್ರಮಾಣವು. ಬ್ರಾಹ್ಮಣರಿಗೆ ವಿಷ್ಣುವಿನ ಜ್ಞಾನವೇ ಅಧಿಕ ಬಲವು. ಎಂಬುದು ಬಲ್ಲವರ ವಿಚಾರ (ಇದು ಸ್ವರೂಪಾಧಿಕ್ಯಕ್ಕೂ ಅನ್ವಯಿಸುತ್ತದೆ.)

**ಮಯಾ ಕೇದಾರೇ ವಿಪ್ರರೂಪೀ ಜಿತಶ್ಚ**
**ರುದ್ರೋಽವಿಶಲ್ಲಿಂಗ ಮೇವಾಶು ಭೀತಃ**
**ತತಃ ಪರಂ ವೇದವಿದಾಮಗಮ್ಯೈ ತಾಂ**
**ಶಾಪಂ ಪ್ರಾದಾಚ್ಛಂ ಕರೋ ವ್ರೀಡಿತೋಽತ್ರ** ॥೨೪॥

ಆದೇ ರುದ್ರನು ಮತ್ತೊಂದು ಸಲ ವಿಪ್ರನ ರೂಪದಲ್ಲಿ ಕೇದಾರದಲ್ಲಿ ಬಂದು ನನ್ನೊಡನೆ (ವಾಗ್ಯುದ್ಧದಲ್ಲಿ) ಸೋತನು. ಲಜ್ಜಿತನಾದನು. ಅನಂತರ 'ವೈದವಿದರಿಗೆ ಅಲ್ಲಿಗೆ ಬರಲು ಅಶಕ್ಯವಾಗಲಿ' ಎಂದು ಆ ಸ್ಥಳಕ್ಕೆ ಶಾಪವಿತ್ತನು. (ಇಂದಿಗೂ ಅದು ಸಂಚಾರಕ್ಕೆ ಕಷ್ಟ ಸಾಧ್ಯವಾಗಿದೆ.)

**ಏವಂ ಪ್ರತ್ಯಕ್ಷೇ ವಿಷ್ಣು ಬಲೇ ಪ್ರತೀಪಂ**
**ಮನೋ ಯಸ್ಯ ಹ್ಯುತ್ತರಂ ಸ ಬ್ರವೀತು**
**ಕ್ರೋಧಾಧಿಕಶ್ಚೇತಾ ಕ್ಷಿಪ್ರಮಾಯಾತು ಯೋದ್ಧು**
**ಮಿತ್ಯುಕ್ತಾಸ್ತೇಽಭ್ಯಾಯ ಯುರಾತ್ತ ಶಸ್ತ್ರಾಃ** ॥೨೫॥

ನಾನು ವಿಷ್ಣುಭಕ್ತನಾದುದರಿಂದ, ನನ್ನಲ್ಲಿರುವ ಬಲವನ್ನು ವಿಷ್ಣುವಿನ ಬಲದ ಪ್ರತಿಬಿಂಬವೆಂದೇ ಭಾವಿಸಿ, ಇದಕ್ಕೆ ವಿರೋಧಿಗಳು ಯಾರಾದರೂ ಇದ್ದರೆ ಉತ್ತರಿಸಲಿ. ಅಥವಾ ಬಲ ಪರೀಕ್ಷಿಸಲಿ ಎಂದು ಭೀಮಸೇನನು ಹೇಳಿದಾಗ ಎದುರಾಳಿಗಳು ನಿರುತ್ತರರಾದರು. ಅವರು ಕ್ರೋಧದಿಂದ ಕೂಡಲೇ ಶಸ್ತ್ರಧಾರಿಗಳಾಗಿ ಯುದ್ಧಕ್ಕೆ ಬಂದರು.

**ವಿದ್ರಾವ್ಯ ತಾನ್ ಬಾಣಸಂಘೈಃ ಸಮಸ್ತಾನ್**
**ಜರಾಸುತಂ ಗದಯಾ ಪೋಥ (ಯೋಧ) ಯಿತ್ವಾ**
**ಬಾಹು ಭ್ಯಾಂ ಚೈನಂ ಪರಿಗೃಹ್ಯಾಶು ವಿಷ್ಣೋಃ**
**ಪ್ರಾದೋತ್ಥಾಯಾಂ ಪ್ರಾಕ್ಷಿ ಪದ್ದೇವನದ್ಯಾಮ್** ॥೨೬॥

ಎಲ್ಲ ಬಾಣಗಳನ್ನು ಕತ್ತರಿಸಿ ಭೀಮಸೇನನು ಅವರನ್ನು ಓಡಿಸಿದನು. ಜರಾಸುತನನ್ನು ಯುದ್ಧದಲ್ಲಿ ಗದೆಯಿಂದ ಹೊಡೆದು ಕೆಡಹಿ, ತನ್ನ ಬಾಹುಬಲದಿಂದ ಹಿಡಿದು ಹತ್ತಿರದಲ್ಲಿಯೇ ಹರಿವ ಗಂಗಾನದಿಯಲ್ಲಿ ಒಗೆದನು.

**ಸ ವ್ರೀಡಿತಃ ಪ್ರಾಯಯೌ ಮಾಗಧಾಂಶ್ಚ**
**ಭೂ ಪೈ ಸಮೇತೋ ಭೀಮಸೇನೋ ರಥಂ ಸ್ವಂ**
**ಆರುಹ್ಯ ಕಾಶೀಶ್ವರ ಪೂಜಿತಶ್ಚ**
**ಯಯೌ ಕಾಲ್ಯಾ ಶಕ್ರಸನಾಮಕಂ ಪುರಮ್** ॥೨೭॥

ಜರಾಸಂಧನು, ನಾಚಿಕೆಗೊಂಡು, ತನ್ನ ಇತರ ರಾಜರೊಂದಿಗೆ ಮಗಧ ರಾಜಧಾನಿಗೆ ನಡೆದನು. (ಓಡಿದನು). ಇತ್ತ ಭೀಮಸೇನನು ಕಾಶೀ ರಾಜನಿಂದ ಪೂಜಿತನಾಗಿ, ತನ್ನ ರಥದಲ್ಲಿ ಕಾಶಿರಾಜನ ಮಗಳು 'ಕಾಲೀ'ಯನ್ನು ಕೂಡಿಸಿಕೊಂಡು ಇಂದ್ರಪ್ರಸ್ಥಕ್ಕೆ ಬಂದನು.

ವಿ.ವಿ. : ಮೇಲಿನ ನಾಲ್ಕಾರು ಶ್ಲೋಕಗಳಲ್ಲಿ ನಾವು ಅರಿಯಬೇಕಾದ ವಿಷಯ—

೧) ಅಂದಿನ ಸಾಮಾಜಿಕ ಪರಿಸ್ಥಿತಿ – ಶೈವರಲ್ಲಿ, ವೈಷ್ಣವರಲ್ಲಿ ಏರಾಟ ಇದ್ದಿತು. ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರು. ಸಾತ್ವಿಕರ ಮತ್ತು ತಾಮಸಗಳ ಗುಂಪುಗಳು ಬೆಳೆದಿದ್ದವು. ಜೊತೆಯಲ್ಲಿ ಅಂದಿನ ಜನರು ಶಸ್ತ್ರ ಮತ್ತು ಶಾಸ್ತ್ರ ಎರಡರಲ್ಲೂ ನಿಪುಣರಾಗಿದ್ದರು. ಇಂದು ಎರಡೂ ಇಲ್ಲದಾಗಿದೆ. ಗಮನಿಸ ಬೇಕಾದ ವಿಷಯ.

೨) ಹಿಂದೆ ಅರ್ಜುನನ ಕೀರ್ತಿಯನ್ನು ಹರಡಿಸಲು ಕಿರಾತನ ರೂಪದಿಂದ ಬಂದು ಯುದ್ಧ ಮಾಡಿ ಸೋತು, ಪ್ರೀತನಾಗಿ ಪಾಶುಪತಾಸ್ತ್ರವನ್ನಿತ್ತನು. ಇಲ್ಲಿ ಭೀಮನಿಗೆ ಕೀರ್ತಿ ತರಲು, ವ್ಯಾಘ್ರ ಮತ್ತು ಶಾರ್ದೂಲ ರೂಪದಿಂದ ಬಂದು ಹೋರಾಡಿರಬಹುದೇ?

೩) ವ್ಯಾಘ್ರ ಮತ್ತು ಶಾರ್ದೂಲ ಲಿಂಗಗಳಿಗೂ ಪೌರಾಣಿಕ ಹಿನ್ನೆಲೆ ದೊರೆಯಿತು. ದಕ್ಷಿಣದಲ್ಲಿ ರಾಮೇಶ್ವರನಿಗೆ ದೊರೆತಿಲ್ಲವೇ? ಹಾಗೆ ಇದು ಒಂದು ದೃಷ್ಟಿ.

೪) ಶಿವ ಎಂದರೆ ಮಂಗಲ, ಶುಭ, ಕಲ್ಯಾಣ. ವ್ಯಾಘ್ರ, ಶಾರ್ದೂಲ ಇವು ಕ್ರೂರ ಸ್ವಭಾವ. ತಾಮಸ ವೃತ್ತಿಯಿಂದ ಕೂಡಿದವು. ಇವು ಇದ್ದಾಗ ಶುಭ ಸಾಧಿಸುವುದು, ಕಲ್ಯಾಣ ಹೊಂದುವುದು ಕಷ್ಟ.

೫) ತಾರತಮ್ಯದ ದೃಷ್ಟಿಯಿಂದ ನೋಡಿದಾಗ ಭೀಮಸೇನ ವಾಯುವಿನ ಅವತಾರ. ಮಹಾರುದ್ರರು ವಾಯುವಿನಕ್ಕಿಂತ ಕೆಳ ಪಕ್ಷದವರು. ಅಂದಮೇಲೆ ಯಾವ ರೂಪದಿಂದ ಬಂದರೂ ಸೋಲಾಗುವುದು ನಿಶ್ಚಿತ. ಅದಕ್ಕಾಗಿ ಸೋತಿದ್ದಾರೆ.

೬) ಒಮ್ಮೊಮ್ಮೆ ಅಸುರಾವೇಶ ಬಲದಿಂದ ಹೀಗಾಗುವುದುಂಟು. ಗಂಗೆಯೂ ವಿಷ್ಣುವಿನ ಪಾದದಿಂದ ಹುಟ್ಟಿದ್ದರೂ, ಆತನ ಪೂಜೆಗೆಯೇ ವಿಘ್ನ ತರುವ ಬುದ್ಧಿ ಹುಟ್ಟಿತು. ರುದ್ರ ದೇವರಿಗೆ ವಾಯುವಿನೊಡನೆ ಕಾದಾಡುವ ಬುದ್ಧಿ ಹುಟ್ಟಿತು. ಇವೆಲ್ಲಕ್ಕೂ ಆವೇಶವೇ ಕಾರಣ – ಆದರೆ ವಾಯು ದೇವರಿಗೆ ಈ ಆವೇಶದ ಸೋಂಕೂ (ಪ್ರಭಾವ) ಆಗುವದಿಲ್ಲ. ಏಕೆಂದರೆ ಅವರು ಅಭಿನ್ನ ಭಕ್ತರು.

**ತಸ್ಯಾಂ ತ್ರಿಲೋಕಾಧಿಕ ರೂಪ ಸದ್ಗುಣ್ಯಾ—**
**ಕಾಲ್ಯಾಮ್ಮ (ಮ್ಯಾ) ತಾಯಾಂ ರಮಮಾಣಸಿ ಸುತಂ ಚ**
**ಶರ್ವತ್ರಾತಂ ಸಾಮಾಜಯತ್ಸುವಾ ಯಃ**
**ಸ ಮಾನ ವಾಯುರ್ಬಲ ವೀರ್ಯಯುಕ್ತಃ ॥೨೮॥**

'ಕಾಲೀ' ದೇವಿ ತ್ರಿಲೋಕಸುಂದರಿ ಮತ್ತು ಸದ್ಗುಣಿಯೂ ಆಗಿದ್ದಳು. ಭೀಮಸೇನ ದೇವರು ಆಕೆಯೊಡನೆ ರಮಿಸಿ ಕಾಲ ಕಳೆಯುತ್ತಿರುವಾಗ ಆಕೆಯ ಉದರದಲ್ಲಿ 'ಶರ್ವತ್ರಾತ' ಎಂಬ ಮಗನು ಹುಟ್ಟಿದನು. ಅವನು ಬಲ ಮತ್ತು ವೀರ್ಯದಲ್ಲಿ ವಾಯುವಿಗೆ ಸಮಾನನಾಗಿದ್ದನು.

ಇಲ್ಲಿಂದ ಹರಿವಂಶ ಪ್ರಾರಂಭಿಸುತ್ತಾರೆ.

**ಕೃಷ್ಣೋऽಪಿ ಗತ್ವಾ ದ್ವಾರವತೀಂ ಸರಾಮಃ**
**ಹತ್ವಾ ಪಿತುರ್ವಧ ಕರ್ತಾರ ಮೇವ**
**ಶತಧನ್ವಾಖ್ಯಂ ಹಂತು ಮೈ ಚ್ಛತ್ಸ ಚೈವ**
**ಯಯಾಚೇऽಕ್ರೂರಂ ಕೃತವರ್ಮಾನುಯುಕ್ತಮ್ ||೨೯||**

ಶ್ರೀಕೃಷ್ಣನು ಇಂದ್ರಪ್ರಸ್ಥದಿಂದ ದ್ವಾರಾವತಿಗೆ ಬಂದನು. ಸತ್ಯಭಾಮೆಯ ತಂದೆಯನ್ನು ಕೊಂದ ಶತಧನ್ವನನ್ನು ಕೊಲ್ಲಲು ನಿಶ್ಚಯಿಸಿದನು. ಇದನ್ನು ತಿಳಿದ ಶತಧನ್ವನು, ಕೃತವರ್ಮನಿಂದ ಯುಕ್ತನಾದ ಅಕ್ರೂರನ ಸಹಾಯ ಯಾಚಿಸಿದನು.

**ತಾವಬ್ರೂತಾಂ ಸರ್ವಲೋಕೈಕಕರ್ತುಃ**
**ನಾವಾಂವಿರೋಧಂ ಮನಸಾಪಿ ಕುರ್ವಃ**
**ಕೃಷ್ಣಸ್ಯ ಸರ್ವೇಶಿ ತುರಿತ್ಯನೂಕ್ತ**
**ಆರುಹ್ಯ ಚಾಶ್ವೀಂ ಭಯತಃ ಪರಾದ್ರವತ್ ||೩೦||**

"ಸಕಲ ಲೋಕೈಕಕರ್ತುವಾದ ಶ್ರೀಕೃಷ್ಣನ ವಿರೋಧವನ್ನು ಪ್ರತ್ಯಕ್ಷದಲ್ಲಿ ಮನಸ್ಸಿನಿಂದಲೂ ಮಾಡಲಾರೆವು" ಎಂದು ಆ ಇಬ್ಬರು ಸ್ಪಷ್ಟವಾಗಿ ಹೇಳಿದರು. ಆಗ ಶತಧನ್ವನು ಭಯದಿಂದ ಅಲ್ಲಿಯೇ ಸಿಕ್ಕ ಒಂದು ಹೆಣ್ಣು ಕುದುರೆಯನ್ನು ಏರಿ ಹೊರಟುಹೋದನು.

**ಅನ್ವೇವ ತಂ ಕೃಷ್ಣ ರಾಮೌ ರಥೇನ**
**ಯಾತೌ ಶತಂ ಯೋಜನಾನಾಂ ದಿನೇವ**
**ಗತ್ವಾ ಮೃತಾಯಾಂ ಬಡವಾಯಾಂ ಪದ್ಭೈವ**
**ಸಂ ಪ್ರಾದ್ರ ವತ್ಕೃಷ್ಣ ಏನಂ ಪದಾಗಾತ್ ||೩೧||**

ಬಲರಾಮ ಶ್ರೀಕೃಷ್ಣರು ರಥದಲ್ಲಿ ಕುಳಿತು ಶತಧನ್ವನನ್ನು ಬೆನ್ನು ಹತ್ತಿದರು. ಆ ಶತಧನ್ವನು ದಿನ ಒಂದಕ್ಕೆ ನೂರು ಯೋಜನ ವೇಗದಿಂದ ಕುದುರೆಯ ಮೇಲೆ ಓಡಿದನು. ದಾರಿಯಲ್ಲಿ ಕುದುರೆ ಸತ್ತಿತು. ಆದರೂ ಕಾಲು ನಡಿಗೆಯಲ್ಲಿಯೇ ಓಡಿದನು. ಕೃಷ್ಣನೂ ಬಲರಾಮನನ್ನು ರಥದಲ್ಲಿ ಬಿಟ್ಟು ತಾನು ಪಾದಚಾರಿಯಾಗಿ ಬೆನ್ನು ಹತ್ತಿದನು.

**ಛಿತ್ವಾ ಶಿರಸ್ತಸ್ಯ ಚಕ್ರೇಣ ಕೃಷ್ಣೋ**
**ಜಾನನ್ನ ಕೂರೇ ಮಣಿಮೇತೇನದತ್ತಂ**
**ಅಪ್ರಜ್ಞವಲ್ಲೋಕ ವಿಡಂಬನಾಯ**
**ಪರೀಕ್ಷ್ಯ ವಾಸೋऽತ್ರ ನೇತ್ಯಾಹ ರಾಮಮ್ ||೩೨||**

ಶ್ರೀಕೃಷ್ಣನು ಶತಧನ್ವನ ತಲೆಯನ್ನು ತನ್ನ ಚಕ್ರದಿಂದ ಕತ್ತರಿಸಿದನು. ಅವನಿಂದ ಆ ಮಣಿಯು ಅಕ್ರೂರನಲ್ಲಿ ಇಡಲ್ಪಟ್ಟಿದೆ ಎಂದು ತಿಳಿದವನಾದರೂ ಅಜ್ಞನಂತೆ, ಲೋಕ ವಿಡಂಬನಕ್ಕಾಗಿ, ಶತಧನ್ವನ ವಸ್ತ್ರಗಳಲ್ಲಿ ಹುಡುಕಿ "ಮಣಿಯು ಇಲ್ಲ" ಎಂದು ಬಲರಾಮನಿಗೆ ಹೇಳಿದನು.

**ಅವಿಶ್ವಾಸಾತ್ಸ ತು ಸಕ್ರೋಧ ಏವ**
**ಯಯೌ ವಿದೇಹಾನವ ಸತ್ಪಂಚ ಚಾಬ್ದಾನ್**
**ಜಾನನ್ ಪಾರ್ಥೇ ಭ್ಯೋಽಹಾರ್ಯ ತಾಂ ಕೇಶವಸ್ಯ**
**ವಶೀಕರ್ತುಂ ಧಾರ್ತರಾಷ್ಟ್ರೋ ಬಲಂ ಗಾತ್ ||೩೩||**

ಬಲರಾಮನು ಕೃಷ್ಣನ ಮಾತಿನಲ್ಲಿ ಅವಿಶ್ವಾಸ ಮಾಡಿದನು. ಅಲ್ಲಿಂದ ಅವನು ವಿದೇಹ ನಗರಕ್ಕೆ ಬಂದನು. ಅಲ್ಲಿ ಐದುವರ್ಷ ವಾಸ ಮಾಡಿದನು. ಪಾಂಡವರಲ್ಲಿ ಮತ್ತು ಶ್ರೀಕೃಷ್ಣರಲ್ಲಿ ಸ್ನೇಹ ತಪ್ಪಿಸುವುದು ಸಾಧ್ಯವಿಲ್ಲವೆಂದು ದುರ್ಯೋಧನನು ಮೊದಲೇ ಅರಿತಿದ್ದನು. ಈಗ ಬಲರಾಮ–ಕೃಷ್ಣರಲ್ಲಿ ವೈಮನಸ್ಸು ಹುಟ್ಟಿದೆ. ಇದನ್ನು ಉಪಯೋಗಿಸಿ ಬಲರಾಮನನ್ನು ತಾನು ವಶಪಡಿಸಿಕೊಳ್ಳಬೇಕೆಂದು ದುರ್ಯೋಧನನು ಮಿಥಿಲಾ ನಗರಕ್ಕೆ ಬಂದನು.

**ಬಭೂವ ಶಿಷ್ಯೋಽಸ್ಯ ತಥಾ ಗದಾಯಾ–**
**ಮಸನ್ನಿಧಾನಂ ಕೇಶವಸ್ಯ ಪ್ರತೀಕ್ಷನ್**
**ತದೇ ಯಯಾಚೇ ಭಗಿನೀಂ ಚ ತಸ್ಯ**
**ಸ ಚ ಪ್ರತಿಜ್ಞಾ ಮಕರೋತ್ಪ್ರದಾನೇ ||೩೪||**

ದುರ್ಯೋಧನನು ಅಲ್ಲಿಗೆ ಬಂದು ಬಲರಾಮನ ಶಿಷ್ಯನಾದನು. ಐದು ವರ್ಷ ಗದಾವಿದ್ಯೆ ಅಭ್ಯಾಸ ಮಾಡಿದನು. ಒಂದುದಿನ ಕೃಷ್ಣನು ಇಲ್ಲದ ಸನ್ನಿವೇಶವನ್ನು ಕಂಡು, ಬಲರಾಮನ ತಂಗಿಯನ್ನು ತನಗೆ ಮದುವೆ ಮಾಡಿಕೊಡಲು ಕೇಳಿದನು. ಬಲರಾಮನು ತಂಗಿಯನ್ನು ಕೊಡುವುದಾಗಿ ಪ್ರತಿಜ್ಞೆಯನ್ನೂ ಮಾಡಿದನು.

**ವಿ. ವಿ. :** ಬಲರಾಮ ಶೇಷನ ಅವತಾರ. ಶ್ರೀಹರಿಯ ಸಾಕಷ್ಟು ಸೇವೆಯನ್ನೂ ಮಾಡಿದ್ದಾನೆ. ಆತನ ಸ್ವಭಾವವನ್ನೂ ಚೆನ್ನಾಗಿ ಅರಿತಿದ್ದಾನೆ. ಆದರೂ ಈಗ ಶ್ರೀಕೃಷ್ಣನ ಮೇಲೆ ಆತನ ಮೇಲೆ ಅವಿಶ್ವಾಸ ತೋರಿದ್ದಾನೆ. ಇದಕ್ಕೆ ಕಾರಣ ಅಸುರಾವೇಶ–

ಅಷ್ಟೇ ಅಲ್ಲ. ಶ್ರೀಕೃಷ್ಣನ ಮನಸ್ಸಿನ ವಿರುದ್ಧ ದುರ್ಯೋಧನನನ್ನು ಶಿಷ್ಯನನ್ನಾಗಿಯೂ ಒಪ್ಪಿ ಗದಾ ವಿದ್ಯೆಯನ್ನು ಕಲಿಸಿದ್ದಾನೆ. ಅದಕ್ಕೂ ಮುಂದೆ ಹೋಗಿ ಶ್ರೀಕೃಷ್ಣನನ್ನು ವಿಚಾರಿಸದೆಯೇ ತಂಗಿಯನ್ನು ದುರ್ಯೋಧನನಿಗೆ ಕೊಡಲು ಒಪ್ಪಿದ್ದಾನೆ.

ಇಷ್ಟೆಲ್ಲಕ್ಕೂ ಕಾರಣ ಮಣಿಯ ಮೇಲಿರುವ ದುರಾಶೆ, ಕೃಷ್ಣನ ಬಗೆಗೆ ಇರುವ ಅಜ್ಞಾನ ಎಂದು ಹೇಳಿದರೆ ಸತ್ಯಕ್ಕೆ ಅಪಚಾರ ಆಗಲಿಕ್ಕಿಲ್ಲ.

ದುರ್ಯೋಧನನು ಅಷ್ಟಕ್ಕೆ ಬಿಡದೆ ಬಲರಾಮನಿಂದ ಪ್ರತಿಜ್ಞೆಯನ್ನೂ ಮಾಡಿಸಿದನು.

**ಜ್ಯೇಷ್ಠಂ ಹ್ಯೇನಂ ಕೇಶವೋ ನಾತಿವರ್ತೇತ್**
**ಇತ್ಯೇವ ಮೇನಂ ಧಾರ್ತರಾಷ್ಟ್ರೇಣ ತಸ್ಮಾತ್**
**ಜಗ್ರಾಹ ಹಸ್ತಂ ದಕ್ಷಿಣಂ ಸತ್ಯಹೇತೋಃ**
**ದದೌ ಚ ರಾಮಃ ಕರಮಸ್ಮೈ ಹಲಾಂಕಮ್ ||೩೫||**

ಬಲರಾಮನು ಹಿರಿಯನು. ಕೃಷ್ಣನು ಬಲರಾಮನ ಮಾತನ್ನು ಮೀರಲಿಕ್ಕಿಲ್ಲ ಎಂದು ದುರ್ಯೋಧನನು ಬಗೆದನು. ಅದೇ ರೀತಿಯಾಗಿ ನಾನು ಹಿರಿಯನು ನನ್ನ ಮಾತನ್ನು ನನ್ನ ತಮ್ಮನಾದ ಕೇಶವನು ಮೀರಲಿಕ್ಕಿಲ್ಲ ಎಂದು ಬಲರಾಮನೂ ಬಗೆದನು. ಅದಕ್ಕಾಗಿ ಆಡಿದ ಮಾತನ್ನು ಸತ್ಯ ಮಾಡುವುದಕ್ಕಾಗಿ ಕೌರವನು ತನ್ನ ಕೈಯನ್ನು ಮುಂದೆ ಚಾಚಿದನು. ಬಲರಾಮನು ಕೂಡ ನೇಗಿಲ ಚಿನ್ಹೆಯುಳ್ಳ ತನ್ನ ಕೈಯನ್ನು ದುರ್ಯೋಧನನ ಕೈಯ ಮೇಲಿಟ್ಟನು.

**ಕೈಯ ಮೇಲೆ ಕೈಯಿಟ್ಟು ಹೇಳುವುದೆಂದರೆ ಶಪಥ ಮಾಡಿದಂತೆ.**

**ರೂಪೇಣ ತಸ್ಯಾ ಮೋಹಿತೋ ಧಾರ್ತರಾಷ್ಟ್ರೋ**
**ವಿಶೇಷತಃ ಕೃಷ್ಣ ರಾಮೌ ಭಗಿನ್ಯಾಃ**
**ಸ್ನೇಹಾ ದ್ವಶಂ ಯಾಸ್ಯತ ಇತ್ಯ ಗೃಹ್ಣಾತ್**
**ಹಸ್ತಂ ಹಲಾಂಕಂ ಹರಿಣೋ ರಿಪುಘ್ನಂ ।।೩೬।।**

ದುರ್ಯೋಧನನು ಸುಭದ್ರೆಯ ಸೌಂದರ್ಯಕ್ಕೆ ಮೋಹಿತನಾಗಿದ್ದನು. ಇದಲ್ಲದೆ, ಬಲರಾಮ–ಶ್ರೀಕೃಷ್ಣರು ತಮ್ಮ ತಂಗಿಯ ಮೇಲಿನ ಪ್ರೇಮದಿಂದ, (ಇವರು) ನನಗೂ ವಶರಾಗುತ್ತಾರೆ ಎಂದು ಬಗೆದು ಶತ್ರುಗಳನ್ನು ನಾಶಗೈವ ಸಾಮರ್ಥ್ಯವುಳ್ಳ, ನೇಗಿಲ ಚಿನ್ಹೆ ಇರುವ ಬಲರಾಮನ ಕೈಯನ್ನು ಹಿಡಿದನು.

**ಸುಭದ್ರೆಯ ಮೂಲ ಸ್ವರೂಪ –**

**ಜಾತಾ ದೇವಕ್ಯಾಂ ಸಾ ಸುಭದ್ರೇತಿ ನಾಮ್ನಾ**
**ಭದ್ರಾ ರೂಪೇಣಾ ನ ಕದುಂದು ಭೇಸ್ತಾಂ**
**ಕೃತ್ವಾ ಪುತ್ರೀಂ ರೋಹಿಣೀ ಸ್ವಾಮರಕ್ಷತ್**
**ಪೂರ್ವಂ ತು ಯಾನೀ ತ್ರಿಜಟೈವ ನಾಮ್ನಾ ।।೩೭।।**

ಮೊದಲು ರಾಮಾಯಣ ಕಾಲದಲ್ಲಿ, ಸೀತೆಗೆ ಸಹಾಯ ಮಾಡಿ, ಸೇವೆಗೈದ ತ್ರಿಜಟೆಯೆಂಬ ರಾಕ್ಷಸಿಯೇ ಇಂದು ವಸುದೇವನ ಮಡದಿ ದೇವಕಿಯ ಉದರದಲ್ಲಿ ಮಗಳಾಗಿ ಹುಟ್ಟಿದ್ದಾಳೆ. ಅವಳೇ ಸುಭದ್ರೆಯು. ಆ ಸುಭದ್ರೆಯನ್ನೇ ವಸುದೇವನ ಇನ್ನೊಬ್ಬ ಹೆಂಡತಿ ರೋಹಿಣಿಯು ತನ್ನ ಮಗಳನ್ನಾಗಿ ರಕ್ಷಿಸಿದ್ದಾಳೆ.

**ಸೀತಾಯಾಃ ಪ್ರಾಪ್ಯಂತ್ಯ ಶುಶ್ರೂಷಣಾತ್ಸಾ**
**ಬಭೂವ ವಿಷ್ಣೋರ್ಭಗಿನೀ ಪ್ರಿಯಾ ಚ**
**ಉಮಾವೇಶಾ ದ್ರೂಪ ಗುಣೋಪ ಪನ್ನಾ**
**ಪದವಿಷಣಾ ಚಂಪಕದಾಮಗೌರೀ ।।೩೮।।**

ಇಂದಿನ ಸುಭದ್ರೆಯು ಮೊದಲು ಸೀತಾದೇವಿಯರ ಸೇವೆಯನ್ನು ಭಕ್ತಿ ಪೂರ್ವಕ (ವಾಗಿ) ಮಾಡಿದುದರಿಂದ, ವಿಷ್ಣುವಿಗೆ ಪ್ರೀತಿಯ ತಂಗಿಯಾಗಿ ಹುಟ್ಟಿದ್ದಾಳೆ. ಪಾರ್ವತಿ ದೇವಿಯರ ಆವೇಶವಿರುವುದು, ಒಳ್ಳೆಯ ಗುಣೆಯೇ, ಕಮಲದಂತೆ ಕಣ್ಣುಳ್ಳವರು, ಸಂಪಿಗೆ ಹೂವಿನ ಬಣ್ಣದಿಂದ ಕೂಡಿದ ಸುಂದರಿಯೂ ಆಗಿದ್ದಾಳೆ.

ವಿ. ವಿ. : "ದೊಡ್ಡವರ ಸೇವೆಯು ಎಂದೂ ವ್ಯರ್ಥ ಹೋಗುವುದಿಲ್ಲ. ಅದರಲ್ಲೂ ಶ್ರೀಲಕ್ಷ್ಮೀ ದೇವಿಯರ ಸೇವೆ ವ್ಯರ್ಥವಾದೀತೇ? ಅಂತೆಯೇ ರಾಮಾಯಣದ ಕಾಲದಲ್ಲಿ ರಾಕ್ಷಸಿಯಾಗಿ ಕುರೂಪಿಯಾಗಿದ್ದರೂ, ಕೃಷ್ಣಾವತಾರದಲ್ಲಿ ಸುರೂಪಿಯಾಗಿ, ಒಳ್ಳೆಯ ಗುಣೆಯಾಗಿ ಶ್ರೀಕೃಷ್ಣನ ತಂಗಿಯಾಗಿ ಅವತರಿಸಿದ್ದಾಳೆ.

**ಏತತ್ಕೃತ್ವಾ ಧೃತರಾಷ್ಟ್ರಾತ್ಮಜಃ ಸ**
**ಯಯೌ ಕುರೂನ್ನಿವ ಸತ್ಯತ್ರ ರಾಮೇ**
**ಕೃಷ್ಣೋಽಕ್ರೂರಂ ವಿಪಸಂತಂ ಭಯೇನ**
**ಸಹಾರ್ದಿಕ್ಯಂ ಚಾನಯಿತ್ವಾ ಜಗಾದ ॥೩೯॥**

ದುರ್ಯೋಧನನು, ಬಲರಾಮನಿಂದ ಈ ರೀತಿ ಪ್ರತಿಜ್ಞೆಗೈಸಿ, ತಾನು ತನ್ನ ಕುರು ದೇಶಕ್ಕೆ ಬಂದನು. ಬಲರಾಮನು ಅಲ್ಲಿಯೇ ಇದ್ದನು. ದ್ವಾರಾವತಿಯಲ್ಲಿ, ಕೃಷ್ಣನ ಭಯದಿಂದ ಬೇರೆಡೆಯಲ್ಲಿದ್ದ ಕೃತವರ್ಮ ಮತ್ತು ಅಕ್ರೂರರನ್ನು ಕರೆಯಿಸಿ ಈ ರೀತಿಹೇಳಿದನು.

**ಆನೀಯ ರಾಮಂ ಚ ಸಮಸ್ತ ಸಾತ್ವತಾಂ**
**ಯಾದವಾದೀತ್ ಕೇಶವ ಸನ್ನಿಧಾನೇ**
**ಮಣಿಸ್ತ್ವಯ್ಯಾಸ್ತೇ ದರ್ಶಯೇತ್ಯೇವ ಭೀತ**
**ಸ್ತದಾ ಕ್ರೋರೋಽದರ್ಶಯದ್ರತ್ನ ಮಸ್ಮೈ ॥೪೦॥**

ಶ್ರೀಕೃಷ್ಣನು ಬಲರಾಮನನ್ನು ಕರೆಯಿಸಿದನು. ಸಮಸ್ತ ಯಾದವ ಮತ್ತ ಇತರ ಸಜ್ಜನರ ಸಮ್ಮುಖದಲ್ಲಿ ಅಕ್ರೂರನನ್ನು ಕರೆದು "ನಿನ್ನ ಹತ್ತಿರ ಇರುವ ಮಣಿಯನ್ನು ಸಭೆಗೆ ತೋರಿಸು" ಎಂದಾಗ ಅಕ್ರೂರನು ಭೀತನಾಗಿ ತನ್ನಲ್ಲಿರುವ ಮಣಿಯನ್ನು ಸಭೆಯಲ್ಲಿಟ್ಟನು.

**ಅವ್ಯಾಜ ತಾಮಾತ್ಮನೋ ದರ್ಶಯಿತ್ವಾ**
**ಹಲಾಯುಧೇ ಕೇಶವಸ್ತಸ್ಯ ಜಾನನ್**
**ರತ್ನಾ ಕಾಂಕ್ಷಾಮುಗ್ರ ಸೇನಸ್ಯ ಚೈವ**
**ಮಾತುಶ್ಚ ಸಾಂಬಸ್ಯ ಪುನರ್ಬಭಾಷೇ ॥೪೧॥**

ಶ್ರೀಕೃಷ್ಣನು ತಾನು ಕಪಟಿಯಲ್ಲ ಎಂಬುದನ್ನು ಬಲರಾಮನಿಗೆ ತೋರಿಸಿ ಕೊಟ್ಟನು. ನಂತರ ಬಲರಾಮ, ಉಗ್ರಸೇನ, ಸಾಂಬ ಮತ್ತು ಆತನ ತಾಯಿ (ಜಾಂಬವತಿ) ಎಲ್ಲರಿಗೂ ಆ ಮಣಿಯ ಮೇಲೆ ಆಶೆಯಿದೆ ಎಂದು ತಿಳಿದು ಪುನಃ ಹೀಗೆ ಹೇಳಿದನು.

**ಆಸ್ತಾ ಮಕ್ರೂರೇ ಮಣಿರನ್ಯೈರಧಾರ್ಯ**
**ಸದಾ ಯಜ್ವಾದ್ದಾಪತೇಃ ಸಧಾರ್ಯಃ**
**ನ ಸತ್ಯಾ ಕೃಷ್ಣಾವಾಂ ಧಿತಂ ಕಿಂಚಿಚ್ಚೇತ್**
**ತಥಾಪಿ ತಸ್ಯಾ ಯೋಗ್ಯ ಇತ್ಯಾಹ ಕೃಷ್ಣಃ ॥೪೨॥**

ಈ ಮಣಿಯು ಅಕ್ರೂರನಲ್ಲಿಯೇ ಇರಲಿ. ಇತರರು ಯಾರೂ ಇದನ್ನು ಧರಿಸಲಾರರು. ಏಕೆಂದರೆ, ಸದಾ ಯಜ್ಞ, ಯಾಗಾದಿಗಳನ್ನು ಮಾಡುವವನು. ದಾನ

ಮಾಡುವವನೇ ಇದನ್ನು ಧರಿಸಲು ಯೋಗ್ಯನು. ಅಕ್ರೂರನಿಗೆ ಆ ಯೋಗ್ಯತೆಯಿದೆ ಎಂದು ಹೇಳಿದನು.

ಶ್ರೀಕೃಷ್ಣನು ಇಚ್ಛಿಸದೆ ಇರುವುದನ್ನು ಸತ್ಯಭಾಮೆಯು ಎಂದೂ ಇಚ್ಛಿಸಿರಲಿಲ್ಲ. ಇದನ್ನರಿತ ಶ್ರೀಕೃಷ್ಣನು, ಸತ್ಯಭಾಮೆಗೂ ಈ ಮಣಿ ಯೋಗ್ಯವೇ ಎಂದು ಹೇಳಿದನು.

ವಿ. ವಿ. : ೧) ಇಲ್ಲಿ ಶಮಂತಕ ಮಣಿಯ ಮಹತ್ವ ಗೊತ್ತಾಗುತ್ತದೆ. ಅಲ್ಲದೆ ಜನರ ಸ್ವಭಾವವೂ ಗೊತ್ತಾಗುತ್ತದೆ. ತಮಗೆ ಅರ್ಹತೆ ಇರಲಿ ಬಿಡಲಿ. ಶ್ರೇಷ್ಠವಾದದ್ದು ತಮಗೆ ಬೇಕೆಂಬ ಆಶೆ.

೨) ಪತಿವ್ರತಾ ಸ್ತ್ರೀಯರ ಲಕ್ಷಣ ಪತಿಗೆ ಬೇಡವಾದದ್ದು, ತಮಗೂ ಬೇಡ ಎಂಬ ಭಾವನೆ. ಇದೇ ಭಾವನೆಯನ್ನು ಗಾಂಧಾರಿಯ ಜೀವನದಲ್ಲೂ ಕಾಣುತ್ತೇವೆ.

**ಲಬ್ಧ್ವಾ ರತ್ನಂ ದಾನ ಪತಿಃ ಸದೈವ**
**ಸಂದೀಕ್ಷಿತೋಽಭ್ಯೂದ್ವಜ್ಞ, ಶಮರಣ್ಯ ತಂದ್ರಃ**
**ಪ್ರದರ್ಶ್ಯ ಕೃಷ್ಣೋ ಹಲಿನೇ ರತ್ನಮೇತತ್**
**ಶಕ್ರ ಪ್ರಸ್ಥಂ ಪಾಂಡವ ಸ್ನೇಹತೋಽಗಾತ್ ||೪೩||**

ಮೊದಲೇ ಯಜ್ಞ–ಯಾಗಗಳನ್ನು ಮಾಡುತ್ತ, ದಾನದಲ್ಲಿ ಪ್ರಸಿದ್ಧವಾದ ಅಕ್ರೂರನು, ಮಣಿಯು ದೊರೆತ ಮೇಲೆ ದೀಕ್ಷಿತನಾಗಿ, ತನ್ನ ಹಿಂದಿನ ಕಾರ್ಯಗಳನ್ನು ಕಟ್ಟುನಿಟ್ಟಾಗಿ ಮುಂದುವರಿಸಿದನು. ಶ್ರೀಕೃಷ್ಣನು ಬಲರಾಮನಿಗೆ ರತ್ನದ ವಿಷಯ ತಿಳಿಸಿ, ಪಾಂಡವರಲ್ಲಿ ಸ್ನೇಹವಿದ್ದ ಪ್ರಯುಕ್ತ ಇಂದ್ರಪ್ರಸ್ಥಕ್ಕೆ ನಡೆದನು.

**ವಸನ್ನಜಸ್ತತ್ರ ಬಹೂಂಶ್ಚ ಮಾಸಾನ್**
**ಸ ಫಲ್ಗುನೋಽಯಾನ್ಮೃಗಯಾಂ ಕದಾಚಿತ್**
**ಹತ್ವಾ ಮೃಗಾನ್ಯಮುನಾ ತೀರ ಸಂಸ್ಥಃ**
**ಸೋಽನ್ಯಾಂ ಕಾಲಿಂ ದೀಂ ದದೃಶೇ ತತ್ಸ್ವ ಸಾರಮ್ ||೪೪||**

ಜನನ ರಹಿತನಾದ ಶ್ರೀಕೃಷ್ಣನು ಅಲ್ಲಿ ಬಹು ತಿಂಗಳುಗಳ ವರೆಗೆ ಇದ್ದನು. ಒಂದುದಿನ ಅರ್ಜುನನೊಡಗೂಡಿ ಬೇಟೆಗೆಂದು ನಡೆದನು. ಕೆಲವು ಮೃಗಗಳನ್ನು ಕೊಂದು ಯಮುನಾ ನದಿಯ ತೀರಕ್ಕೆ ಬಂದನು. ಅಲ್ಲಿ ಯಮುನೆಯ ತಂಗಿ ಕಾಲಿಂದಿಯೆಂಬ ಕನ್ನೆಯನ್ನು ಕಂಡನು. (ಅವಳು ಯಮುನಾ ನದಿಯ ಮಗಳಲ್ಲ.)

ಅವಳಾರು ? (ಕಾಲಿಂದೀ ಮದುವೆ)

**ಸಾಸೂರ್ಯಪುತ್ರೀ ಯಮುನಾನುಜಾತಾ**
**ತಪಶ್ಚರಂತೀ ವಿಷ್ಣು ಪತೀಚ್ಛ ಕಾಮಾ**
**ಕೃಷ್ಣಾರ್ಜುನೇನಾಹ ಸಮಸ್ತ ಮೇತತ್**
**ಪತ್ನೀಂ ಚ ತಾಂ ಜಗೃಹೇ ವಾಸುದೇವಃ ||೪೫||**

ಸೂರ್ಯನ ಮಗಳು ಯಮುನೆ. ಆಕೆಯ ತಂಗಿಯೇ ಈ ಕಾಲಿಂದೀ. ಇವಳು ಕೃಷ್ಣನೇ ತನಗೆ ಪತಿಯಾಗಬೇಕೆಂಬ ಇಚ್ಛೆಯಿಂದ ತಪಸ್ಸು ಮಾಡುತ್ತಿದ್ದಳು. ಈ ಎಲ್ಲ ವಿಷಯವನ್ನು ಶ್ರೀಕೃಷ್ಣನು ಅರ್ಜುನನಿಂದ ತಿಳಿದುಕೊಂಡನು. ಆಕೆಯನ್ನು ಪತ್ನಿಯನ್ನಾಗಿಯೂ ಸ್ವೀಕರಿಸಿದನು.

**ತತೋ ಗತ್ವಾ ನಗ್ನಜಿತೋ ಗೃಹಂ ಚ**
**ಸ್ವಯಂವರೇ ಸಪ್ತವೃಷಾನಗೃಹ್ಣಾತ್**
**ಸರ್ವೈ ರಗ್ರಾಹ್ಯಾನಸುರಾನ್ವರೇಣ**
**ಶಿವಸ್ಯ ಯೈರ್ನಿರ್ಜಿತಾ ಭೂಮಿಪಾಲಾಃ** ||೪೬||

ಅಲ್ಲಿಂದ ಶ್ರೀಕೃಷ್ಣನು 'ನಗ್ನಜಿತ' ರಾಯನ ಮನೆಗೆ ಬಂದನು. ಅಲ್ಲಿ ಸ್ವಯಂವರದ ಸಭೆ ನಡೆದಿತ್ತು. "ಏಳೂ ಗೂಳಿಗಳನ್ನು ಹಿಡಿದು ಕಟ್ಟಬೇಕು" ಎಂಬ ಷರತ್ತು ಇತ್ತು. ಅವು ಸಾಮಾನ್ಯ ಗೂಳಿಗಳಲ್ಲ ಅಸುರರೇ ಗೂಳಿಯ ರೂಪಗಳನ್ನು ಧರಿಸಿದ್ದರು. ಅವುಗಳಿಗೆ ಮಹಾರುದ್ರರ ವರವಿದ್ದಿತು. ಕಾರಣ, ಅನೇಕ ರಾಜರು ಪ್ರಯತ್ನಿಸಿದರೂ ಕಟ್ಟಲು ಆಗಿರಲಿಲ್ಲ.

**ತತೋ ನೀಲಾಂ ತಸ್ಯ ಸುತಾಂ ಚ ಲೇಭೇ**
**ಪೂರ್ವಂ ನೀಲಾ ಗೋಪಕನ್ಯಾಪಿ ಯಾಸೀತ್**
**ಸಾ ದೇಹೇಽಸ್ಯಾಃ ಪ್ರಾವಿಶತ್ಪೂರ್ವಮೇಷಾ**
**ಯಸ್ಮಾ ದೇಷಾ ದ್ವಿವಿಧಾ ಸಂಪ್ರಜಾತಾ** ||೪೭||

ಯಶೋದಾದೇವಿಯ ಸಹೋದರ ಕುಂಬಕನೆಂಬ ಗೋಪಾಲಕ ಇದ್ದನು. ಕುಂಭಕನ ಮಗಳು ಮಾದೇವಿ – ಆಕೆಯೂ ಕೃಷ್ಣನನ್ನು ಮದುವೆಯಾಗಬೇಕೆಂದು ಬಯಸಿದ್ದಳು. ಆಕೆಯ ಹೆಸರನ್ನು ಕೆಲವರು ನೀಲಾ ಎಂದೇ ಕರೆಯುತ್ತಾರೆ. ಆ ಕನ್ಯೆ ಈಗ ಈ ನೀಲಾದೇವಿಯ ಶರೀರದಲ್ಲಿ ಪ್ರವೇಶಿಸಿದ್ದಾರೆ. ನೀಲೆಯು ನೋಡಲು ಒಬ್ಬಳೇ ಆದಾಗ್ಯೂ ಎರಡು ರೂಪಗಳು ಆಕೆಯಲ್ಲಡಗಿವೆ. ಆಕೆಯೇ ಈಗ ನಗ್ನಜಿದ್ರಾಜನ ಮಗಳು. ಆಕೆಯನ್ನು ಶ್ರೀಹರಿ ಮದುವೆ ಮಾಡಿಕೊಂಡಿದ್ದಾನೆ.

**ಪಿತೃಷ್ವಸುರ್ಮಿತ್ರಾ ವಿಂದಾಸುತಾ ಚ**
**ಕೃಷ್ಣೇ ಮಾಲಾಮಾಸೃಜದ್ರಾಜ ಮಧ್ಯೇ**
**ವಿಂದಾನುವಿಂದೌ ಭ್ರಾತರಾವೇವ ತಸ್ಯಾ**
**ಸ್ತಷೇಧತಾಂ ಧಾರ್ತರಾಷ್ಟ್ರಾರ್ಥ ಮುಗ್ರೌ** ||೪೮||

ಸೋದರತ್ತೆಯ ಮಗಳು ಮಿತ್ರವಿಂದ. ಆಕೆಯು ಕೂಡ ಎಲ್ಲ ರಾಜರನ್ನು ಬಿಟ್ಟು ಕೃಷ್ಣನಿಗೆ ಮಾಲೆಯನ್ನು ಹಾಕಿದಳು. ವಿಂದಾನುವಿಂದ ಆಕೆಯ ಸಹೋದರರು ಮಹಾಪರಾಕ್ರಮಿಗಳು. ತಂಗಿಯನ್ನು ದುರ್ಯೋಧನನಿಗೆ ಕೊಡಬೇಕೆಂಬುದು ಅವರ ಬಯಕೆಯಾಗಿತ್ತು. ಅದಕ್ಕಾಗಿ ಅವರು ವಿರೋಧಿಸಿದರು.

ಜಿತ್ವಾವಂತ್ಯೌ ನೃಪತೀಂಶ್ಚೈವ ಸರ್ವಾನ್
ಆದಾಯ ತಾಂ ಪ್ರಯಯೌ ವಾಸುದೇವಃ
ಪಿತೃಷ್ವಸುಸ್ತನಯಾಂ ಚ ದ್ವಿತೀಯಾಂ
ಭದ್ರಾಂ ದತ್ತಾ ಮಗ್ರಹೀತ್ ಭ್ರಾತೃಭಿಃ ಸಃ ||೪೯||

ವಿಂದಾನುವಿಂದರು ಆವಂತಿಯಲ್ಲಿರುತ್ತಿದ್ದರು. ಶ್ರೀಕೃಷ್ಣನು ಅಲ್ಲಿಯವರೆಗೆ ಹೋಗಿ ಅವರನ್ನು, ಅವರಿಗೆ ಸಹಾಯಕರಾದ ಇತರ ರಾಜರನ್ನು ಗೆದ್ದು ಮಿತ್ರವಿಂದೆಯನ್ನು ಕರೆದುಕೊಂಡು ಹೋದನು. ಇನ್ನೊಬ್ಬ ಸೋದರ ಮಾವನ ಎರಡನೇ ಮಗಳು ಭದ್ರಾ. ಆಕೆಯ ಸಹೋದರರು ಶ್ರೀಕೃಷ್ಣನಿಗೆ ಮದುವೆ ಮಾಡಿಕೊಟ್ಟರು. ಆಕೆಯನ್ನು ಕೂಡ ವಾಸುದೇವನು ಸ್ವೀಕರಿಸಿದನು.

ವಿಶ್ವೇಷಾಂ ದೇವಾನಾಮವ ತಾರಾ ಹಿ ಪಂಚ
ತೇ ಕೈಕಯಾ ಭ್ರಾತರೋಽಸ್ಯಾ ಹರೇಶ್ಚ
ಭಕ್ತಾ ನಿತ್ಯಂ ಪಾಂಡವಾಂ ನಾಂ ಚ ತಾತೋ
ಹ್ಯೇಷಾಂ ವಶೇ ಶೈಬ್ಯನಾಮಭೂರ್ಧರಗ್ರೇ ||೫೦||

ಭದ್ರಾದೇವಿಯ ಸಹೋದರರು ಐದು ಜನರು. ಅವರು ಕೈಕಯ ದೇಶದವರು. ವಿಶ್ವೇ ದೇವತೆಗಳ ಅವತಾರರು. ಶ್ರೀಹರಿಯ ಭಕ್ತರು. ಪಾಂಡವರಿಗೂ ಭಕ್ತರಾಗಿದ್ದರು. ಅವರ ತಂದೆ ಶೈಬ್ಯ. ಅವನು ಕೈಕೆಯರ ಅಧೀನದಲ್ಲಿದ್ದನು. (ಶ್ರೀಕೃಷ್ಣನ ಮದುವೆ ಸುಗಮವಾಗಿ ಸಾಗಿತು.)

ಸ್ವಯಂವರೋ ಲಕ್ಷಣಾಯಾಸ್ತಥಾ ನೀ
ದೃಥಾ ದ್ರೌಪದ್ಯಾ ಲಕ್ಷ್ಯವೇಧಾತ್ಮ ಕಃ ಸಃ
ಮದ್ರೇಷು ತಸ್ಯಾಶ್ಚ ಪಿತಾ ಪಿನಾಕಂ
ಸ್ವಯಂವರಾರ್ಥಂ ಜಗೃಹೇ ಗಿರೀಶಾತ್ ||೫೧||

ದ್ರೌಪದಿಯ ಸ್ವಯಂವರದಲ್ಲಿ "ಗುರಿಯಿಟ್ಟು ಮತ್ಸ್ಯಗಳನ್ನು ಹೊಡೆದವರಿಗ ದ್ರೌಪದಿಯನ್ನು ಕೊಡಲಾಗುವುದು" ಎಂದು ಹೇಗೆ ಸಾರಿದ್ದರೋ ಆ ಸ್ವಯಂವರದಂತ ತಾನು ತನ್ನ ಮಗಳು 'ಲಕ್ಷಣ' ಎಂಬವಳಿಗೆ ಸ್ವಯಂವರ ಮಾಡಬೇಕೆಂದು ಮದ್ರದೇಶದ ರಾಜನು, ರುದ್ರದೇವರನ್ನು ಒಲಿಸಿ, ಆತನಿಂದ 'ಪಿನಾಕ' ಎಂಬ ಬಿಲ್ಲನ್ನೂ ಪಡೆದಿದ್ದನು

ಲಕ್ಷ್ಯಂ (ಕ್ಷಂ) ಚ ತತ್ಸರ್ವತಶ್ಛನ್ನ ಮೇವ
ದ್ವಾರಂ ಚ ತಸ್ಯಾಪ್ಯುಪರಿಷ್ಟ ಲಕ್ಷ್ಯಾ (ಕ್ಷಾ) ತ್
ಭಿನ್ನೇಷುಣಾ ಪಾತನೀಯಂ ಚ ತದ್ಧಿ
ದ್ರೌಪದ್ಯರ್ಥಾತ್ತು ದಶಕ್ಯಂ ತತೋಽಲಮ್ ||೫೨||

ಆ ಗುರಿಯ ವಸ್ತು ಮುಚ್ಚಲ್ಪಟ್ಟಿವೆ. ಅದರ ದ್ವಾರವು ಗುರಿಯ ಮೇಲ್ಭಾಗದಲ್ಲಿದ ಒಂದು ಮುರಿದ ಬಾಣದಿಂದ ಅದನ್ನು ಹೊಡೆದು ಬೀಳಿಸಬೇಕು. ಇದು ಇಲ್ಲಿಯ ಸ್ವಯಂವರದ ಷರತ್ತು.

ದ್ರೌಪದಿಯ ಸ್ವಯಂವರದ ಷರತ್ತಿಗಿಂತಲೂ ಇದು ಭಿನ್ನ ಮತ್ತು ಅಶಕ್ಯವೂ ಕೂಡ. ದುಸ್ತರವೂ ಅಹುದು.

**ವಿ. ವಿ. :** ಅಂದರೆ ಆ ಗುರಿಯ ವಸ್ತು ಒಂದು ಬುಟ್ಟಿಯಲ್ಲಿಟ್ಟು ಅದನ್ನು ಒಂದು ಕಂಬಕ್ಕೆ ಕಟ್ಟಲಾಗಿದೆ. ಅದರ ದ್ವಾರ ಮೇಲ್ಭಾಗದಲ್ಲಿದೆ. ಈ ಷರತ್ತಿನಲ್ಲಿರುವುದು ಮುರುಕು ಬಾಣ . ಕೆಳಗೆ ಏನೂ ನೋಡಲು ಆಸ್ಪದವಿಲ್ಲ. ಹೊಡೆದ ಬಾಣ ಮೊದಲು ನೇರವಾಗಿ ಹೋಗಬೇಕು. ಗುರಿಗಿಂತಲೂ ಮೇಲೆ ಹೋಗಿ ತಿರುಗಿ ಕೆಳಗೆ ಬೀಳುವಾಗ, ಅದು ಇಟ್ಟ ಗುರಿಯನ್ನು ಕೆಡಹಿ ಕೆಳಗೆ ಬರಬೇಕು. ಇದು ಕಲ್ಪನೆಗೂ ಅಶಕ್ಯ. ಪ್ರಯೋಗಕ್ಕಂತೂ ಬಹು ದೂರ.

**ತತ್ರಾಜಗ್ಮುರ್ಮಾಗಧಾದ್ಯಾಶ್ಚ ಸರ್ವೇ**
**ಪಾರ್ಥಾ ಅಪಿ ದ್ರಷ್ಟು ಮಿಹಾಭ್ಯುಪಾಯಯುಃ**
**ದುರ್ಯೋಧನಾದ್ಯಾಶ್ಚ ಸಸೂತಪುತ್ರಾಃ**
**ಸಜ್ಜೇ ಕರ್ತುಂ ಧನುರಪ್ಯುತ್ಸಹಂತೇ ||೫೩||**

ಆ ಸ್ವಯಂವರಕ್ಕೆ ಅನೇಕ ರಾಜರು ಬಂದಿದ್ದರು. ಅವರಲ್ಲಿ ಜರಾಸಂಧ ಮುಖ್ಯನಾಗಿದ್ದನು. ದುರ್ಯೋಧನನೂ ಸೂತಪುತ್ರನಾದ ಕರ್ಣನೊಂದಿಗೆ ಬಂದಿದ್ದನು. ಅವರೆಲ್ಲರೂ ಬಿಲ್ಲನ್ನು ಎತ್ತಿ ಹಗ್ಗವನ್ನು ಕಟ್ಟಿ ಬಾಣದಿಂದ ಹೊಡೆದು ಗುರಿ ಸಾಧಿಸಲು ಬಂದಿದ್ದರು. ಅಲ್ಲಿಗೆ ಪಾಂಡವರೂ ಬಂದಿದ್ದರು. ಅವರು ಕೇವಲ ಪ್ರೇಕ್ಷಕರಾಗಿದ್ದರು. ಶ್ರೀಕೃಷ್ಣನ ದರ್ಶನ, ಆ ಗುರಿಯನ್ನು ಭೇದಿಸುವ ಉಪಾಯ ಅರಿಯುವುದೇ ಅವರ ಗುರಿಯಾಗಿತ್ತು.

**ಕೇ ಚಿನ್ನಿಪೇತುರ್ಧನುಷೈವ ತಾಡಿತಾ**
**ನ ವೈ ಕೇಚಿ ಚ್ಚಾಲಯಿತುಂ ನ (ಚ) ಶೇಕುಃ**
**ದುರ್ಯೋಧನೋ ಮಾಗಧಃ ಸೂತಪುತ್ರಃ**
**ಸಜ್ಜಂ ಕೃತ್ವಾ ಲಕ್ಷ್ಯ (ಕ್ಷ) ವೀಕ್ಷಾಂ ನ ಶೇಕುಃ ||೫೪||**

ಬಂದವರಲ್ಲಿ ಕೆಲವರು ಬಿಲ್ಲಿನ ಪೆಟ್ಟಿನಿಂದ ಬಿದ್ದರು. ಮತ್ತೆ ಕೆಲವರು ಬಿಲ್ಲನ್ನು ಎತ್ತಲು, ಸರಿದಾಡಿಸಲು ಸಮರ್ಥರಾಗಲಿಲ್ಲ. ದುರ್ಯೋಧನ, ಜರಾಸಂಧ, ಕರ್ಣ ಮುಂತಾದವರೂ ಬಿಲ್ಲನ್ನು ಎತ್ತಿ, ಹಗ್ಗದಿಂದ ಕಟ್ಟಿ, ಗುರಿಯನ್ನು ನೋಡಲು ಸಮರ್ಥರಾಗಲಿಲ್ಲ.

**ಧನಂಜಯಃ ಸ್ವಾತ್ಮ ಬಲಂ ಪ್ರಕಾಶಯನ್**
**ಸಜ್ಜಂ ಕೃತ್ವಾ ಧನುರೈಕ್ಷಚ್ಚ ಲಕ್ಷ್ಯಂ (ಕ್ಷಂ)**
**ನೈವಾದದೇ ಬಾಣಮನಿಚ್ಛ ಯೈವ (ತತ್)**
**ಪ್ರಾಪ್ಯಾಂ ಜಾನನ್ ಕೇಶವೇಚ್ಛೈವ ತಾಂ ಚ ||೫೫||**

ಅರ್ಜುನನು, ತನ್ನ ಬಲವನ್ನು ಪ್ರದರ್ಶಿಸಬೇಕೆಂದು ಅಲ್ಲಿಗೆ ಬಂದನು. ಬಿಲ್ಲನ್ನು ಹಗ್ಗದಿಂದ ಕಟ್ಟಿ ಸಜ್ಜಾಗಿಸಿದನು. ಆದರೆ ಗುರಿಯನ್ನು ಭೇದಿಸುವಂತೆ ಬಾಣ ಬಿಡಲಿಲ್ಲ.

ಗುರಿಯನ್ನು ಭೇದಿಸುವುದು ಅವನ ಇಚ್ಛೆಯೂ ಆಗಿರಲಿಲ್ಲ. ಈ ಲಕ್ಷಣೆಯನ್ನು ಶ್ರೀಕೃಷ್ಣನೇ ಪಡೆಯಬೇಕಾಗಿದೆ. ಅದು ಆತನಿಗೆ ಯೋಗ್ಯ ಎಂದು ತಿಳಿದು, ಆ ಕಾರ್ಯ ನಾವು ಮಾಡಬಾರದು ಎಂದು ಸುಮ್ಮನಾದನು.

**ಭೀಮಶ್ಚಾಪಂ ಲಕ್ಷ್ಯಮಪ್ಯೇತದತ್ರ**
**ದ್ರಷ್ಟುಂ ಚ ನೈವೈಚ್ಛದರೀಂದ್ರ ಧಾರಣಃ**
**ಯೋಗ್ಯೇ ಕರ್ಮಣ್ಯಾಯ ತಂ ಶ್ಚಾಪರಾಧೀ**
**ಸ್ಯಾಮಿ (ದಿ) ತ್ಯಂಜಃ ಪಶ್ಯಮಾನೋ ಮಹಾತ್ಮಾ** ||೫೬||

ಭೀಮಸೇನನು ಅಲ್ಲಿಯೇ ಇದ್ದನು. ಆದರೆ ಆತನು, ಬಿಲ್ಲನ್ನಾಗಲಿ, ಬಾಣವನ್ನಾಗಲಿ, ಗುರಿಯನ್ನಾಗಲಿ ನೋಡಲಿಲ್ಲ. ಕೆಳಮುಖನಾಗಿ ಕುಳಿತಿದ್ದನು. "ಶ್ರೀಹರಿಗೆ ಯೋಗ್ಯವಾದ ಕಾರ್ಯದಲ್ಲಿ ನಾನು ಪ್ರವರ್ತಿಸಿದರೂ ಮಹಾಪರಾಧ" ಎಂದು ಬಗೆದು ಆ ಮಹಾತ್ಮನು ಏನನ್ನು ನೋಡಲು ಇಚ್ಛಿಸಲಿಲ್ಲ. ಇದು ಅಚ್ಛಿನ್ನ ಭಕ್ತನ ಲಕ್ಷಣ.

**ಕೃಷ್ಣಶ್ಚ ತಚ್ಚಾ (ಸ್ತತಶ್ಚಾ) ಪಮಧಿಜ್ಯ ಮಾಶು**
**ಕೃತ್ವಾ ಚಿಂತ್ಯಶ್ಛಿನ್ನ ಬಾಣೇನ ಲಕ್ಷ್ಯಂ (ಕ್ಷಂ)**
**ಅಪಾತಯದ್ದುಂದುಭಯಶ್ಚ ದಿವ್ಯಾ**
**ನೇದುಃ ಪ್ರಸೂನಂ ವವೃಷುಃ ಸುರಾಶ್ಚ** ||೫೭||

ಅಚಿಂತ್ಯ ಶಕ್ತಿಯುಳ್ಳ ಶ್ರೀಕೃಷ್ಣನು, ಧನುಸ್ಸನ್ನು ಸಜ್ಜಾಗಿಸಿ, ತುಂಡು ಬಾಣದಿಂದ ಭೇದಿಸಿ ಲಕ್ಷ್ಯವನ್ನು ಕೆಡಹಿದನು. ಆಗ ದುಂದುಭಿ ಮೊಳಗಿತು. ದೇವತೆಗಳು ಪುಷ್ಪವೃಷ್ಟಿಗೈದರು.

**ಕೃಷ್ಣೇ ಬ್ರಹ್ಮಾದ್ಯೈಃ ಸ್ತುಯಮಾನೇ ನರೇಂದ್ರ**
**ಕನ್ಯಾ ಮಾಲಾಂ ಕೇಶವಾಂಸೇ ನಿಧಾಯ**
**ತಸ್ಥಾವು ಪಾಸ್ಯಾಥ ಸರ್ವೇ ನರೇಂದ್ರಾ**
**ಯುದ್ಧಾ ಯಾಶುಃ ಕೇಶವಂ ಹ್ಯಾತ್ತ ಶಸ್ತ್ರಾಃ** ||೫೮||

ಶ್ರೀಕೃಷ್ಣನನ್ನು ಬ್ರಹ್ಮಾದಿಗಳು ಸ್ತುತಿಸಿದರು. ರಾಜಕುವರಿ ಮಾಲೆಯನ್ನು ತಂದು ಕೇಶವನ ಕೊರಳಲ್ಲಿ ಹಾಕಿ ಬಳಿಯಲ್ಲಿ ನಿಂತುಬಿಟ್ಟಳು. ಉಳಿದ ರಾಜರೆಲ್ಲ ಸೇರಿ ಶಸ್ತ್ರಗಳನ್ನು ಧರಿಸಿ ಶ್ರೀಕೃಷ್ಣನೊಂದಿಗೆ ಯುದ್ಧಕ್ಕೆ ನಿಂತರು.

**ವಿದ್ರಾವ್ಯ ತಾನ್ ಮಾಗಧಾದೀನ್ ಸ ಕೃಷ್ಣೋ**
**ಭೀಮಾ ಬುನಾಭ್ಯಾಂ ಸಹಿತಃ ಪುರೀಂ ಸ್ವಾಂ**
**ಯಯಾವೇತಾ ಅಷ್ಟ ಮಹಾಮಹಿ ಷ್ಯಃ**
**ಕೃಷ್ಣಸ್ಯ ದಿವ್ಯಾ ಲೋಕಸುಂದರ್ಯ ಇಷ್ಟಾಃ** ||೫೯||

ಶ್ರೀಕೃಷ್ಣನು, ಮಗಧಾದಿ ಆ ಸರ್ವರಾಜರನ್ನು ಸೋಲಿಸಿ, ಭೀಮಾರ್ಜುನರ ಸಹಿತನಾಗಿ ತನ್ನ ಪುರಕ್ಕೆ ನಡೆದನು. ಆ ಅಷ್ಟ ಮಹಿಷಿಯರು ಸುಂದರಿಯರು ಅತ್ಯಂತ ಶ್ರೀಕೃಷ್ಣನಿಗೆ ಅತಿ ಪ್ರಿಯರಾಗಿದ್ದರು.

**ವಿ. ವಿ. :** ಲಕ್ಷಣಾ, ಸ್ವಯಂವರದ ಘಟನೆಯಲ್ಲಿ 'ಜೀವತ್ರೈವಿಧ್ಯ ಸಿದ್ಧಾಂತ' ಅಡಕವಾಗಿದೆ ಎಂಬುದನ್ನು ಮರೆಯಬಾರದು. 'ಅದು ದ್ವೈತಸಿದ್ಧಾಂತದ ಮೂಲಆಧಾರ'

ಅಂದರೆ ಇವರು ರುಕ್ಮಿಣಿ ಸತ್ಯಭಾಮೆಯರಿಗೆ ಸಮನಾದರೆ? ಇಲ್ಲ.

**ಭೈಷ್ಮಿ ಸತ್ಯಾ ಚೈಕತನುರ್ದ್ವಿಧೈವ**
**ಜಾತಾ ಭೂಮೌ ಪ್ರಕೃತಿ–ರ್ಮೂಲಭೂತಾ**
**ತೈಯೈವಾನ್ಯಾಃ ಸರ್ವದಾನುಪ್ರವಿಷ್ಟಾಃ**
**ತಾಸಾಂ ಮಧ್ಯೇ ಜಾಂಬವತೀ ಪ್ರಧಾನಾ ॥೬೦॥**

ಮೂಲ ರೂಪದಲ್ಲಿ ಲಕ್ಷ್ಮೀ ದೇವಿಯರು ಒಂದೇ ದೇಹವುಳ್ಳವರಾದರೂ ದ್ವಾಪರದಲ್ಲಿ ರುಕ್ಮಿಣಿ ಮತ್ತು ಸತ್ಯಭಾಮಾ ಎರಡು ರೂಪದಿಂದ ಅವತರಿಸಿ ಇತರರೆಲ್ಲರೂ ಲಕ್ಷ್ಮಿ ದೇವಿಯ ಆವೇಶದಿಂದ ಯುಕ್ತರಾಗಿದ್ದಾರೆ. ಅದರಲ್ಲಿಯು ಜಾಂಬವತಿಯ ಸ್ಥಾನ ವಿಶಿಷ್ಟವಾಗಿದೆ.

**ವಿ. ವಿ. :** ಲಕ್ಷ್ಮಿ ದೇವಿಯ ಆವೇಶ ಅಥವಾ ಅಂಶವಿಲ್ಲದೆ ಯಾವ ಸ್ತ್ರೀಯು ಪರಮಾತ್ಮನನ್ನು ಮುಟ್ಟುವಂತಿಲ್ಲ. ಇದು ದ್ವೈತ ಸಿದ್ಧಾಂತ. ಅದರಲ್ಲೂ ತಾರತಮ್ಯವಿದೆ. ಅದರ ವಿವರ –

**ರಾಮೇಣ ತುಲ್ಯಾ ಜಾಂಬವತೀ ಪ್ರಿಯತ್ವೇ**
**ಕೃಷ್ಣ ಸ್ಯಾನ್ಯಾಃ ಕಿಂಚಿದೂನಾಶ್ಚ ತಸ್ಯಾಃ**
**ಯದಾವೇಶೋ ಬಹುಲಃ ಸ್ಯಾದ್ರಮಾಯಾಃ**
**ತದಾ ತಾಸು ಪ್ರೀಯತೇ ಕೇಶವೋಽಲಮ್ ॥೬೧॥**

ಶ್ರೀಕೃಷ್ಣನಿಗೆ ಬಲರಾಮನಲ್ಲಿದ್ದಷ್ಟು ಪ್ರೀತಿ ಜಾಂಬವತಿಯಲ್ಲುಂಟು. ಏಕೆಂದರೆ ಆಕೆಯಲ್ಲಿ ಯಾವಾಗಲೂ ರಮಾದೇವಿಯರ ಆವೇಶವುಂಟು. ಇದರಲ್ಲಿ ರಮಾದೇವಿಯರ ಆವೇಶಕ್ಕನುಸರಿಸಿ ಪ್ರೀತಿ ಅದರಲ್ಲಿ ಹೆಚ್ಚು ಕಡಿಮೆ ಆಗಲೂ ಸಾಧ್ಯವಿದೆ. ಇದು ಪ್ರೀತಿಯ ದೃಷ್ಟಿಯಿಂದ ಸ್ವರೂಪ ದೃಷ್ಟಿಯಿಂದ ಎಲ್ಲ ಮಡದಿಯರಿಗೂ ಪ್ರದ್ಯುಮ್ನನಿಗಿಂತ ಇಪ್ಪತ್ತು ಗಣ ಹೆಚ್ಚು ಇದ್ದ ಪ್ರಯುಕ್ತ ಎಲ್ಲರೂ ಸಮಾನರೆ.

**ಯದಾವೇಶೋ ಹ್ರಾಸಮುಪೈತಿ ತತ್ರ**
**ಪ್ರದ್ಯುಮ್ನ ತೋ ವಿಂಶಗುಣಾಧಿಕಾಃ ಸ್ಯುಃ**
**ಅನಾದಿತಸ್ತಾಃ ಕೇಶವಾನ್ನಾನ್ಯ ಸಂಸ್ಥಾ**
**ರೇಮೇ ತಾಭಿಃ ಕೇಶವೋದ್ವಾರವತ್ಯಾಮ್ ॥೬೨॥**

ಯಾವಾಗ ಆಯಾ ಸ್ತ್ರೀಯರಲ್ಲಿ ರಮಾವೇಶ ಕಡಿಮೆಯಾಗುವುದೋ ಆಗ ಪ್ರದ್ಯುಮ್ನನು ಇಪ್ಪತ್ತು ಗುಣದಿಂದ ಅಧಿಕನಾಗಿಯೇ ಇರುತ್ತಾನೆ. ಆ ಅಷ್ಟ ಮಹಿಷಿಯರು ಶ್ರೀಕೃಷ್ಣನನ್ನುಳಿದು ಇತರ ಪುರುಷರನ್ನು ಸ್ಪರ್ಶಿಸಿಲ್ಲ. ಶ್ರೀಕೃಷ್ಣನು ದ್ವಾರಾವತಿಯಲ್ಲಿ ಅಷ್ಟ ಮಹಿಷಿಯರೊಡನೆ ಆನಂದದಿಂದ ಇದ್ದನು.

ವಿ. ವಿ. : ಅಷ್ಟ ಮಹಿಷಿಯಲ್ಲಿ "ನಿಯತ ಪತ್ನಿತ್ವ" ಸಿದ್ಧಾಂತ ಅಡಕವಾಗಿದೆ. ಅದನ್ನು ಗಮನಿಸಬೇಕು. ಈ ಸಿದ್ಧಾಂತ ದೇವತೆಗಳಿಗೆ ಮಾತ್ರ ಸೀಮಿತ.

**ಏವಂ ಕೃಷ್ಣೇ ದ್ವಾರಕಾಮಧ್ಯಸಂಸ್ಥೇ**
**ಗಿರಿಂ ಭೂಪಾ ರೈವತಕಂ ಸಮಾಯಯುಃ**
**ದುರ್ಯೋಧನಾದ್ಯಾಃ ಪಾಂಡವಾಶ್ಚೈವ ಸರ್ವೇ**
**ನಾನಾ ದೇಶ್ಯಾಯೇಚ ಭೂಪಾಲಸಂಘಾಃ ॥೬೩॥**

ಶ್ರೀಕೃಷ್ಣನು ಈ ರೀತಿಯಲ್ಲಿ ದ್ವಾರಕೆಯಲ್ಲಿರುತ್ತಿರುವಾಗ, ಅನೇಕ ರಾಜರು, ದುರ್ಯೋಧನ ಮೊದಲಾದವರು, ಪಾಂಡವರು, ಇತರ ದೇಶದವರು ಶ್ರೀಕೃಷ್ಣನ ದರ್ಶನಕ್ಕಾಗಿ ಬಂದು ರೈವತ ಪರ್ವತದಲ್ಲಿ ತಂಗಿದರು.

**ಆತ್ಮಾನಂ ತಾನ್ ದ್ರಷ್ಟು ಮಭ್ಯಾಗತಾನ್ ಸ**
**ಕೃಷ್ಣೋ ಗಿರೌ ರೈವತಕೇ ದದರ್ಶ**
**ನಮಸ್ಕೃತೇ ಸರ್ವ ನರೇಂದ್ರ ಮುಖ್ಯೈಃ**
**ಕೃಷ್ಣೇ ವೈದರ್ಭ್ಯಾ ಸಹ ದಿವ್ಯಾಸನಸ್ಥೇ ॥೬೪॥**

**ಏತ್ಯಾಕಾಶಾನ್ನಾರದಃ ಕೃಷ್ಣಃ ಮಹಾ**
**ಸರ್ವೋತ್ತಮಸ್ತ್ವಂ ತ್ವಾದೃಶೋ ನಾಸ್ತಿ ಕಶ್ಚಿತ್**
**ಇತ್ಯಾಶ್ಚರ್ಯೋ ಧನ್ಯ ಇತ್ಯೇವ ಶಬ್ದ**
**ದ್ವಯೇ ತುಷ್ಟೇ ವಾಸುದೇವಸ್ತು ಮಾಹ ॥೬೫॥**

ತನ್ನನ್ನು ನೋಡಲು ಬಂದ ಅಭ್ಯಾಗತರಿಗೆಲ್ಲ ಆ ಶ್ರೀಕೃಷ್ಣನು ಪರ್ವತಕ್ಕೆ ಬಂದು ದರ್ಶನವಿತ್ತನು. ಆತನನ್ನು ಕಂಡ ರಾಜರು, ಗೌರವವಿತ್ತು ನಮಸ್ಕರಿಸಿದರು. ಆಗ ಶ್ರೀಕೃಷ್ಣನು ರುಕ್ಮಿಣಿ ಸಹಿತನಾಗಿ ದಿವ್ಯಾಸನದಲ್ಲಿ ಕುಳಿತುಕೊಂಡನು.

ಆಗ ಆಕಾಶ ಮಾರ್ಗದಲ್ಲಿ ನಾರದರು ಬಂದು, "ಶ್ರೀಕೃಷ್ಣನು ಸರ್ವೋತ್ತಮನು. ಈತನ ಸಮಾನ ಮತ್ತೊಬ್ಬರಿಲ್ಲ ಎಂದು ಹೇಳುತ್ತ ಕೃಷ್ಣನನ್ನು ಕುರಿತು ನೀನು ಆಶ್ಚರ್ಯನು, ಧನ್ಯನು ಎಂದು ಎರಡು ಶಬ್ದಗಳಿಂದ ಸ್ತುತಿಸಿದನು.

**ದಕ್ಷಿಣಾಭಿಃ ಸಾಕಮಿತ್ಯೇವ ಕೃಷ್ಣಂ**
**ಪ ಪ್ರಚ್ಛುರೇತತ್ ಕಿಮಿತಿ ಸ್ಮ ಭೂಪಾಃ**
**ನಾರಾಯಣೋ ಮುನಿಮಾಚೇ ವದೇತಿ**
**ಶೃಣುಧ್ವಮಿತ್ಯಾಹ ಸ ನಾರದೋಽಪಿ ॥೬೬॥**

"ದಕ್ಷಿಣಾಭಿಃ ಸಾಕಂ" ಎಂದು ಹೇಳಿ ಶ್ರೀಕೃಷ್ಣನು ಸುಮ್ಮನಾದನು. ಆಗ ನೆರೆದ ರಾಜರು ಇದರ ಅರ್ಥ ನಮಗೆ ತಿಳಿಯಲಿಲ್ಲ. ಹಾಗೆಂದರೇನು? ಎಂದು ಶ್ರೀಹರಿಯನ್ನು ಕೇಳಿದರು. ಆಗ ಶ್ರೀಕೃಷ್ಣನು ನಾರದರೇ ನೀವೇ ಹೇಳಿ ಎಂದು ಆಜ್ಞಾಪಿಸಿದನು. ಆಗ ನಾರದರು ಎಲ್ಲೈ ರಾಜರೆ ನೀವು ಕೇಳಿರಿ, ಎಂದು ಪ್ರಾರಂಭಿಸಿದರು.

**ಕೂರ್ಮೋಽದೃಷ್ಟೋ ವಿಷ್ಣು ಪದ್ಯಾಂ ಮಯೋಕ್ತ**
**ಸ್ತ್ವ ಮುತ್ತಮೋ ನಾಸ್ತ್ಯಧಿಕಸ್ತ ವೇತಿ**
**ಊಚೇ ಗಂಗಾ ಮುತ್ತಮಾಂ ಸಾಜಲೇಶ**
**ಮುಮಾಮಾಚೇ ಪೃಥಿವೀನಾಮಿಕಾಂ ಸಃ** ||೬೭||

ಗಂಗೆಯಲ್ಲಿ ನಾನು ಒಂದು ಕೂರ್ಮನನ್ನು ನೋಡಿದೆನು. "ನೀನು ಉತ್ತಮನು. ನಿನಗಿಂತ ಬೇರೊಬ್ಬನುತ್ತಮನು ಇಲ್ಲ" ಎಂದು ಆ ಕೂರ್ಮನಿಗೆ ಹೇಳಿದನು. ಆಗ ಆ ಕೂರ್ಮವು ಗಂಗೆಯನ್ನು ತೋರಿಸಿ, ಗಂಗೆಯು ಉತ್ತಮ ಎಂದಿತು. ಆ ಗಂಗೆ ವರುಣನೇ ಉತ್ತಮ ಎಂದು ಹೇಳಿದಳು. ಅದನ್ನು ಕೇಳಿದವರು ವರುಣನು 'ಪೃಥ್ವಿ' ನಾಮಕ ಪಾರ್ವತಿ (ಉಮೆ) ಉತ್ತಮಳು ಎಂದು ಹೇಳಿದನು.

**ಯಾ ಮಾದೃಶಾ ದೇವತಾ ಸರ್ವಶಸ್ತಾ**
**ಧೃತಾಸ್ತಯಾ ಪ್ರಥಿತತ್ವಾತ್ ಪೃಥಿವ್ಯಾ**
**ಶಿವಂ, ಶೇಷಂ ಗರುಡಂ ಚಾಹ ಸಾಪಿ**
**ಪುರಾವನಾತ್ ಪರ್ವತ ನಾಮಧೇಯಾನ್** ||೬೮||

ನನ್ನಂಥ ಅನೇಕ ದೇವತೆಗಳನ್ನು ಧರಿಸುತ್ತಾಳಾದ ಕಾರಣ ಪಾರ್ವತಿ ದೊಡ್ಡಾಕೆ ಎಂದಾಗ, ಆ ಪಾರ್ವತಿ ತನ್ನ ಪತಿಯಾದ ಶಿವನನ್ನು, ಆತನಿಗೆ ಸಮರಾದ ಶೇಷ ಗರುಡರನ್ನು ತೋರಿಸಿ ಅವರು ದೊಡ್ಡವರೆಂದು ಹೇಳಿದಳು.

**ತೈರೇವಾಹಂ ಮತ್ಸಮಾಶ್ಚೈವ ದೇವೋ**
**ಧ್ರಿಯಂತ ಇತ್ಯೇವ ತಮೂ (ಊ) ಚಿರೇಽಥ**
**ಬ್ರಹ್ಮಣಮೇವೋತ್ತಮಮಾಹ ಸೋಽಪಿ**
**ವೇದಾತ್ಮಿಕಾಂ ಪ್ರಕೃತಿಂ ವಿಷ್ಣುಪತ್ನೀಮ್** ||೬೯||

ರುದ್ರ, ಶೇಷ, ಗರುಡರನ್ನು ಕೇಳಿದಾಗ, ಬ್ರಹ್ಮನು ನಮಗೆಲ್ಲರಿಗೆ ಪ್ರವರ್ತಕನಾಗಿದ್ದಾನೆ. ನಮ್ಮ ತಂದೆ ಕಾರಣ ಆತನು ಉತ್ತಮನು ಎಂದು ಹೇಳಿದರು. ಬ್ರಹ್ಮನನ್ನು ಕೇಳಿದಾಗ, ನನ್ನ ತಾಯಿ ವೇದ, ವೇದಾತ್ಮಕಳಾದ ಪ್ರಕೃತಿ, ವಿಷ್ಣು ಪತ್ನಿಯು ದೊಡ್ಡವಳೆಂದನು.

**ನೈಕಾ ದೇವೀ ಬಹು ರೂಪಾ ಬಭಾಷೇ**
**ಯುಕ್ತಾಯದಾಹಂ ಜ್ಞೇನ ನಾರಾಯಣೇನ**
**ಯಜ್ಞ, ಕ್ರಿಯಾಮಾನಿನೀ ಯಜ್ಞನಾಮ್ನೀ**
**ತದೋತ್ತಮಾ ತತ್ಪ್ರವೇಶಾತ್ತ ದಾಖ್ಯಾ** ||೭೦||

ಮೂರು ರೂಪಗಳಲ್ಲಿ ಭೇದವಿಲ್ಲದಿದ್ದರೂ, ವೇದಗಳಾಭಿಮಾನಿ ಆದುದರಿಂದ ಬಹುರೂಪಳಾಗಿ ಹೇಳಿದಳು. ನಾನು ಯಜ್ಞ ನಾರಾಯಣನ ಹತ್ತಿರವಿದ್ದಾಗ ಯಜ್ಞ ಮತ್ತು ಕ್ರಿಯೆಗಳಿಗೆ ಅಭಿಮಾನಿಯಾಗಿ ಇರುತ್ತೇನೆ. ಅದಕ್ಕಾಗಿ ನನಗಿಂತಲೂ ಯಜ್ಞದಲ್ಲಿ ಅಡಗಿರುವ ರೂಪವೇ ಶ್ರೇಷ್ಠವಾದುದು ಎಂದು ಹೇಳಿದಳು.

**ವಿಷ್ಣ್ವಾವಿಷ್ಟಾಯಜ್ಞನಾಮ್ನಿ ತದಂಕ**
**ಸ್ಥಿತಾ ಪ್ರೋಚೇ ಕೇಶವೋಹ್ಯುತ್ತಮೋsಲಂ**
**ನ ತತ್ಸಮಶ್ಚಾಭ್ಯಧಿಕಃ (ಶ್ಚಾಧಿಕೋsತಃ) ಕುತಃ ಸ್ಯಾ**
**ದ್ವಿಷೇ ಸತ್ಯಂ ನಾಸ್ಯಚೇತಿ ಸ್ಮ ಭೂಯಃ ॥೭೧॥**

ವಿಷ್ಣುವಿನ ಆವೇಶಯುಕ್ತಳಾದ ಹೆಂಡತಿಯಲ್ಲಿ ಆತನ ತೊಡೆಯಲ್ಲಿ ಕುಳಿತಿರುವ 'ಯಜ್ಞ' ಎಂಬುವಳೇ ದೊಡ್ಡವಳು. ಆಕೆಯು ಕೂಡ ಕೇಶವನನ್ನು 'ತೋರಿಸಿ ನನಗಿಂತಲೂ ಇವರು ದೊಡ್ಡವರು. ಇವರ ಅಧಿಕವಾಗಲಿ, ಸಮರಾಗಲಿ ಮತ್ತೊಬ್ಬರಿಲ್ಲ ಎಂದು ಹೇಳಿದಳು.

ನಾರದರು ವಿಷ್ಣುವು ಸರ್ವೋತ್ತಮವು ಎಂದು ಹೇಳಿದ ಮಾತಿಗೆ 'ದಕ್ಷಿಣಾಸ್ಮಾಕಂ' ಎಂಬ ಮಾತು ಪುಷ್ಟಿಕೊಟ್ಟಿತು.

**ವಿ. ವಿ. :** ಮೇಲಿನ ಈ ಕೆಲವು ಶ್ಲೋಕಗಳಲ್ಲಿ ಆಚಾರ್ಯರು ಜಡ ಮತ್ತು ಚೇತನ ಎರಡು ತಾರತಮ್ಯವನ್ನು ಬಹು ಸ್ವಾರಸ್ಯವಾಗಿ ಮತ್ತು ಕಥೆಯ ರೂಪದಲ್ಲಿ ನಾರದ ಬಾಯಿಯಿಂದ ಹೇಳಿಸಿ ಅದಕ್ಕೆ ಪರಮಾತ್ಮನ ಒಪ್ಪಿಗೆಯನ್ನೂ ಪಡೆದಿದ್ದಾರೆ.

೧) **'ಏಷ ಸರ್ವೇಶ್ವರಃ'** ಇದು ಶ್ರುತಿ ಪ್ರಸಿದ್ಧ.

೨) ನಾರದರು ಲಕ್ಷ್ಮಿದೇವಿಯನ್ನು ಕುರಿತು ನೀನು ಆಶ್ಚರ್ಯಳೂ ಧನ್ಯಳೂ ಎಂದು ಹೇಳಿದಾಗ, ಲಕ್ಷ್ಮಿದೇವಿಯರು, ಗಂಡನಾದ 'ಯಜ್ಞ' ನಾಮಕ ಪರಮಾತ್ಮ ಪೂಜ್ಯನು. ನಿರವಧಿಕನಂ ಪೂರ್ಣನು. ಆತನೇ ಉತ್ತಮನು ಎಂದು ಹೇಳಿದ್ದಾಳೆ.

೩) **'ದಕ್ಷಿಣಾ ಅಸ್ಮಾಕಂ'** ಎಂದು ಈ ದಕ್ಷಿಣಾ ಎಂಬ ಲಕ್ಷ್ಮಿ ಇದ್ದ ಪ್ರಯುಕ್ತ ಎಂದು ನಾರಾಯಣನೇ ಹೇಳಿದ್ದಾನೆ.

ಈ ಮೂರು ಸಾಧನೆಗಳಿಂದ ಶ್ರೀಹರಿಯು ಸರ್ವೋತ್ತಮನೆಂದು ನಾರದರು ಸಾಧಿಸಿದ್ದಾರೆ.

**ತಾರತಮ್ಯ –**

೧) ಕೂರ್ಮ, ಗಂಗೆ, ಸಮುದ್ರ, ಪೃಥಿವಿ, ಪರ್ವತ, ಮಹತ್ತತ್ವ, ವೇದ ಯಜ್ಞ, ದಕ್ಷಿಣೆ ಎಲ್ಲರಿಗೂ ಅಧಿಕ ಶ್ರೀಹರಿ. **ಜಡತಾರತಮ್ಯ** ಪುಷ್ಕರ, ಗಂಗಾದೇವಿ, ವರುಣ, ಪಾರ್ವತಿ ರುದ್ರ ಶೇಷ ಗರುಡ ಬ್ರಹ್ಮ ಲಕ್ಷ್ಮಿ ಕೊನೆಗೆ ಶ್ರೀಮನ್ನಾರಾಯಣ ದೇವತೆಗಳ ತಾರತಮ್ಯ ತಾತ್ವಿಕವಾಗಿ ಲಕ್ಷ್ಮಿದೇವಿಯರಿಗೂ ನಾರಾಯಣನಿಗೂ ವಿಯೋಗವಿಲ್ಲ. ಅದು ಪರೋಕ್ಷವಾಗಿ ಆದರೆ ಇಲ್ಲಿ ಅದನ್ನು ಪ್ರತ್ಯಕ್ಷ ರೂಪದಿಂದ ಸಾಧಿಸಿದ್ದಾರೆ. ಅಂತೆಯೇ ಲಕ್ಷ್ಮಿ–ನಾರಾಯಣನ 'ಅರ್ಧಾಂಗಿ'ಯಾಗಿದ್ದಾಳೆ.

ಇಂದಿಗೂ ಪರಮಾತ್ಮ ಪ್ರೀತ್ಯರ್ಥ ಯಾವುದೇ ಕಾರ್ಯ ದಾನ, ಧರ್ಮ, ಹೋಮ, ಯಜ್ಞ ಇತ್ಯಾದಿಗಳಲ್ಲಿ ದಕ್ಷಿಣೆಯನ್ನು ಕೊಡುವ ಸಂಪ್ರದಾಯ ಬೆಳೆದುಬಂದಿದೆ.

'ದಕ್ಷಿಣೆ'ಯು ಕೇವಲ ಕೀರ್ತಿಗಾಗಿ, ಅಥವಾ ಬ್ರಾಹ್ಮಣರ ಅನುಕೂಲಕ್ಕಾಗಿ (ಸಹಾಯಕ್ಕಾಗಿ) ಅಲ್ಲ. ಪರಮಾತ್ಮನ ಪ್ರೀತಿಗಾಗಿ ಎಂದು ಹೇಳಬಹುದು.

ಇನ್ನು 'ಆಶ್ಚರ್ಯ' ಮತ್ತು 'ಧನ್ಯ' ಈ ಎರಡು ಶಬ್ದಗಳ ವಿಚಾರ –

ಸಜ್ಜನರು, ಯೋಗ್ಯರಾದ ಜನರು ಯಾರನ್ನು ನೋಡುವುದಕ್ಕಾಗಿ, ಪಡೆಯುವುದಕ್ಕಾಗಿ ಪ್ರಯತ್ನಿಸುವರೋ ಅವನು 'ಆಶ್ಚರ್ಯನು'. ಮಂದಮತಿಗಳನ್ನು, ಕುತ್ಸಿತವಾದಿಗಳನ್ನು ದೂರಕ್ಕೆ ಅಟ್ಟಿದುದಕ್ಕಾಗಿ 'ಧನ್ಯನು'.

ಈ ಎರಡು ಕಾರ್ಯಗಳನ್ನು ಮಾಡಿದ ಕಾರಣ ಪರಮಾತ್ಮನು 'ಸರ್ವೋತ್ತಮನ' ಎಂದು ನಾರದರ ಸ್ತೋತ್ರದ ಅಭಿಪ್ರಾಯ.

**ವಿಷ್ಣ್ವಙ್ಗ ವಿಷ್ವಗ್ಯಜ್ಞಸಾ ಮ್ನಿ ತದಂಕ–**
**ಸ್ಥಿತಾ ಸೋ ಚೇ ಕೇಶವೋಽಹ್ಯುತ್ತಮೋಽಲಂ**
**ನ ತತ್ಸಮ ಶ್ಚಾ ಭ್ಯಧಿಕೋ ಕುತಃ ಸ್ಯಾ**
**ದ್ಯಷೇ ಸತ್ಯಂ ನಾನ್ಯ ತೇಥಿ ಸ್ಮ ಭೂಯಃ ॥೭೧॥**

**ತಯೋಕ್ತೋಽಹಂ ನಾವತಾರೇಷು ಕಶ್ಚಿತ್**
**ವಿಶೇಷ ಇತ್ಯೇವ ಯದುಪ್ರವೀರಂ**
**ಸರ್ವೋತ್ತಮೋಽಸೀತ್ಯವದಂ ಚ ಚಾಹ**
**ನ ಕೇವಲಂ ಮೇಽಂಕಗಾಯಃ ಶ್ರೀಯೋಽಹಮ್ ॥೭೨॥**

**ತದೋತ್ತಮಃ ಕಿಂ ತುಯಿದಾ ತು ಸಾಮೇ**
**ವಾಮಾರ್ಧರೂಪಾ ದಕ್ಷಿಣಾನಾಮಧೇಯಾ**
**ಯಸ್ಮಾತ್ತಸ್ಯಾ ದಕ್ಷಿಣತಃ ಸ್ಥಿತೋಽಹಂ**
**ತಸ್ಮಾನ್ನಾಮ್ನೋ ದಕ್ಷಿಣೇತ್ಯೇವ ಸಾ ಸ್ಯಾತ್ ॥೭೩॥**

ಲಕ್ಷ್ಮಿದೇವಿಯರು ಈ ರೀತಿ ಹೇಳಿದ ಮೇಲೆ, ನಾರದರು, ಶ್ರೀಹರಿಯನ್ನು ಕುರಿತು, ಮೂಲದಲ್ಲಿಯೂ ಅವತಾರದಲ್ಲಿಯೂ ಭೇದವಿಲ್ಲ ಎಂದು ತಿಳಿದು ಶ್ರೀಕೃಷ್ಣನನ್ನು ನೀನು ಉತ್ತಮನೇ ಎಂದು ಹೇಳಿದರು.

ನಮ್ಮಲ್ಲಿ ವಿಯೋಗವಿಲ್ಲ. ದಕ್ಷಿಣ ಭಾಗದಲ್ಲಿದ್ದ ಪ್ರಯುಕ್ತ ಅವಳ ಹೆಸರು 'ದಕ್ಷಿಣೆ' ಎಂದು ಪ್ರಸಿದ್ಧವಾಯಿತು.

**ಸಾ ದಕ್ಷಿಣಾ ಮಾನಿನೀ ದೇವತಾ ಚ**
**ಸಾ ಚಸ್ಥಿತಾ ಬಹುರೂಪಾ ಮದರ್ಥಾ**
**ವಾಮಾರ್ಧೋ ಮೇ ತತ್ಪವಿಷ್ಣೋ ಯತೋಽಹಿ**
**ತತೋಽಹಂ ಸ್ಯಾಮರ್ಧನಾರಾಯಣಾಖ್ಯಃ ॥೭೪॥**

ಶ್ರೀಹರಿಯ ದಕ್ಷಿಣಾಭಿ ಮಾನಿನಿಯಾದ ಆ ಲಕ್ಷ್ಮಿಯು ಕೂಡ ಯಜ್ಞದ
ಅನೇಕ ರೂಪ ಧರಿಸಿದ್ದರೂ ಪರಮಾತ್ಮನ ದಕ್ಷಿಣ ಭಾಗದಲ್ಲಿ ಸ್ಥಿತಳಾಗಿದ್ದಾಳೆ. ಅಂತೆಯೆ
'ಅರ್ಧನಾರೀ ನಾರಾಯಣ' ಹೆಸರು ಪಡೆದಿದ್ದಾನೆ.

**ತದಾಪ್ಯಸ್ಯಾ ಉತ್ತಮೋಽಹಂಸುಪೂರ್ಣೇ**
**ನ ಮಾದೃಶಃ ಕಶ್ಚಿದಸ್ತ್ಯುತ್ತ ಮೋ ವಾ**
**ಇತ್ಯೇವಾವಾದೀದ್ದಕ್ಷಿಣಾಭಿಃ ಸಹೇತಿ**
**ಸರ್ವೋತ್ತ ಮತ್ವಂ ದಕ್ಷಿಣಾನಾಂ ಸ್ಮರನ್ ಸಃ** ||೭೫

ದಕ್ಷಿಣಾದೇವೀ ಉತ್ತಮೋತ್ತಳು ಆಗಿದ್ದರೂ ಕೂಡ ನಾನು, ಎಲ್ಲ ರೀತಿಯಿಂದಲ
ಸಂಪೂರ್ಣನಾಗಿದ್ದೇನೆ. ನನಗೆ ಸದೃಶನಾಗಲಿ, ಉತ್ತಮನಾಗಲಿ ಮತ್ತೊಬ್ಬನಿಲ್ಲ. ದಕ್ಷಿ
ದೇವಿಗೆ ಉತ್ತಮತ್ವವನ್ನು ಕಲ್ಪಿಸುವುದಕ್ಕಾಗಿ 'ದಕ್ಷಿಣಾಸ್ಸಾಕಂ' ಎಂದು ಹೇಳಲಾಯಿ
ಎಂದು ಶ್ರೀಕೃಷ್ಣನು ಹೇಳಿದನು.

**ತಾಭಿಶ್ಚೈತಾಭಿರ್ದಕ್ಷಿಣಾಭಿಃ ಸಮೇತಾತ್**
**ಪರಿಷ್ಟೋಽಹಂ ಜಗತಃ ಸರ್ವದೈವ**
**ಮತ್ಸಾಮರ್ಥ್ಯಾನ್ನೈವ ಚಾನಂತ ಭಾಗೋ**
**ದಕ್ಷಿಣಾನಾಂ ವಿದ್ಯತೇ ನಾರದೇತಿ** ||೭೬

ಎಲೈ ನಾರದರೇ, ವೇದಾಭಿಮಾನಿ, ಯಜ್ಞನಾಮಕಳಾದ ದಕ್ಷಿಣಾದೇವಿ, ಮ
ಇತರ ಎಲ್ಲರಿಗಿಂತಲೂ ಯಾವಾಗಲೂ ನಾನು ಉತ್ತಮನು. ನನ್ನ ಅನಂತ ಭಾಗದ
ಒಂದು ಭಾಗಕ್ಕೂ ಕೂಡ ಈ ದಕ್ಷಿಣಾದೇವಿ ಸಮ ಆಗಲಾರಳು.

**ಉಕ್ತಂ ಕೃಷ್ಣೇನಾಪ್ರತಿಮೇನ ಭೂಪಾ**
**ಅನ್ಯೋತ್ತ ಮತ್ವಂ ದಕ್ಷಿಣಾನಾಂ ಚ ಶಶ್ವಾತ್**
**ಸೇಯಂ ಭೈಷ್ಮೀ ದಕ್ಷಿಣಾ ಕೇಶವೋಽಯಂ**
**ತಸ್ಯಾಃ ಶ್ರೇಷ್ಠಃ ಪಶ್ಯತ ರಾಜಸಂಘಾಃ** ||೭೭

ಆ ಕೃಷ್ಣನಿಂದಲೇ ದಕ್ಷಿಣಾದೇವಿಗೆ ಉತ್ತಮತ್ವ ಪ್ರಾಪ್ತವಾಗಿದೆ. ಕಾರ
"ದಕ್ಷಿಣಾಭಿಃ ಸಾಕಂ" ಎಂದು ಹೇಳಲಾಯಿತು ಎಂದಾಗ, ಆ ಕೇಶವನೇ ಉತ್ತಮನು ಅ
ಪಕ್ಷದಲ್ಲಿ ಈ ಕೃಷ್ಣನು ಧನ್ಯನು. ಆಶ್ಚರ್ಯನು ಏಕೆ? ಎಂಬ ಶಂಕೆಗೆ ಈ ರುಕ್ಮಿಣಿಯೆ
ಆ ದಕ್ಷಿಣಾದೇವಿ, ಆ ಕೇಶವನೇ ಈ ಶ್ರೀಕೃಷ್ಣನು ಎಂದು ತಿಳಿಯಿರಿ – ಎಂದು ನಾರದ
ರಾಜಸಮೂಹಕ್ಕೆ ಹೇಳಿದರು. "ಅವತಾರಗಳಲ್ಲಿ ಭೇದವಿಲ್ಲ" ಎಂದ ತತ್ವ ಸುಸ್ಪಷ್ಟ.

**ಪ್ರತ್ಯಕ್ಷಂ ವೋ ವೀರ್ಯಮಸ್ಯಾಪಿ ಕುಂತ್ಯಾ**
**ಯುದ್ಧೇರ್ಥಿತಃ ಕೇಶವೋ ವೀರ್ಯಮಸ್ಮೈ**
**ಅದರ್ಶಯತ್ಪಾಂಡವಾನ್ ಧಾರ್ತರಾಷ್ಟ್ರಾನ್**
**ಭೀಷ್ಮ ದ್ರೋಣ ದ್ರೌಣಿ ಕೃಪಾನ್ ಸಕರ್ಣಾನ್**
**ನಿರಾಯುಧಾಂ ಶ್ಚಕ್ರ ಏಕ ಕ್ಷಣೇನ**
**ಲೋಕ ಶ್ರೇಷ್ಠಾನ್ ದೈವತ್ಯೆ ರಪ್ಯ ಜೇಯಾನ್** ||೭೮

'ಆ ಕೇಶವನೇ ಈ ಶ್ರೀಕೃಷ್ಣನು ಎಂಬ ಸಂಶಯವಿದ್ದಲ್ಲಿ ಈಗ ಈತನ ಸಾಮರ್ಥ್ಯವನ್ನು ಪ್ರತ್ಯಕ್ಷ ಕಾಣುವಿರಿ' ಎಂದು ನಾರದರು ಹೇಳಿದರು. ಅಷ್ಟರಲ್ಲಿ ಕುಂತಿಯು ಅಲ್ಲಿಗೆ ಬಂದು, ಇಷ್ಟೆಲ್ಲ ರಾಜರನ್ನು ಗೆದ್ದ ಪಕ್ಷದಲ್ಲಿ ನೀನೇ 'ಧನ್ಯನು-ಆಶ್ಚರ್ಯನು' ಎಂದು ಹೇಳಿದಳು. ಆಗ ಶ್ರೀಕೃಷ್ಣನು ಕುಂತಿಯ ಇಚ್ಛೆಯನ್ನು ಪೂರ್ತಿ ಮಾಡಲೋಸುಗ ದುರ್ಯೋಧನ, ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪಾಚಾರ್ಯ, ಕರ್ಣ ಮತ್ತು ಇತರ ಶ್ರೇಷ್ಠ ರಾಜರನ್ನು ಅಷ್ಟೇ ಅಲ್ಲ ದೇವತೆಗಳೇ ಅವತರಿಸಿ ಬಂದ ಪಾಂಡವರನ್ನೂ ಕ್ಷಣಾರ್ಧದಲ್ಲಿ ನಿರಾಯುಧರನ್ನಾಗಿ ಮಾಡಿದನು. ಸಾಮರ್ಥ್ಯದಲ್ಲಿ ಶ್ರೇಷ್ಠನು ಎಂಬುದನ್ನು ತೋರಿಸಿಕೊಟ್ಟನು.

> ವ್ರತಂ ಭೀಮಸ್ಯಾಸ್ತಿ ನೈವಾಭಿ ಕೃಷ್ಣ –
> ಮಿಯಾಮಿತಿ ಸ್ವಾ ಜ್ಞಯಾ ತಸ್ಯ ವಿಷ್ಣೋಃ
> ಚಕ್ರಂ ರಥಸ್ಯಾಗ್ರಹೀತ್ಸ ಪ್ರಣಮ್ಯ
> ಕೃಷ್ಣಂ ಸ ತಂ ಕೇಶವೋsಪಾ ಹರಚ್ಚ ॥೭೯॥

"ಪರಮಾತ್ಮನ ಕೂಡ ಯುದ್ಧ ಮಾಡಬಾರದು" ಇದು ಭೀಮನ ವ್ರತ (ಅಂತೆಯೇ ಹಿಂದೆ ಗದಾಭ್ಯಾಸವನ್ನು ಮಾಡಿಲ್ಲ.) ಈಗ ಕೃಷ್ಣನ ಆಜ್ಞೆಯಿಂದಲೇ, ಆಜ್ಞೆಯ ಉಲ್ಲಂಘನೆಯಾಗಬಾರದು ಎನ್ನುವ ಉದ್ದೇಶದಿಂದ 'ಕೃಷ್ಣನ ಸಾಮರ್ಥ್ಯವನ್ನು ಜಗತ್ತಿಗೆ ತೋರುವುದಕ್ಕಾಗಿ' ರಥಚಕ್ರವನ್ನೇ ಹಿಡಿದು ನಿಂತನು, ನಮಿಸಿದನು. ಶ್ರೀಕೃಷ್ಣನು ತನ್ನ ಬಾಹುಬಲದಿಂದ ರಥಚಕ್ರವನ್ನು ಕೆಡವಿ, ಭೀಮನನ್ನು ದೂರ ಸರಿಸಿದನು.

> ಏವಂ ಕ್ರೀಡಂ ತೋsಪ್ಯಾತ್ಮ ಶಕ್ತ್ಯಾ ಪ್ರಯತ್ನಂ
> ಕುರ್ವಂ ತಸ್ತೇ ವಿಜಿತಾಃ ಕೇಶವೇನ
> ತತಃ ಸರ್ವೇ ನೇಮುರಸ್ಮೈ ಪೃಥಾ ಚ
> ಸ ವಿಸ್ಮಯಾ ವಾಸುದೇವಂ ನನಾಮ ॥೮೦॥

ಈ ರೀತಿ ಶ್ರೀಕೃಷ್ಣನಿಗೆ ಕ್ರೀಡೆಯಾಗಿದ್ದರೂ, ಇತರರೆಲ್ಲ ಸಾಕಷ್ಟು ತಮ್ಮ ತಮ್ಮ ಶಕ್ತಿಯಿಂದ ಹೋರಾಡಿದರು, ಪ್ರಯತ್ನಿಸಿದರು. ಕೇಶವನು (ಶ್ರೀಕೃಷ್ಣನು) ಎಲ್ಲರನ್ನು ಸೋಲಿಸಿದನು. ಸೋತ ರಾಜರೆಲ್ಲರೂ ಆ ಶ್ರೀಕೃಷ್ಣನಿಗೆ ನಮಸ್ಕರಿಸಿದರು. ಕುಂತಿಯೂ ಕೂಡ ವಾಸುದೇವನ ಸುತಗೆ ವಂದಿಸಿದಳು. ಈ ಘಟನೆ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತು.

> ಏವಂ ವಿಧ್ಯಾನ್ಯದ್ಭುತಾನೀಹ ಕೃಷ್ಣೇ
> ದೃಷ್ಟಾನಿ ವಃ ಶತಸಾಹಸ್ರಶಶ್ಚ
> ತಸ್ಮಾ ದೇಷ ಹ್ಯದ್ಭು ತೋsತ್ಯುತ್ತಮೇಶ್ಚೇ
> ತ್ಯುಕ್ತಾ ನೇಮುಸ್ತೇsಖಿಲಾ ವಾಸುದೇವಮ್ ॥೮೧॥

'ನೀವು ನೋಡಿದ ಕಾರ್ಯಗಳಿಗಿಂತ ನೂರಾರು, ಸಾವಿರಾರು ಪಟ್ಟು ಅಧಿಕ ಕಾರ್ಯಗಳು ಶ್ರೀಕೃಷ್ಣನಿಂದ ಆಗಿವೆ. ಅದಕ್ಕಾಗಿ ಆತನು ಆಶ್ಚರ್ಯನು ಅದ್ಭುತನು

ಆಗಿದ್ದಾನೆ' ಎಂದು ನಾರದರು ಹೇಳಿದಾಗ ಎಲ್ಲಾ ರಾಜರು ಕೂಡ ವಾಸುದೇವನನ್ನು ನಮಸ್ಕರಿಸಿದರು.

**ವಾಯ್ವಾಜ್ಞಯಾ ವಾಯುಶಿಷ್ಯಃ ಸ ಸತ್ಯ-**
**ಮಿತ್ಯಾದ್ಯುಕ್ತ್ವಾ ನಾರದೋ ರುಕ್ಮಿಣೀಂ ಚ**
**ಸ್ತುತ್ವಾ ಪುಷ್ಪಂ ಪಾರಿಜಾತಸ್ಯ ದತ್ವಾ**
**ಯಯೌ ಲೋಕಂ ಕ್ಷಿಪ್ರ ಮಜ್ಜೋದ್ಭವಸ್ಯ ॥೮೨॥**

ವಾಯುದೇವರ ಶಿಷ್ಯರಾದ ನಾರದರು ವಾಯುವಿನ ಆಜ್ಞೆಯಿಂದಲೇ (ನಾರದರು) ಬಂದು, ಶ್ರೀಹರಿಯ ಮಹಿಮೆ ಮತ್ತು ದಕ್ಷಿಣಾದೇವಿಯ (ರುಕ್ಮಿಣಿಯ) ಮಹಿಮೆಯನ್ನು ನೆರೆದ ಎಲ್ಲ ರಾಜರಿಗೆ ತೋರಿ, ರುಕ್ಮಿಣಿಯನ್ನು ಸ್ತುತಿಸಿ, ಆಕೆಗಾಗಿ ತಂದ ಪಾರಿಜಾತ ಪುಷ್ಪವನ್ನು ಇತ್ತು (ಅರ್ಪಿಸಿ) ಕಮಲೋದ್ಭವನಾದ ಬ್ರಹ್ಮನ ಸತ್ಯ ಲೋಕಕ್ಕೆ ತೆರಳಿದರು.

**ಸಾಕ್ಷಾತ್ ಸತ್ಯಾ ರುಕ್ಮಿಣೀತ್ಯೇಕ ಸಂವಿತ್**
**ದ್ವಿಧಾಭೂತಾ ನಾತ್ರ ಭೇದೋಽಸ್ತಿ ಕಶ್ಚಿತ್**
**ತಥಾಪಿ ಸಾ ಪ್ರಮದಾನಾಂ ಸ್ವಭಾವ-**
**ಪ್ರಕಾಶನಾರ್ಥಂ ಕುಪಿತೇವಾಸ ಸತ್ಯಾ ॥೮೩॥**

ಸಾಕ್ಷಾತ್ ಲಕ್ಷ್ಮಿಯು ಒಂದೇ ರೂಪವಾಗಿದ್ದರೂ, ಇಲ್ಲಿ ರುಕ್ಮಿಣಿ ಮತ್ತು ಸತ್ಯಭಾಮಾ ಎಂದು ಎರಡು ರೂಪಗಳಲ್ಲಿ ಅವತರಿಸಿದ್ದಾರೆ. ಆದರೂ ಅವರಲ್ಲಿ ಕಿಂಚಿತ್ತೂ ಭೇದವಿಲ್ಲ. ಆದರೂ ಕೂಡ ಸ್ತ್ರೀಯರ ಸ್ವಭಾವವನ್ನು ಪ್ರದರ್ಶಿಸಲು ಸತ್ಯಭಾಮೆಯು ಕುಪಿತಳಾದಂತೆ ನಟಿಸಿದಳು.

**ಸಾಕಂ ರುಕ್ಮಿಣ್ಯಾ ರಾಜಮಧ್ಯೇ ಪ್ರವೇಶಾತ್**
**ಸ್ತವಾದೃಷೇ ಪುಷ್ಪದಾನಾಚ್ಚ ದೇವೀಂ**
**ಕೋಪಾನನಂ ದರ್ಶಯಂತೀಮುವಾಚ**
**ವಿಡಂಬನಾರ್ಥಂ ಕಾಮಿಜನಸ್ಯ ಕೃಷ್ಣಃ ॥೮೪॥**

ಇದರಲ್ಲಿ ಸತ್ಯಭಾಮೆಯ ಕೋಪಕ್ಕೆ ಕಾರಣಗಳನ್ನು ಕೊಡಲಾಗಿದೆ.

೧) ರುಕ್ಮಿಣಿಯ ಸಹಿತನಾಗಿ (ತನ್ನನ್ನು ಬಿಟ್ಟು) ಶ್ರೀಕೃಷ್ಣನು ರಾಜರ ಮಧ್ಯದಲ್ಲಿ ಬಂದನು.

೨) ನಾರದರು ರುಕ್ಮಿಣಿಯನ್ನೇ ಚೆನ್ನಾಗಿ ಹೊಗಳಿದ್ದಾರೆ. ಅಲ್ಲದೇ

೩) ತ್ರಿಲೋಕ ಪ್ರಸಿದ್ಧವಾದ ಪಾರಿಜಾತವನ್ನು ಆಕೆಗೆಯೇ ಅರ್ಪಿಸಿದ್ದಾರೆ. ರುಕ್ಮಿಣಿಯು ಆ ಪುಷ್ಪವನ್ನು ಧರಿಸಿಯೇ ಬಂದಿದ್ದಾಳೆ. ಇದೆಲ್ಲವನ್ನು ಕಂಡು ಸತ್ಯಭಾಮೆಯು ಕೋಪಗೊಂಡಿದ್ದಾಳೆ. ಸಿಟ್ಟಿನ ಮುಖವನ್ನು ಪ್ರದರ್ಶಿಸಿದ ಆ ಸತ್ಯಭಾಮೆಯನ್ನು ಕುರಿತು ಕಾಮಾತುರನಾದ ಮಾನವನಂತೆ ನಟಿಸಿ (ವಿಡಂಬನಕ್ಕಾಗಿ) ಹೀಗೆ ಹೇಳಿದನು.

ದಾತಾಸ್ಮ್ಯಹಂ ಪಾರಿಜಾತಂ ತರುಂ ತ
ಇತ್ಯೇವ ತತ್ರಾಥಾಗಮದ್ವಾಸ ವೋಽಪಿ
ಸರ್ವೈರ್ದೇವೈರ್ಭೌಮಜಿತೋಽಪ್ಯದಿತ್ಯಾ
ಸ್ತೇನೈವಾಥೊ ಕುಂಡಲಾಭ್ಯಾಂ ಹೃತಾಭ್ಯಾಮ್ ॥೮೫॥

ಸತ್ಯಭಾಮೆಯ ಸಿಟ್ಟನ್ನು ಕಂಡು ಶ್ರೀಕೃಷ್ಣನು "ನಿನಗೆ ಪಾರಿಜಾತ ಗಿಡವನ್ನೇ ತಂದುಕೊಡುತ್ತೇನೆ" ಎಂದು ಹೇಳುತ್ತಿರುವಾಗ ಇಂದ್ರನು ಬಂದು, "ನರಕಾಸುರನು ನಮ್ಮನ್ನೆಲ್ಲರನ್ನು ಸೋಲಿಸಿದ್ದಾನೆ. ಅಷ್ಟೇ ಅಲ್ಲ ಅವನು ಅದಿತಿಯ ಎರಡು ಕುಂಡಲ (ಕರ್ಣನ ಆಭರಣ) ಗಳನ್ನು ಅಪಹರಿಸಿದ್ದಾನೆ" ಎಂದು ಹೇಳಿದನು.

ತದೈವಾಗುರ್ಮುನಯಸ್ತೇನನನು (ತಾ) ನ್ನಾ
ಬದರ್ಯಾಸ್ತೇ ಸರ್ವ ಏತ್ಯಾಶು ಕೃಷ್ಣಂ
ಯಯಾಚಿರೇ ಭೌಮವಧಾಯನತ್ವಾ
ಸ್ತುತ್ವಾ ಸ್ತೋ ತ್ರೈರ್ವೈದಿಕೈಸ್ತಾಂ ತ್ರಿಕೈಶ್ಚ ॥೮೬॥

ಅದೇ ಸಮಯಕ್ಕೆ ಬದರಿಯಿಂದ ಕೆಲವು ಮುನಿಗಳು ಬಂದು, ನರಕಾಸುರನನ್ನು ವಧಿಸುವುದಕ್ಕಾಗಿ ಕೃಷ್ಣನಿಗೆ ಅನೇಕ ವೈದಿಕ, ತಾಂತ್ರಿಕ ಶ್ಲೋಕಗಳಿಂದ ಸ್ತೋತ್ರಗಳಿಂದ ಪ್ರಾರ್ಥಿಸಿದರು. (ಅವರು ಕೂಡ ನರಕಾಸುರನಿಂದ ನೊಂದಿದ್ದರು.)

ಇಂದ್ರೇಣ ದೇವೈ ಸಹಿತೇನ ಯಾಚಿತೋ
ವಿಪ್ರೈಶ್ಚ ಸಸ್ಮಾರ ವಿಹಂಗ ರಾಜಂ
ಆಗಮ್ಯ ನತ್ವಾ ಪುರತಃ ಸ್ಥಿತಂ ತ
ಮಾರುಹ್ಯ ಸತ್ಯಾಸಹಿತೋ ಯಯೌ ಹರಿಃ ॥೮೭॥

ದೇವತೆಗಳಿಂದಲೂ, ಋಷಿ ಮುನಿಗಳಿಂದಲೂ ಪ್ರಾರ್ಥಿಸಿಕೊಂಡ ಹರಿಃ ಪಕ್ಷಿ ಶ್ರೇಷ್ಠನಾದ ಗರುಡನನ್ನು ಸ್ಮರಿಸಿದರು. ಕೂಡಲೇ ಗರುಡನು ಬಂದು ನಮಸ್ಕರಿಸಿ ಮುಂದೆನಿಂತನು. ಆಗ ಶ್ರೀಕೃಷ್ಣನು ಸತ್ಯಭಾಮೆಯ ಸಹಿತನಾಗಿ ಆರೂಢನಾಗಿ ಹೊರಟನು.

ನಿತ್ಯೈವ ಯಾಪ್ರಕೃತಿಃ ಸ್ವೇಚ್ಛಯೈವ
ಜಗಚ್ಛಿ ಕ್ಷಾರ್ಥಂ ದ್ವಾದಶೀಂ ಭೀಮ ಸಂಜ್ಞಾಂ
ಉಪೋಷ್ಯ ಚಕ್ರೇ ಕೋಟಿಧಾರಾ ಜಲಸ್ಯ
ವಿಷ್ಣೋಃ ಪ್ರೀತ್ಯರ್ಥಂ ಸೈವ ಹಿ ಸತ್ಯಭಾಮಾ ॥೮೮॥

ನಿತ್ಯವಾದ ಪ್ರಕೃತಿಯೇ ಸತ್ಯಭಾಮೆಯು. ಆಕೆಯು ಸ್ವಇಚ್ಛೆಯಿಂದಲೇ 'ಭೀಮ' ಎಂಬ ದ್ವಾದಶಿ ವ್ರತವನ್ನು ಮಾಡುವುದಕ್ಕಾಗಿ, ಕೋಟಿಧಾರೆಗಳಿಂದ ಕೂಡಿದ ನೀರಿನಿಂದ ಸ್ನಾನ ಮಾಡಿ ವ್ರತವನ್ನು ಕೈಕೊಂಡಳು. ಈ ವ್ರತ, ಪರಮಾತ್ಮನ ಪ್ರೀತ್ಯರ್ಥ ವಾಗಿಯೂ, ಲೋಕ ಶಿಕ್ಷಣಕ್ಕಾಗಿಯೂ ಪ್ರಾರಂಭಿಸಿದಳು.

ವಿ. ವಿ. : ಮಾಘಶುದ್ಧ ದ್ವಾದಶಿ 'ಭೀಮದ್ವಾದಶಿ'.

**ತಯಾಯುಕ್ತೋ ಗರುಡಸ್ಕಂಧ ಸಂಸ್ಥೋ**
**ದೂರಾನುಯಾತೋ ವಜ್ರ ಭೃತಾಪ್ಯನುಜ್ಞಾಂ**
**ದತ್ವಾಮುಷ್ಮೈ ಪ್ರಯಯೌ ವಾಯು ಜುಷ್ಟಾ**
**ಮಾಶಾಂ ಕೃಷ್ಣೋ ಭೌಮವಧೇ ಧೃತಾತ್ಮಾ** ||೮೯||

ಸತ್ಯಭಾಮೆಯ ಸಹಿತಾಗಿ ಶ್ರೀಕೃಷ್ಣನು ಗರುಡನ ಮೇಲೆ ಕುಳಿತು ಬಹುದೂರ ನಡೆದನು. ವಜ್ರಾಯುಧನಾದ ಇಂದ್ರನು, ಅವರ ಹಿಂದೆಯೇ ಹಿಂಬಾಲಿಸಿದನು. ಶ್ರೀಕೃಷ್ಣನು ಆತನಿಗೆ ಹಿಂದಿರುಗಿ ತನ್ನ ಲೋಕಕ್ಕೆ ಹೋಗಲು ಆಜ್ಞೆಯನ್ನಿತ್ತನು. ತಾನು ನರಕಾಸುರನನ್ನು ಕೊಲ್ಲಲು ನಿಶ್ಚಯಿಸಿ, ವಾಯುವು ಅಧಿಪತಿಯಾದ ದಿಕ್ಕು ಅಂದರೆ ವಾಯುವ್ಯ ದಿಕ್ಕಿನತ್ತ ನಡೆದನು.

**ಭೌಮೋ ಹ್ಯಾಸೀದ್ಬ್ರಹ್ಮ ವರಾದವಧ್ಯೋ**
**ನ ಶಸ್ತ್ರ ಭೃಜ್ಜೇಯಸ ಇತ್ಯ ಮುಕ್ಷ್ಮೈ**
**ದತ್ತೋ ವರೋ ಬ್ರಹ್ಮಣಾ ತದ್ವದೇವ**
**ತಸ್ಯಾ ಮಾತ್ಯಾನಾಂ ತದ್ವದವಧ್ಯ ತಾ ಚ** ||೯೦||

ನರಕಾಸುರನಿಗೆ ಬ್ರಹ್ಮನಿಂದ ಅವಧ್ಯ, ಅಜೇಯ ಎಂಬ ವರಗಳಿದ್ದವು. (ಯಾರೂ ಅವನನ್ನು ಕೊಲ್ಲುವಂತಿರಲಿಲ್ಲ. ಶಸ್ತ್ರಸಜ್ಜಿತನಾದ ಅವನನ್ನು ಗೆಲ್ಲುವಂತೆಯೂ ಇರಲಿಲ್ಲ) ಅದೇರೀತಿಯ ವರಗಳು ನರಕಾಸುರನ ಆಮಾತ್ಯರಿಗೂ ಬ್ರಹ್ಮನಿಂದ ದೊರೆತಿದ್ದವು.

**ಭೌಮೇನಜೇಯ (ಜಯ್ಯ) ತ್ವಮಪಿ ಹ್ಯಮೀಷಾಂ**
**ದತ್ತಂ ಭೌಮಾಯ ಬ್ರಹ್ಮಣಾ ಕ್ರೋಡರೂಪಾತ್**
**ವಪ್ಲೋರ್ಜಾತಾಯಾಸ್ಯ ದುರ್ಗಂ ಚ ದತ್ತಂ**
**ಪ್ರಾಗ್ಜ್ಯೋತಿಷಂ ನಾಮ ಪುರಂ ಸಮಸ್ತೈಃ** ||೯೧||

ಬ್ರಹ್ಮನಿಂದ ನರಕಾಸುರನಿಗೂ, ಆತನ ಮಂತ್ರಿಗಳಿಗೂ ಇಂಥ ವರ ದೊರೆಯ ಬೇಕಾದರೆ ಒಂದು ಮಹತ್ವದ ಕಾರಣವಿರಲೇಬೇಕು. ಪರಮಾತ್ಮನ 'ವರಾಹ' ಅವತಾರವಾಗುವುದೇ ಇದಕ್ಕೆ ಕಾರಣ. ಆ ನರಕಾಸುರನು 'ಪ್ರಾಗ್ಜ್ಯೋತಿಷ' ಪುರದಲ್ಲಿರುತ್ತಿದ್ದನು. ಆ ಪಟ್ಟಣದ ರಕ್ಷಣೆಗಾಗಿ ಅನೇಕ ದುರ್ಗಗಳಿದ್ದವು. ಆದ್ದರಿಂದ ಆ ಪಟ್ಟಣದ ಪ್ರವೇಶ ಇತರರಿಗೆ ದುರ್ಗಮವಾಗಿತ್ತು. ಆ ಪಟ್ಟಣವು ಎಲ್ಲ ಭಾಗ್ಯಗಳಿಂದ ಕೂಡಿತ್ತು.

**ಆಸೀದ್ಬಾಹ್ಯೇ ಗಿರಿದುರ್ಗಂ ತದಂತಃ**
**ಪಾನೀಯದುರ್ಗಂ ಮೌರವಂ ಪಾಶದುರ್ಗಂ**
**ತಸ್ಯಾಪ್ಯಂತಃ ಕ್ಷುರಧಾರೋಪಮಂ ತತ್**
**ಪಾಶಶ್ಚ ತೇ ಷಟ್ಸಹಸ್ರಾಸ್ತು (ಶ್ಚ) ಘೋರಾಃ** ||೯೨||

ಆ ಪಟ್ಟಣದ ಹೊರಭಾಗದಲ್ಲಿ ಮೊದಲು ಗಿರಿದುರ್ಗ (ಬೆಟ್ಟಗಳಿಂದ ರಕ್ಷಣೆ) ಇದ್ದಿತು. ಅದರಲ್ಲಿ ಜಲದುರ್ಗ, ನಂತರ ಮುರನೆಂಬ ರಾಕ್ಷಸನಿಂದ ನಿರ್ಮಿತವಾದ ತೀಕ್ಷ್ಣ

ಮತ್ತು ಕ್ರೂರವಾದ ಪಾಶಗಳಿಂದ ನಿರ್ಮಿಸಲ್ಪಟ್ಟ ಪಾಶದುರ್ಗವಿದ್ದಿತು. ಅದು ಆರು ಸಾವಿರ ಪಾಶಗಳಿಂದ ನಿರ್ಮಿತವಾಗಿದ್ದಿತು.

**ಅಭೇದ್ಯತ್ವಮರಿ ಭಿರತಾರ್ಯೇತಾ ಚ**
**ದತ್ತಾ ದುರ್ಗಾಣಾಂ ಬ್ರಹ್ಮಣಾರಾಧಿತೇನ ॥೯೩॥**

ನರಕಾಸುರನು ಬ್ರಹ್ಮನನ್ನು ಆರಾಧಿಸಿ ವರಗಳನ್ನು ಪಡೆದುದರಿಂದ ಆ ದುರ್ಗಗಳು ಶತ್ರುಗಳಿಗೆ ಅಬೇಧ್ಯವೇ ಆಗಿದ್ದವು.

ವಿ. ವಿ. : ಗಿರಿದುರ್ಗ ಮತ್ತು ಪಾಶದುರ್ಗಗಳನ್ನು ಭೇದಿಸಿ ಪ್ರವೇಶ ಗೈಯಲು ಸಾಧ್ಯವಾಗಿರಲಿಲ್ಲ. ಜಲದುರ್ಗವು ದಾಟಲು ಅಸಾಧ್ಯವಾಗಿದ್ದಿತು.

**ತಸ್ಯಾ ಮಾತ್ಯಾಃ ಪೀಠ ಮುರೌ ನಿಶುಂಭ**
**ಹಯಗ್ರೀವೌ ಪಂಚಜನಶ್ಚ ಶೂರಾಃ**
**ಸಂಕಲ್ಪ್ಯ ತಾನ್ ಲೋಕಪಾಲಾ ನಹಂ ಚ**
**ಬ್ರಹ್ಮೇ ತ್ಯದ್ಧಾ ಭಾಷ ಮಾಣಃ ಸ ಆಸ್ತೇ ॥೯೪॥**

ಆ ನರಕಾಸುರನಿಗೆ, ಮುರ, ಪೀಠ, ನಿಶುಂಭ, ಹಯಗ್ರೀವ ಹಾಗೂ ಪಂಚಜನ ಎಂಬ ಐದುಜನ ಮಂತ್ರಿಗಳಿದ್ದರು. ಅವರು ಮಹಾಶೂರರು ಕೂಡ. ಅಂತೆ ನರಕಾಸುರನು ಅವರನ್ನು ಲೋಕಪಾಲಕನ್ನಾಗಿ ಮಾಡಿ, ತಾನು ಬ್ರಹ್ಮನೆಂದೇ ದೃಪ್ತನಾಗಿದ್ದನು. ಅದರಂತೆ ಹೇಳುತ್ತಲೂ ಇದ್ದನು.

**ಹಂತುಂ ಕೃಷ್ಣೋ ನರಕಂ ತತ್ರಗತ್ವಾ**
**ಗಿರಿಂ ದುರ್ಗಂ ಗದಯಾ ನಿರ್ಬಿಭೇದ**
**ವಾಯವ್ಯಾಸ್ತ್ರೇಣೋದಕಂ ಶೋಷಯಿತ್ವಾ**
**ಚಕರ್ತ ಖಡ್ಗೇನ ಮುರಸ್ಯ ಪಾಶಾನ್ ॥೯೫॥**

ಶ್ರೀಕೃಷ್ಣನು ನರಕಾಸುರನನ್ನು ಕೊಲ್ಲುವುದಕ್ಕಾಗಿ ಅಲ್ಲಿಗೆ ಬಂದನು. (ಹೋದನು) ಮೊದಲು ಗಿರಿದುರ್ಗವನ್ನು ತನ್ನ ಗದೆಯಿಂದ ಆಯಾಸವಿಲ್ಲದೆ ಭೇದಿಸಿದನು. ನಂತರ ಜಲದುರ್ಗವನ್ನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಒಣಗಿಸಿದನು. ಖಡ್ಗದಿಂದ ಮುರನು ನಿರ್ಮಿಸಿದ ಪಾಶದುರ್ಗವನ್ನು ಕತ್ತರಿಸಿ ನಾಶಗೈದನು.

**ಅಥಾಭಿಪೇತು ರ್ಮುರಪೀಠೌ ನಿಶುಂಭ**
**ಹಯಗ್ರೀವೌ ಪಂಚಜನಶ್ಚ ಶೂರಾಃ (ದೈತ್ಯಾಃ)**
**ತಾನ್ ಶೈಲ ಶಸ್ತ್ರಾಸ್ತ್ರ ಶಿಲಾಭಿ ವರ್ಷಿಣಃ**
**ಚಕ್ರೇ ವ್ಯಸೂಂಶ್ಚಕ್ರ ನಿಕೃತ್ತ ಕಂಧರಾನ್ ॥೯೬॥**

ಅನಂತರ ಮುರ, ಪೀಠ, ನಿಶುಂಭ ಹಯಗ್ರೀವ ಮತ್ತು ಪಂಚಜನ ಈ ಐದು ಜನ ಶೂರ ದೈತ್ಯರು, ಪರ್ವತಗಳನ್ನು ಕಲ್ಲು ಬಂಡೆಗಳನ್ನು ಭೀಕರ ಅಸ್ತ್ರಗಳನ್ನು ವರ್ಷಿಸುತ್ತ

ಕೃಷ್ಣನಿಗೆ ಎದುರಾದರು. ಶ್ರೀಕೃಷ್ಣನು ಆ ಅಮಾತ್ಯರನ್ನು ತಲೆಗಳನ್ನು, ಕಂಠದಲ್ಲಿಯ ಹಾರಗಳನ್ನು ಕೂಡಿಯೇ ಚಕ್ರದಿಂದ ಕತ್ತರಿಸಿ ಹಾಕಿದನು.

**ತೇಷಾಂ ಸುತಾಃ ಸಪ್ತ ಸಪ್ತೋರುವೀರ್ಯಾ**
**ವರಾದವಧ್ಯಾ ಗಿರಿಶಸ್ಯಾಭಿಷೇತುಃ**
**ತಾನಸ್ತ್ರ ಶಸ್ತ್ರಾಭಿಮುಚಃ ಶರೋತ್ತಮೈಃ**
**ಸಮರ್ಪಯಾಮಾಸ ಚ (ಸ) ಮೃತ್ಯವೇಽಚ್ಯುತಃ ॥೯೭॥**

ಆ ಅಮಾತ್ಯರಿಗೆ ಒಬ್ಬೊಬ್ಬರಿಗೆ ಏಳೇಳು ಜನ ಮಕ್ಕಳು. ಅವರೂ ಮಹಾ ಶೂರರು. ಮಹಾರುದ್ರದೇವರ ವರಬಲದಿಂದ ಅವಧ್ಯರಾದವರು. ಅವರೆಲ್ಲರೂ ಒಟ್ಟಿಗೆ ಶ್ರೀಕೃಷ್ಣನಿಗೆ ಎದುರಾದರು. ಅಸ್ತ್ರ ಶಸ್ತ್ರಗಳ ಮಳೆಗರೆದರು. ಅಚ್ಯುತನಾದ ಶಸ್ತ್ರಗಳ ಪ್ರಭಾವದಿಂದ ನಾಶರಹಿತನು. ಶ್ರೀಕೃಷ್ಣನು ಅವರೆಲ್ಲರನ್ನು ಮೃತ್ಯುವಿಗೆ ಅರ್ಪಿಸಿದನು (ಕೊಂದನು).

**ಹತ್ವಾ ಪಂಚತ್ರಿಂಶತೋ ಮಂತ್ರಿ ಪುತ್ರಾನ್**
**ಜಗಾಮ ಭೌಮಸ್ಯ ಸಕಾಶ ಮಾಶು**
**ಶ್ರುತ್ವಾ ಭೌಮಃ ಕೃಷ್ಣ ಮಾಯಾಂ (ಯಾ) ತಮಾರಾ**
**ದ ಕ್ಷೌಹಿಣೀತ್ರಿಂಶ ಕೇನಾಭ್ಯ ಯಾತ್ತಂ ॥೯೮॥**

ಶ್ರೀಕೃಷ್ಣನು ಅಮಾತ್ಯರ ಮೂವತ್ತೈದು ಜನ ಮಕ್ಕಳನ್ನು ಕೊಂದು, ನರಕಾಸುರನ ಹತ್ತಿರ ವೇಗದಿಂದ ಆಗಮಿಸಿದನು. ಶ್ರೀಕೃಷ್ಣನು ಬರುತ್ತಿರುವ ಸಮಾಚಾರವನ್ನು ಕೇಳಿದ ನರಕಾಸುರನು ಅಕ್ಷೌಹಿಣೀ ಸೈನ್ಯ ಸಹಿತನಾಗಿ ಶ್ರೀಕೃಷ್ಣನಿಗೆ ಎದುರಾದನು.

**ಜಘ್ನೇ ಸೇನಾಂ ಗರುಡಃ ಪಕ್ಷಪಾತೈಃ**
**ಪಾದಂ ಶೇಷಂ (ಷಾಂ) ಕೇಶವ ಸಾಯ ಕೋಷ್ಠೈಃ ।**
**ಅಥಾಸ ಸಾದಾಶು ಭೌಮೋಽಚ್ಯುತಂ ತಂ**
**ಮುಂಚನ್ ಬಾಣಾ ನಸ್ತ್ರ ಸಮ್ಮಂತ್ರಿತಾನ್ ದ್ರಾಕ್ ॥೯೯॥**

ಗರುಡನು ತನ್ನ ರೆಕ್ಕೆಗಳಿಂದಲೇ ನಾಲ್ಕರಲ್ಲಿ ಒಂದು ಭಾಗದಷ್ಟು ಸೈನ್ಯ ವನ್ನು ಕೊಂದನು. ಉಳಿದದ್ದನ್ನು ಶ್ರೀಕೃಷ್ಣನು ನಾಶಪಡಿಸಿದನು. ಇದನ್ನು ಕಂಡ ನರಕಾಸುರನು ಮಂತ್ರಗಳಿಂದ ಸಜ್ಜಿತವಾದ ಬಾಣಗಳನ್ನು ತೆಗೆದುಕೊಂಡು ಶ್ರೀಕೃಷ್ಣನಿಗೆ ಎದುರಾದನು.

**ವಿವ್ಯಾಧ ತಂ ಕೇಶವಃ ಸಾಯಕೌಘ್ಯೈಃ**
**ಭೌಮಃ ಶತಘ್ನೀಂ ಬ್ರಹ್ಮದತ್ತಾ ಮುಂಚತ್ ॥೧೦೦॥**

ಎದುರಾದ ನರಕಾಸುರನನ್ನು ಕೇಶವನು ಬಾಣಗಳ ರಭಸದಿಂದ ಮೆತ್ತಗೆ ಮಾಡಿದನು. ನರಕನು ತನಗೆ ಬ್ರಹ್ಮನಿಂದ ದತ್ತವಾದ 'ಶತಘ್ನೀ' ಎಂಬ ಗದೆಯಿಂದ ಕೃಷ್ಣನಿಗೆ ಹೊಡೆದನು.

ಅಚ್ಛೇದ್ಯೋಽಭೇದ್ಯೋ ನಿತ್ಯ ಸಂವಿತ್ಸು ಖಾತ್ಮಾ
ನಿತ್ಯಾವ್ಯಯಃ ಪೂರ್ಣಶಕ್ತಿಃ ಸ ಕೃಷ್ಣಃ
ನಿ ಗೀರ್ಯಗದಾಂ ದೇವವರಃ ಶತಘ್ನೀಂ
ನಿತ್ಯಾಶ್ರಾಂತೋಽದರ್ಶಯ ಚ್ಛ್ರಾಂತ ವಚ್ಚ ॥೧೦೧॥

ಅಛೇದ್ಯನು, ಅಭೇದ್ಯನು, ನಿತ್ಯನು, ನಿತ್ಯಾನಂದ, ಅವ್ಯಯ, ಪೂರ್ಣ ಶಕ್ತಿಯುಳ್ಳ ಆ ಶ್ರೀಕೃಷ್ಣನು, ಆ ಗದೆಯನ್ನು ನುಂಗಿಯೇಬಿಟ್ಟನು. ಆದರಿಂದ ಆಯಾಸವನ್ನರಿಯದೇ ಇದ್ದ ಪರಮಾತ್ಮನು ಆಯಾಸಗೊಂಡವರಂತೆ ಪ್ರದರ್ಶಿಸಿ ನಟಿಸಿದನು.

ಬಹೂನ್ವರಾನ್ ಬ್ರಹ್ಮಣೋಽನ್ಯೇಷ್ವಮೋ ಘಾನ್
ಮಾಘೀಕೃತಾನ್ವೀಕ್ಷ್ಯ ಪರಾತ್ಪರೇಶಃ
ಭವೇತ್ಕಥಂ ಚ ದ್ರುಹುಮಾನೇನ ಯುಕ್ತ
ಇತ್ಯೇವ ಕೃಷ್ಣೋಽ ದರ್ಶಿಯ ಚ್ಛ್ರಾಂತ ವತ್ ಸ್ವಮ್ ॥೧೦೨॥

ಆ ನರಕಾಸುರನಿಗೆ ಅನೇಕ ವರಗಳಿದ್ದವು. ಇದುವರೆಗೆ (ಅವು) ಯಾವವೂ ವ್ಯರ್ಥವಾಗಿರಲಿಲ್ಲ. ಅಮೋಘವಾಗಿಯೇ ಇದ್ದವು. ಇಂದು ಶ್ರೀಕೃಷ್ಣನು ಎಲ್ಲ ವರಗಳನ್ನು ವ್ಯರ್ಥ ಮಾಡಿದನು. ಇವನ್ನು ಕಂಡ ಬ್ರಹ್ಮನು, ತನ್ನ ಮನದಲ್ಲಿ ಹೇಗೆ ನೊಂದಕೊಂಡನೋ ಎಂಬುದನ್ನು ತೋರಿಸುವಂತೆ ಶ್ರೀಕೃಷ್ಣನು ನೊಂದಂತೆ ತೋರಿಸಿದನು.

**ವಿ. ವಿ. :** ಬ್ರಹ್ಮನು ನರಕಾಸುರನಿಗೆ ವರಗಳನ್ನು ಕೊಡುವಾಗ ಅವನ ಭಕ್ತಿಗೆ ಮೆಚ್ಚಿ, ಪ್ರಸನ್ನನಾಗಿ, ಅಭಿಮಾನದಿಂದ ವರಗಳನ್ನು ಕೊಟ್ಟಿದ್ದನು. ಇಂದು ಅವೆಲ್ಲವೂ ವ್ಯರ್ಥವಾದದನ್ನು ಕೊಂಡು ಬ್ರಹ್ಮನು ನೊಂದುಕೊಳ್ಳಲಾರನೆ?

ತದಾ ದೃಪ್ತಂ ನರಕಂ ವೀಕ್ಷ್ಯ ದೇವೀ
ಸತ್ಯಾದದೇ ಕಾರ್ಮುಕಂ ಶಾಃರ್ಙ್ಗಸಂಜ್ಞಃ
ಚಕಾರ ತಂ ಯತಮಾನಂ ಚ ಭೌಮಂ
ನಿರಾಯುಧಂ ವಿರಥಂ ಚ ಕ್ಷಣೇನ ॥೧೦೩॥

ಇಷ್ಟಾದರೂ ನರಕಾಸುರನು ದರ್ಪದಿಂದಲೇ ಇದ್ದನು. ಇದನ್ನು ಕಂಡ ಸತ್ಯಭಾಮಾದೇವಿ, ಶ್ರೀಕೃಷ್ಣನಿಂದ ಶಾಂರ್ಙ್ಗವೆಂಬ ಬಿಲ್ಲನ್ನು ತೆಗೆದುಕೊಂಡು, ಹೋರಾಡತಕ್ಕ ನರಕನ ಬಾಣಗಳನ್ನು, ಆಯುಧಗಳನ್ನು ಕತ್ತರಿಸಿದಳು. ಅವನನ್ನು ವಿರಥನನ್ನಾಗಿ ಮಾಡಿದಳು.

ಆಲಿಂಗ್ಯ ಕೃಷ್ಣಃ ಸತ್ಯಭಾಮಾಂ ಪುನಶ್ಚ
ರಥಾಂತರೇ ಸಂಸ್ಥಿತಂ ಭೌಮಮುಗ್ರಂ
ಸೃಜಂತ ಮಸ್ತ್ರಾಣ್ಯರಿಣಾ ನಿಕೃತ್ತ –
ಸ್ಕಂಧಂ ಮೃತ್ಯೋರರ್ಪಯಾಮಾಸ ಶೀಘ್ರಮ್ ॥೧೦೪॥

ಶ್ರೀಕೃಷ್ಣನು ( ಸಂತುಷ್ಟನಾಗಿ ) ಸತ್ಯಭಾಮೆಯನ್ನು ಆಲಿಂಗಿಸಿದನು. ಪುನಃ ಆ ಉಗ್ರನಾದ ನರಕಾಸುರನು ಬೇರೊಂದು ರಥದಲ್ಲಿ ಆರೂಢನಾಗಿ, ಕ್ರೂರವಾದ ಬಾಣಗಳನ್ನು

ಬಿಡಹತ್ತಿದನು. ಶ್ರೀಕೃಷ್ಣನು ತನ್ನ ಚಕ್ರಾಯುಧದಿಂದ ನರಕನ ಶಿರಸ್ಸನ್ನು ಕತ್ತರಿಸಿದನು. ಕೂಡಲೇ ಅವನು ಮೃತ್ಯುವಿಗೆ ತುತ್ತಾದನು.

**ಸ ಮಂತ್ರಿಭಿರ್ಮಂತ್ರಿ ಪುತ್ರೈಃ ಸಮೇತೋ**
**ಜಗಾಮ ಕೃಷ್ಣಾವಜ್ಞ ಯಾಂಧಂ ತಮಶ್ಚ**
**ತದಾ ವಿಷ್ಣೋಃ ವಾಯುರಗಾಚ್ಚ ಕೃಷ್ಣ**
**ಮಂತಃ ಪುರಂ ಪ್ರಾವಿಶತ್ಸತ್ಯ ಯೋಃ ಶಃ** ||೧೦೫||

ಕೃಷ್ಣನೊಡನೆ ಯುದ್ಧ ಮಾಡಿ, ನರಕಾಸುರ, ಆತನ ಮಂತ್ರಿಗಳು, ಅವರ ಮಕ್ಕಳು ಎಲ್ಲರೂ ಹತರಾದರು. ಎಲ್ಲರೂ ಶ್ರೀಕೃಷ್ಣನ ನಿಂದೆ ಮಾಡಿದ ಪ್ರಯುಕ್ತ ಅಂಧಂತಮಸ್ಸಿಗೆ ಹೋದರು. ಅಸುರನಲ್ಲಿ ಆವಿಷ್ಟನಾದ ವಾಯು, ಶ್ರೀಕೃಷ್ಣನಲ್ಲಿ ಬಂದು ಪ್ರವೇಶಿಸಿದನು. ನಂತರ ಶ್ರೀಕೃಷ್ಣನು ಸತ್ಯಭಾಮೆಯೊಡಗೂಡಿ, ಅಸುರನ ಅರಮನೆ ಯನ್ನು ಪ್ರವೇಶಿಸಿದರು.

**ತದಾ ಭೂಮಿಃ ಪಂಚಭೂತಾವರಾ ಯಾ**
**ಯಸ್ಯಾಂ ಜಜ್ಞೇ ನರಕಃ ಶ್ರೀವರಾಹಾತ್**
**ಮೂಲ ಪ್ರಕೃತ್ಯೈವ ಭೂಮ್ನಾ ನಿತಾಂತ**
**ಮಾವಿಷ್ಟಾ ಯಾ ಸಾಗಾಮತ್ ಕೃಷ್ಣ ಪಾದೌ** ||೧೦೬||

ಪಂಚಭೂತಗಳಲ್ಲಿ ಭೂಮಿಯು ನಿಕೃಷ್ಟಳು. ಅವಳಲ್ಲಿ ವರಾಹ ರೂಪಿ ಪರಮಾತ್ಮನ ಬಂಬಂಧದಿಂದ ನರಕಾಸುರನು ಹುಟ್ಟಿದನು. ನರಕನ ಅವಸಾನದ ನಂತರ ಭೂಮಿಯು ಶ್ರೀಕೃಷ್ಣನ ಪಾದಕಮಲದಲ್ಲಿ ಸೇರಿದಳು.

ವಿ. ವಿ. : ಪಂಚಭೂತಗಳೊಂದಾದ ಭೂಮಿ, ವರಾಹನ ಪತ್ನಿ ಹೇಗಾದಳು? ಎಂಬ ಪ್ರಶ್ನೆಗೆ ಆಚಾರ್ಯರ ಸ್ಪಷ್ಟೀಕರಣವಿದೆ. ಮೂಲಪ್ರಕೃತಿಯು ಆ ಭೂಮಿಯಲ್ಲಿ ಆವಿಷ್ಟಳಾಗಿದ್ದಳು. ಆದಕ್ಕಾಗಿ ಸಂಬಂಧ ಸರಿಯೇ ಆಗಿದೆ.

ವರಾಹ ಪರಮಾತ್ಮ ಆತನ ಸ್ಪರ್ಶ ಅನ್ಯರಿಗೆ ಸಾಧ್ಯವಿಲ್ಲ. ಅಲ್ಲಿ ಲಕ್ಷ್ಮಿಯ ಆವೇಶ ಅಥವಾ ಅಂಶ ಇರಲೇಬೇಕು. ಇದು ನಿಯಮ. ಇಲ್ಲಿ ಆ ನಿಯಮ ಈಡೇರಿದೆ. ಅದಕ್ಕಾಗಿ ಸಂಬಂಧ ಯೋಗ್ಯವೇ.

**ಸಾದಿತ್ಯಾಸ್ತೇ ಕುಂಡಲೇ ಪಾದಯೋಶ್ಚ**
**ನಿಧಾಯ ಪೌತ್ರಂ ಭಗದತ್ತ ಸಂಜ್ಞಂ**
**ಸಮರ್ಪಯಾಮಾಸ ತಸ್ಯಾಭಿಷೇಕಂ**
**ಪ್ರಾಗ್ಜ್ಯೋತಿಷ್ಯೇ ಕಾರಯಾಮಾಸ ಕೃಷ್ಣಃ** ||೧೦೭||

ಆ ಭೂದೇವಿಯು ಅದಿತಿಯ ಕುಂಡಲಗಳನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದಳು. ಭಗದತ್ತನೆಂಬ ಮೊಮ್ಮಗನನ್ನು ಶ್ರೀಕೃಷ್ಣನ ಪಾದಗಳ ಮೇಲೆ ಹಾಕಿದಳು. ಶ್ರೀಕೃಷ್ಣನು ಆ ಭಗದತ್ತನಿಗೆ ಪ್ರಾಗ್ಜ್ಯೋತಿಷಪುರದಲ್ಲಿ ರಾಜ್ಯಾಭಿಷೇಕ ಮಾಡಿದನು.

ಸಂಸ್ಥಾಪ್ಯ ತಂ ಸರ್ವಕಿರಾತ ರಾಜ್ಯೇ
ಭೌಮಾಹೃತಂ ವೈಶ್ರವಣಾ ದ್ಬಲೇನ
ಶಿವೇನ ದತ್ತಂ ದನದಾಯಾತಿ ಸತ್ತ್ವಂ
ಭಗದತ್ತೇ ಧಾತ್ಸು ಪ್ರತೀಕಂ ರಮೇಶಃ
ಭಗದತ್ತೇಽಸ್ಯದಧಾತ್ಸು ಪ್ರತೀಕಮ್ ॥೧೦೮॥

ಶ್ರೀಕೃಷ್ಣನು ಭಗದತ್ತನನ್ನು ಅಲ್ಲಿಯ ರಾಜನನ್ನಾಗಿ ಮಾಡಿದನು. ಅದು ಕಿರಾತಕ ರಾಜ್ಯವಾಗಿತ್ತು. ನಂತರ ಆ ರಾಜನಿಗೆ ಶ್ರೀಕೃಷ್ಣನು 'ಸುಪ್ರತೀಕ' ಎಂಬ ಆನೆಯನ್ನು ಕೊಟ್ಟನು. ಸುಪ್ರತೀಕವು ಮೊದಲು ಶಿವನಿಂದ ಕುಬೇರನಿಗೆ ಕೊಡಲ್ಪಟ್ಟಿತ್ತು. ನರಕಾಸುರನು, ಬಲಾತ್ಕಾರದಿಂದ ಕುಬೇರನಿಂದ ಕಸಿದು ತಂದಿದ್ದನು.

ವಿ. ವಿ. : ನರಕಾಸುರನೇ ತಂದ ಆನೆಯನ್ನು ಭಗದತ್ತನಿಗೆ ಕೃಷ್ಣನು ಕೊಡುವುದರಲ್ಲಿ ಆಶ್ಚರ್ಯವೇನಿದೆ? ತಂದೆಯ ವಸ್ತು ಮಗನಿಗೆ ಸಿಗಲೇಬೇಕಾದದ್ದು ಅದು ನ್ಯಾಯವು ಕೂಡ.

ನಿಜ – ಆದರೆ ಶ್ರೀಕೃಷ್ಣನು ನರಕಾಸುರನನ್ನು, ಅವನ ಮಂತ್ರಿವರ್ಗ ಮತ್ತು ಸೈನ್ಯವನ್ನು ಕೊಂದು ಇಡೀ ರಾಜ್ಯವನ್ನೇ ಗೆದ್ದಿದ್ದಾನೆ. ಅಂದಮೇಲೆ ನರಕಾಸುರನ ವಸ್ತುವಿನ ಮೇಲಾಗಲಿ, ರಾಜ್ಯದ ಮೇಲಾಗಲಿ ಯಾರದೂ ಅಧಿಕಾರವಿರಲಿಲ್ಲ. ಶ್ರೀಕೃಷ್ಣನು ತಾನೇ ತೆಗೆದುಕೊಳ್ಳಬಹುದಾಗಿದ್ದಿತು. ಆ ಅನ್ಯಾಯ ಮಾಡಬಾರದೆಂದೇ ಶ್ರೀಕೃಷ್ಣನು ರಾಜ್ಯವನ್ನು ಮಗನಿಗೆ ಆ ಪ್ರಸಿದ್ಧ ಆನೆಯನ್ನು ತನ್ನ ಪರವಾಗಿ ಕೊಟ್ಟಿದ್ದಾನೆ.

ಕರೀಂದ್ರಮೇಕಂ ತಂ ನಿಧಾಯ್ಯೈವ ತಸ್ಮಿನ್
ಕೃತ್ವಾ ಪ್ರಸಾದಂ ಚ ವಸುಂದರಾಯಾಃ
ಚತುರ್ದಂತಾನ್ ಷಟ್ಸಹಸ್ರಾನ್ ಕರೀಂದ್ರಾನ್
ಪಯೋಬ್ಧಿಜಾನ್ ಪ್ರಾಹಿಣೋ ದ್ವಾರವತ್ಯೈಃ ॥೧೦೯॥

ಆನೆಗಳಲ್ಲಿ ಶ್ರೇಷ್ಠವಾದ ಸುಪ್ರತೀಕವನ್ನು ಭಗದತ್ತನಿಗೆ ಇತ್ತು, ಭೂಮಿಗೆ ಅನುಗ್ರಹ ಮಾಡಿ, ನಾಲ್ಕು ಕೋರೆಗಳುಳ್ಳ, ಕ್ಷೀರ ಸಮುದ್ರದಲ್ಲಿ ಉತ್ಪನ್ನವಾದ ಇತರ ಆರು ಸಾವಿರ ಆನೆಗಳನ್ನು ದ್ವಾರಾವತಿಗೆ ಕಳಿಸಿದನು.

ನರಾಧಿಪಾನ್ ದೇವಗಂಧರ್ವನಾಗಾನ್
ಜಿತ್ವಾನೀಂ ತಂ ಹೇಮರತ್ನೋಚ್ಚರಾಶಿಂ
ಶತದ್ವಯಂ ಯೋಜನಾನಾಂ ಸಮೃದ್ಧಂ
ಸಮಂತತಃ ಪ್ರಾಹಿಣೋತ್ ಸ್ವಾಂ ಪುರೀಂ ಸಃ ॥೧೧೦॥

ಅನೇಕ ರಾಜರನ್ನು, ದೇವತೆಗಳನ್ನು, ಗಂಧರ್ವರನ್ನು ನಾಗಗಳನ್ನು ಸೋಲಿಸಿ, ಗೆದ್ದು ತಂದ ಸುವರ್ಣ, ಶ್ರೇಷ್ಠ ರತ್ನಗಳ ರಾಶಿಗಳನ್ನು, ಎಲ್ಲವನ್ನು ಶ್ರೀಕೃಷ್ಣನು ತನ್ನ ಪಟ್ಟಣಕ್ಕೆ ಕಳಿಸಿಕೊಟ್ಟನು.

ಇಷ್ಟೆಲ್ಲವನ್ನು ನರಕಾಸುರನು ಎರಡುನೂರು ಯೋಜನ ವಿಸ್ತೀರ್ಣ ಮತ್ತು ಸಮೃದ್ಧವಾದ ಭಾಗದಿಂದ ಸಂಗ್ರಹಿಸಿದ್ದನು.

**ಮಹಾವೀರ್ಯೈರ್ನೈರ್ಋತೈ ರಾಕ್ಷಸೇಂದ್ರೈಃ**
**ಭೌಮಾನೀತೈರ್ನಿರ್ಋತಿಂ ಯೋಧಯಿತ್ವಾ**
**ಸ ಪ್ರಾಹಿಣೋತ್ಸರ್ವರತ್ನೋಚ್ಚಯರಾಶಿಂ**
**ಗಜಾಂಶ್ಚ ನಾರಾಯಣ ಆದಿ ದೇವಃ** ॥೧೧೧॥

ಮಹಾಪರಾಕ್ರಮಿಯಾದ ನರಕಾಸುರನು ನಿರ್ಋತಿಯಲ್ಲಿರತಕ್ಕ ರಾಕ್ಷಸ ಶ್ರೇಷ್ಠರನ್ನು ಸೋಲಿಸಿ, ನಿರ್ಋತಿ ಭಾಗದಲ್ಲಿರುವ ದೇವತೆಗಳನ್ನು ಸೋಲಿಸಿ ತಂದ ಅನೇಕ ಆನೆಗಳನ್ನು ಶ್ರೇಷ್ಠವಾದ ಮುತ್ತು ರತ್ನಗಳ ರಾಶಿಗಳನ್ನು ಆದಿದೇವನಾದ ನಾರಾಯಣನು ಕಳಿಸಿಕೊಟ್ಟನು.

**ತತ್ರಾಪಶ್ಯತ್ಕನ್ಯಕಾ ಭೂಮಿ ಪಾನಾಂ**
**ಭೌಮಾನೀತಾಃ ಸಮರೇ ತಾನ್ ವಿಜಿತ್ಯ**
**ದ್ವ್ಯಷ್ಟೌ ಸಹಸ್ರಾಣಿ ಶತಂ ಚ ರೂಪ–**
**ಶೀಲೋದಾರಾ ಅಕ್ಷತಾಃ ಸದ್ವ್ರತಸ್ಥಾಃ** ॥೧೧೨॥

ಆ ನರಕಾಸುರನು ಯುದ್ಧದಲ್ಲಿ ಅನೇಕ ರಾಜರನ್ನು ಗೆದ್ದು, ಅವರಲ್ಲಿದ್ದ ಹದಿನಾರು ಸಾವಿರದ ಒಂದುನೂರು ಶ್ರೇಷ್ಠ ಕನ್ನಿಕೆಯರನ್ನು ಬಲಾತ್ಕಾರದಿಂದ ತಂದಿದ್ದನು. ಅವರೆಲ್ಲರೂ ಶೀಲಯುತರಾಗಿಯೂ, ನಿರ್ದುಷ್ಟವಾದ ವ್ರತದಲ್ಲಿ ತೊಡಗಿದ್ದರು. ಇನ್ನು ಅವರು ಋತುಮತಿಯರೂ ಆಗಿರಲಿಲ್ಲ. ಒಳ್ಳೆ ಸುಂದರಿಯರೂ ಆಗಿದ್ದರು. ಅಂಥವರನ್ನು ಶ್ರೀಕೃಷ್ಣನು ಕಂಡನು.

**ಕೇವಲಂ ಅರಸು ಮಕ್ಕಳಲ್ಲ,**

**ಕಾಶ್ಚಿತ್ತತ್ರಾಸನ್‌ದೇವ ಗಂಧರ್ವ ಕನ್ಯಾಃ**
**ತಾಸಾಂ ಪ್ರಧಾನಾ ತ್ವಾಷ್ಟ್ರ ಪುತ್ರೀ ಕಶೇರುಃ**
**ಪುತ್ರಾ ಅಗ್ನೇಃ ಪೂರ್ವಮಾಸಂ ಶ್ಚ ತೇಽಥ**
**ಸ್ತ್ರೀತ್ವ ಪ್ರಾಪ್ತ್ಯೈ ಚಕ್ರುರಗ್ರ್ಯಂ (ರಗ್ರಂ) ತಪಶ್ಚ** ॥೧೧೩॥

ನರಕಾಸುರನು ಹಿಡಿದು ತಂದ ಕನ್ನೆಕೆಯರಲ್ಲಿ ಕೆಲವರು ದೇವ ಗಂಧರ್ವರೂ ಆಗಿದ್ದರು. ಅವರಲ್ಲಿ ತ್ವಾಷ್ಟ್ರನೆಂಬ ಆದಿತ್ಯನ ಮಗಳು ಗುಣಗಳಿಂದ, ಯೋಗ್ಯತೆಯಿಂದಲೂ ಹಿರಿಯಳು. ಆಕೆಯ ಹೆಸರು ಕಶೇರು. ಅವರೆಲ್ಲರೂ ಪೂರ್ವದಲ್ಲಿ ಅಗ್ನಿ ಪುತ್ರರು. ಅವರು ಸ್ತ್ರೀಯರಾಗಬೇಕೆಂದು ಬಯಸಿ ಉಗ್ರ ತಪಸ್ಸನ್ನಾಚರಿಸಿದರು.

**ವಿ. ವಿ. : ಈ ಕಾಲದಲ್ಲಿ ಸ್ತ್ರೀಯರು ಪುರುಷರಾಗಲು ಬಯಸುತ್ತಾರೆ. ಆದರೆ ಅಂದು ಶ್ರೀಕೃಷ್ಣನ ಅಂಗಸಂಗಕ್ಕಾಗಿ ಪುರುಷರು ಸ್ತ್ರೀಯರಾಗಬಯಸಿದರು. ಇವರಲ್ಲಿ ಶ್ರೀಕೃಷ್ಣನ ಮೋಹಕ ಸೌಂದರ್ಯವು ವ್ಯಕ್ತವಾಗುತ್ತದೆ. ಜೊತೆಯಲ್ಲಿ ಅಗ್ನಿಪುತ್ರರ ಭಗವದ್ಭಕ್ತಿಯೂ ಪ್ರಕಟವಾಗುತ್ತದೆ. ಅಲ್ಲವೇ?**

**ಭಾರ್ಯಾರ್ಥಿನ್ಯೋ ವಾಸುದೇವಸ್ಯ ಯೋಷಿ-**
**ತ್ತನುಂ ತಾಸಾ ಮಿಚ್ಛತೀನಾಂ ಸಮೀರಃ**
**ಅದಾದ್ವರಂ ತಪಸಾರಾಧಿತಃ ಸನ್**
**ಸ್ತ್ರೀ ಭೂತಾಸ್ತೇ (ಬದರೀಂ ಸಂ (ಸ) ಪ್ರಜಗ್ಮುಃ** ||೧೧೪||

ವಾಸುದೇವನ ಪತ್ನಿಯರಾಗಬೇಕೆಂದು ಬಯಸಿ, ಸ್ತ್ರೀ ಶರೀರವನ್ನು ಪಡೆಯುವುದಕ್ಕಾಗಿ, ಅವರೆಲ್ಲರೂ ವಾಯುದೇವರನ್ನು ಕುರಿತು ಘೋರ ತಪಸ್ಸನ್ನು ಮಾಡಿದರು. ವಾಯುದೇವರ ಅನುಗ್ರಹದಿಂದ ಸ್ತ್ರೀ ಜನ್ಮಗಳನ್ನು ಧರಿಸಿದರು. ನಂತರ ಅವರು ಬದರಿಕಾಶ್ರಮಕ್ಕೆ ನಡೆದರು. (ಈಗ ಅವರು ಅಪ್ಸರೆಯರಾಗಿದ್ದಾರೆ.)

**ವಿ. ವಿ. :** ಸ್ತ್ರೀಯರು ಪುರುಷರಾಗಲಿ, ಪುರುಷರು ಸ್ತ್ರೀಯರಾಗಲಿ ಆಗಬಹುದೇ? ಏಕಿಲ್ಲ.

ಇಂದಿನ ಈ ಇಪ್ಪತ್ತನೆ ಶತಮಾನದಲ್ಲಿ ಲಿಂಗ ಬದಲಾದ ಘಟನೆಗಳು ಅನೇಕ ಇವೆ ಎಂಬುದನ್ನು ಓದುಗರು ಬಲ್ಲರು. ಇಂದಿನ ಈ ವಿಜ್ಞಾನ ಯುಗದಲ್ಲಿ ವೈದ್ಯರು ಆ ಕಾರ್ಯ ಮಾಡಿದ್ದಾರೆ. ಅವರಂತೂ ದೇವತೆಗಳು. ಅವರಿಗೆ ಯಾವುದು ಅಸಾಧ್ಯ?

**ನಾರಾಯಣಂ ತತ್ರ ಶುಶ್ರೂಷ ಮಾಣಾಃ**
**ಪ್ರಾಪ್ಯಾಪ್ಸರಸ್ತ್ವಂ ರಾಜಕುಲೇಷು ಜಾತಾಃ**
**ಕಾಶ್ಚಿತ್ ಸ್ವರ್ಗೇ ತಾ ನಿಶಾಮ್ಯೈವ ಕೃಷ್ಣಂ**
**ವವ್ರುಂ ಪತಿಂ ಸರ್ವಗುಣಾಭಿ ರಾಮಮ್** ||೧೧೫||

ಆ ಬದರಿಕಾಶ್ರಮದಲ್ಲಿ ಆ ಅಪ್ಸರೆಯರು ನಾರಾಯಣನನ್ನು ಶ್ರೀವ್ಯಾರಜೇನ ಸೇವಿಸಿ ಅಪ್ಸರೆಯರಾಗಿ, ಮುಂದೆ ಅವರು ಅವರವರ ಗುಣ ತಾರತಮ್ಯಕ್ಕನುಸರಿಸಿ ಕೆಲವರು ಭೂಲೋಕದಲ್ಲಿ ರಾಜಮನೆತನದಲ್ಲಿ ಹುಟ್ಟಿದರು ಮತ್ತು ಕೆಲವರು ದೇವಲೋಕದಲ್ಲಿಯೇ ಜನಿಸಿದರು. ಸರ್ವಗುಣಗಳ ಆಗರನಾದ ರಮೇಶನ ಒಪ್ಪಿಗೆಯನ್ನು ಪಡೆದೇ ಶ್ರೀಕೃಷ್ಣನ ಪತ್ನಿಗಳಾದರು.

**ಅರ್ಹತೆ –**

**ಅಜಾನದೇವೈಃ ಸರ್ವಗುಣೈಃ ಸಮಸ್ತಾಃ**
**ಸ್ವಭಾವತೋಽಥೇಂದಿರಾವೇಶತೋಽತಃ**
**ಗುಣಾಧಿಕಾಸ್ತಾಃ ಶಿಬಿಕಾಸು ಕೃಷ್ಣ**
**ಆರೋಪಯಿತ್ವಾ ಪ್ರಾಹಿಣೋ ದ್ವಾರವತ್ಯೈ** ||೧೧೬||

ಸ್ವಭಾವ ಮತ್ತು ಗುಣಗಳಿಂದ ಆ ಕನ್ನಿಕೆಯರು, ಅಜಾನ ದೇವತೆಗಳಿಗೆ ಸಮಾನರಾಗಿದ್ದರು. ಜೊತೆಯಲ್ಲಿ ಲಕ್ಷ್ಮಿ ದೇವಿಯರ ಆವೇಶವಿದ್ದುದರಿಂದ ಗುಣಾಧಿಕರೂ ಆಗಿದ್ದರು. ಶ್ರೀಕೃಷ್ಣನು ಅವರೆಲ್ಲರನ್ನು ಡೋಲಿ (ಶಿಬಿಕಾ) ಗಳಲ್ಲಿ ಕೂಡಿಸಿ ದ್ವಾರಾವತಿಗೆ ಕಳಿಸಿದನು.

**ವಿ. ವಿ. :** ನರಕಾಸುರನ ಘಟನೆಯ ಕೆಲವು ಶ್ಲೋಕಗಳನ್ನು ಓದಿದಾಗ ಓದುಗರಿಗೆ ಈ ಕೆಲವು ವಿಚಾರಗಳು ಬರುವುದು ಸಹಜ.

೧) ನರಕಾಸುರನು ಸಾಮಾನ್ಯನಲ್ಲ. ವರಾಹ ಅವತಾರದ ಅಂಶದಿಂದಲೇ ಬಂದವನು. ಬ್ರಹ್ಮನನ್ನು ಒಲಿಸಿ ಅನೇಕ ವರಗಳನ್ನು ಅಸ್ತ್ರಗಳನ್ನು ಪಡೆದಿದ್ದನು. ಅವನ ಮಂತ್ರಿಗಳು, ಅವರ ಮಕ್ಕಳೂ ಅಷ್ಟೇ ಭೀಕರರು ಶೂರರೂ ಆಗಿದ್ದರು. ಬ್ರಹ್ಮ, ರುದ್ರರ ಅನುಗ್ರಹಕ್ಕೆ ಪಾತ್ರರಾಗಿದ್ದರು. ಅಂತೆಯೇ ಅಸುರನು ದರ್ಪದಿಂದ ಬೀಗುತ್ತಿದ್ದನು. ಜೊತೆಯಲ್ಲಿ ಅವನ ಪಟ್ಟಣದ ರಕ್ಷಣೆಗೆ ನಾನಾ ದುರ್ಗಗಳು ಬೇರೆ. ಇವೆಲ್ಲವುಗಳ ಬಲದಿಂದ ಆ ಅಸುರನು ಮಾಡಬಾರದ ಕೆಲಸಗಳನ್ನು ಮಾಡಿದನು. ಯುದ್ಧದಲ್ಲಿ ವೈರಿಗಳನ್ನು ಸೋಲಿಸುವುದು, ಅವರ ಧನ, ಸಂಪತ್ತನ್ನು ಕಿತ್ತು ತರುವುದು ಸಹಜ. ಆದರೆ ನರಕನೂ ಇನ್ನೂ ಮುಂದೆ ಹೋಗಿ ಅನೇಕ ಕನ್ಯೆಗಳನ್ನು ತಂದು ಸೆರೆಯಲ್ಲಿಟ್ಟಿದ್ದನು. ಇದು ಮಹಾಪರಾಧ. ಅವರ ಅಳಲು, ಬಿಸಿಯುಸಿರೇ ಅವನ ನಾಶಕ್ಕೆ ಕಾರಣವಾಯಿತು ಎಂದರೆ ತಪ್ಪಲ್ಲ.

೨) ಶ್ರೀಕೃಷ್ಣನು ಮನಸ್ಸು ಮಾಡಿದ್ದರೆ ನರಕನ ಆಸ್ತಿ ಪಾಸ್ತಿ ಎಲ್ಲವನ್ನು ಹೊತ್ತು ತರಬಹುದಾಗಿದ್ದಿತು. ಹಾಗೆ ಮಾಡಿಲ್ಲ. ಅನೇಕ ಕಡೆಗಳಲ್ಲಿ ಅವರವರ ಆಸ್ತಿಯನ್ನು ಒಪ್ಪಿಸಿದ್ದಾನೆ. ರಾಜ್ಯವನ್ನು ಹಿಂದಿರುಗಿಸಿದ್ದಾನೆ. ಪುನಃ ಅವರಿಗೆ ಅನುಗ್ರಹಿಸಿಯೂ ಇದ್ದಾನೆ.

ಅಸುರನ ಕಾಟ ಸಜ್ಜನರಿಗೆ ಅಧಿಕವಾಗಿತ್ತು. ದುಷ್ಟರಿಗೆ ಶಿಕ್ಷೆ ಮತ್ತು ಶಿಷ್ಟರಿಗೆ ರಕ್ಷೆ. ಶ್ರೀಕೃಷ್ಣನ ಕರ್ತವ್ಯವಾಗಿತ್ತು. ಅವನ ಅವತಾರದ ಉದ್ದೇಶವೂ ಅದೇ ಅಲ್ಲವೇ?

**ಶ್ರೀಕೃಷ್ಣನು ಅಷ್ಟು ಕನ್ನಿಕೆಯರನ್ನು ಮದುವೆಯಾದದ್ದು ಸರಿಯೇ?** ಇದಕ್ಕೆ ಸಮಾಧಾನ ಶ್ರೀಮದಾಚಾರ್ಯರು, ಶಾಸ್ತ್ರೋಕ್ತವಾಗಿ, ಧರ್ಮದ ನೆಲೆಗಟ್ಟಿನಲ್ಲಿ ಕೊಟ್ಟಿದ್ದಾರೆ. ಅದನ್ನು ಚರ್ಚಿಸುವುದು ಅವಶ್ಯಕತೆಯಿಲ್ಲ.

ಶ್ರೀಕೃಷ್ಣನು ಸ್ವರಮಣನು. ಕಾಮುಕನಲ್ಲ. ಸ್ತ್ರೀಯರ ಅವಶ್ಯಕತೆಯೂ ಆತನಿಗಿಲ್ಲ. ಕೇವಲ ಅವರ ಉದ್ಧಾರಕ್ಕಾಗಿ ಹಾಗೆ ಮಾಡಿದ್ದಾನೆ. ಭಕ್ತರ ಹಿತವೇ ಪರಮಾತ್ಮನ ಮುಖ್ಯ ಗುರಿ. ಲೌಕಿಕ ದೃಷ್ಟಿಯಿಂದ ನೋಡಿದಾಗ ಶ್ರೀಕೃಷ್ಣನು ಒಳ್ಳೆಯ ವಿವೇಕಿಯಂತೆ ನಡೆದುಕೊಂಡಿದ್ದಾನೆ.

೧) ದುಷ್ಟರನ್ನು ಸಂಹರಿಸಿ, ದೇಶದ ಹಿತವನ್ನು ರಕ್ಷಿಸಿದ್ದಾನೆ.

೨) ಅನ್ಯಾಯದ ಸಂಪತ್ತನ್ನು ತಂದು ಸತ್ಪಾತ್ರರಿಗೆ ಹಂಚಿದ್ದಾನೆ. ಸ್ವಾರ್ಥಕ್ಕಾಗಿ ತಂದದ್ದಲ್ಲ.

೩) ಆ ಕನ್ನಿಕೆಯರು ನಿರ್ದೋಷಿಗಳಾಗಿದ್ದರೂ, ಸಮಾಜವು ಅವರನ್ನು ದೋಷಪೂರ್ಣ ದೃಷ್ಟಿಯಿಂದ ನೋಡುತ್ತಿತ್ತು. ಅವರನ್ನು ಮದುವೆಯಾಗಲು ಯಾರೂ ಮುಂದೆ ಬರುತ್ತಿರಲಿಲ್ಲ. ರಾಜ ಮನೆತನದ ಕನ್ಯೆಯರು ಆಗಿನ ದೃಷ್ಟಿಯಿಂದ ಸಾಮಾನ್ಯರಿಗೂ ಕೊಡುವಂತೆಯೂ ಇರಲಿಲ್ಲ.

೪) ಮೇಲಾಗಿ ಶ್ರೀಕೃಷ್ಣನೇ ಪತಿಯಾಗಬೇಕೆಂದು ಅನೇಕ ವ್ರತಗಳನ್ನು ಮಾಡಿ ದೇವತೆಗಳನ್ನು ಮೆಚ್ಚಿಸಿ ವರಗಳನ್ನು ಪಡೆದಿದ್ದರು. ದೇವತೆಗಳ ಆಶೀರ್ವಾದ, ಭಕ್ತರ ಪ್ರೇಮ. ಇವುಗಳನ್ನು ರಕ್ಷಿಸುವುದಕ್ಕಾಗಿ ಶಾಸ್ತ್ರೋಕ್ತವಾಗಿ ಮದುವೆಯಾದರೆ ತಪ್ಪೇನಿದೆ. ಮೇಲಾಗಿ ಎಲ್ಲರನ್ನು ಆಳುವ ಸಾಮರ್ಥ್ಯವೂ ಅವನಲ್ಲಿದೆ.

ಇದನ್ನು ಸಮಾಜದ ದೊಡ್ಡ ಸುಧಾರಣೆ ಎಂದೇ ಭಾವಿಸಬೇಕು. ಕೃಷ್ಣನಿಗೆ ಕಲಂಕ ಹಚ್ಚುವುದಕ್ಕಲ್ಲ.

ಇಂದು ಒಬ್ಬ ದೇವದಾಸಿಯನ್ನು ಒಬ್ಬ ಪುರುಷನು ಮದುವೆ ಆದರೆ ಅವನಿಗೆ ಸಮಾಜದಲ್ಲಿ ಎಲ್ಲಿಲ್ಲ ಮರ್ಯಾದೆ ಇದೆ. ಇಲ್ಲಿ ಅನೇಕ ಜನರಿಗೆ ಉದ್ಧಾರ ಮಾಡಿದ ಶ್ರೀಕೃಷ್ಣನಿಗೆ ಕಲಂಕವೇಕೆ?

**ಸಮಂತತೋ ಯೋಜನಾನಾಂ ಶತೇ ದ್ವೇ**
**ಪ್ರವೃದ್ಧಮಿಂದ್ರಸ್ಯ ಸ ರತ್ನ ಪರ್ವತಂ**
**ನಿತ್ಯಾಮೃತಸ್ರಾವಿ ಜಲೇಶ್ವರಸ್ಯ**
**ಛತ್ರಂ ಚ ದೋರ್ಭ್ಯಾಂ ಗರುಡೇ ನ್ಯಧಾಧರಿ:** ||೧೧೭||

ಎರಡುನೂರು ಯೋಜನ ವಿಸ್ತೀರ್ಣ ಮತ್ತು ಸಮೃದ್ಧವಾದ ರತ್ನಮಯವಾದ ಇಂದ್ರನ ಪರ್ವತವನ್ನು ಸದಾ ಅಮೃತವನ್ನು ಕರೆಯುವ ವರುಣನ ಛತ್ರವನ್ನು ತನ್ನ ಕೈಗಳಿಂದ ತಂದು ಶ್ರೀಕೃಷ್ಣನು ಗರುಡನ ಮೇಲೆ ಇಟ್ಟನು.

**ಸ್ವಯಂ ಚ ಸತ್ಯಾಸಹಿತ: ಸಮಾರುಹತ್**
**ಸ ಚಾಶ್ರ ಮೇಣೈವ ಯಯೌ ತ್ರಿವಿಷಪಂ**
**ಅಭಿಪ್ರಯಾತೋಽಖಿಲಂ ಲೋಕಪಾಲೈ:**
**ಜನಾರ್ದನ: ಶಕ್ರಗೃಹಂ ವಿವೇಶ** ||೧೧೪||

ನಂತರ ಸ್ವಯಂ ಶ್ರೀಕೃಷ್ಣನು ಸತ್ಯಭಾಮಿ ಸಹಿತನಾಗಿ ಗರುಡನ ಹೆಗಲೇರಿ, ಯಾವ ಆಯಾಸವೂ ಇಲ್ಲದೆ ಸ್ವರ್ಗಲೋಕದತ್ತ ನಡೆದನು. ದುಷ್ಟರ ಶಿಕ್ಷಕನಾದ ಶ್ರೀಕೃಷ್ಣನು ಎಲ್ಲ ಲೋಕಪಾಲಕರನ್ನು ಕೂಡಿಕೊಂಡು ಇಂದ್ರನ ಅರಮನೆಯನ್ನು ಪ್ರವೇಶಿಸಿದನು.

**ಸಂಪೂಜಿತ: ಸತ್ಯಭಾಮಾ ಸಹಾಯ:**
**ಶಕ್ರೇಣ ಶಚ್ಯಾ ಸಹಿತೇನ ಸಾದರಂ**
**ದದಾವದಿತ್ಯಾ ಅಪಿ ಕುಂಡಲೇ ಶುಭೇ**
**ಸಮಸ್ತ ದೇವೈರ್ಮುನಿ ಭಕ್ತ ವಂದಿತ:** ||೧೧೯||

ಸತ್ಯಭಾಮೆ ಸಹಿತನಾಗಿ ಬಂದ ಶ್ರೀಕೃಷ್ಣನನ್ನು, ಇಂದ್ರನು ಶಚಿದೇವಿ ಸಹಿತನಾಗಿ ಆದರದಿಂದ ಪೂಜಿಸಿದನು. ಸಮಸ್ತ ದೇವತೆಗಳು, ಮುನಿಗಳು ಭಕ್ತಿ ಮತ್ತು ಆದರಗಳಿಂದ ವಂದಿಸಿದರು. ಶ್ರೀಕೃಷ್ಣನು ತಾನು ತಂದ ಮಂಗಲಕರವಾದ ಕುಂಡಲಗಳನ್ನು ಅದಿತಿಯ ಕೈಗೆ ಕೊಟ್ಟನು. ಆಕೆಗೆ ನಮಸ್ಕರಿಸಿದನು.

**ತಮಾಸುರಾವೇಶ ವಶಾದಜಾನತೀ**
**ಸತ್ಯಾಂ ಚ ಸರ್ವಪ್ರಭವೌ ಜಗತ್ಪ್ರಭೂ**
**ನಿರ್ದೋಷ ಸೌಖ್ಯೈಕರತನೂ ಶುಭಾಶಿಕ್ಷ:**
**ತಾಭ್ಯಾಂ ದದೌ ಸಾದಿತಿರಾತ್ಮಂ ಪುತ್ರವತ್ ||೧೨೦||**

ಆ ಅದಿತಿಯು ಅಸುವಾವೇಶದಿಂದ, ಶ್ರೀಕೃಷ್ಣನು, ಜಗತ್ಪ್ರಭುವು, ದೋಷ ರಹಿತನೂ, ಸದಾ ಸೌಖ್ಯವುಳ್ಳವನು, ಆನಂದಮಯನು, ಸರ್ವೋತ್ತಮನು ಎಂದು ಅರಿಯದೆ ತನ್ನ ಮಕ್ಕಳಂತೆಯೇ ಆ ಸತ್ಯಭಾಮೆ ಮತ್ತು ಶ್ರೀಕೃಷ್ಣನಿಗೆ ಮಂಗಲ ಆಶೀರ್ವಾದಗಳನ್ನಿತ್ತಳು.

**ಅಥೋ ಸದಾನಂದ ಚಿದಾತ್ಮದೇಹ:**
**ಸ ನಂದನೋದ್ಯಾನ ಮಜೋಽನುರೂಪಯಾ**
**ಅನಂತಶಕ್ತಿ: ಸಹ ಸತ್ಯಭಾಮಯಾ**
**ವಿವೇಶ ರಂತುಂ ಪ್ರಿಯಯೊಖಿಲೇಶ್ವರ: ||೧೨೧||**

ನಂತರ, ಸಚಿದಾನಂದ ಆತ್ಮನಾದ, ಜ್ಞಾನಾನಂದ ಪೂರ್ಣನಾದ, ಅನಂತ ಶಕ್ತಿಯುಳ್ಳ, ಉತ್ಪತ್ತಿ ರಹಿತವಾದ ಶ್ರೀಕೃಷ್ಣನು, ತನಗೆ ಅನುರೂಪಳಾದ ಸತ್ಯಭಾಮೆಯಿಂದ ಕೂಡಿ, ವಿಹಾರಕ್ಕೆಂದು ಇಂದ್ರನ 'ನಂದನವನ' ಕ್ಕೆ ನಡೆದನು.

**ತಯಾಚ್ಯುತೋಽಸೌ ಕನಕಾವದಾತಯಾ**
**ಸ ಕುಂಕುಮಾದಿಗ್ಧಪಿ ಶಂಗ ವಾಸಸೌ**
**ಪೂರ್ಣೇಂದು ಕೋಟ್ಯೌಘಜಯನ್ಮುಖಾಬ್ಜಯಾ**
**ರಮೇಽಮಿತಾತ್ಮ ಜಗದೇಕಸುಂದರ: ||೧೨೨||**

ಅಚ್ಯುತನಾದ ಶ್ರೀಕೃಷ್ಣನು, ಸುವರ್ಣದಂತೆ ಹೊಳೆಯುವ ಪೀತಾಂಬರವನ್ನು ಧರಿಸಿದ್ದನು. ಕುಂಕುಮದಿಂದ ಕೂಡಿದ ಚಂದನವನ್ನು ಲೇಪಿಸಿಕೊಂಡಿದ್ದನು. ಅಂತಹ ಜಗದೇಕ ಸುಂದರನು, ಪೂರ್ಣಚಂದ್ರನ ಕಳೆಗಳನ್ನು ಧಿಕ್ಕರಿಸುವ ಸುಂದರ ಮುಖವುಳ್ಳ ಸತ್ಯಭಾಮೆಯೊಡನೆ ಕ್ರೀಡಿಸಿದನು.

**ಸರ್ವರ್ತು ಸಿತ್ಯೋದಿತ ಸರ್ವವೈಭವೇ**
**ಸುರತ್ನ ಚಾಮೀಕರವೃಕ್ಷ ಸದ್ಮನೇ**
**ಸದೈವ ಪೂರ್ಣೇಂದು ವಿರಾಜಿತೇ ಹರಿ:**
**ಚಚಾರ ದೇವ್ಯಾ ಪವನಾನು ಸೇವಿತೇ ||೧೨೩||**

ಆ ನಂದನ ವನದಲ್ಲಿ ಸದಾ ವಸಂತ ಋತುವೇ ಇರುತ್ತಿತ್ತು. ಹಗಲು ಇರುಳು ಅವಿರ್ಭೂತವಾದ ಸಕಲ ವೈಭವಗಳಿದ್ದವು. ಪೂರ್ಣಚಂದ್ರನ ಪ್ರಕಾಶ, ಮಂದಮಾರುತನ ಸೊಗಸು, ಮುತ್ತು ರತ್ನಗಳ ಗೊಂಚಲುಗಳಿಂದ ತುಂಬಿದ ವೃಕ್ಷಗಳು, ತುಂಬಿಕೊಂಡಿದ್ದವು. ಇಂತಹ ವನದಲ್ಲಿ ಶ್ರೀಕೃಷ್ಣನು ಸತ್ಯಭಾಮೆಯೊಡನೆ ಸಂಚರಿಸಿದನು.

ನಿರ್ದೋ(ವಿದೋ)ಷ ಸಂವಿತ್ತು ಸುರತ್ರ ಸತ್ತ್ವರುಂ
ದದರ್ಶ ಸತ್ಯಾಮೃತಮಂಥನೋದ್ಭವಂ
ಸಾ ಪಾರಿಜಾತಂ ಮಣಿಕಾಂಚ ಸಾತ್ಮಕಂ
ಸಮಸ್ತ ಕಾಮಪ್ರದಮೂರ್ತಿ ಹಾರಿಣಮ್ ॥೧೨೪॥

ದೋಷವನ್ನರಿಯದ, ಯಥಾರ್ಥ ಜ್ಞಾನವುಳ್ಳ ಅಪ್ರಾಕೃತ ಶರೀರಿಯಾದ ಆ ಸತ್ಯಭಾಮೆ ಅಲ್ಲಿ ಪಾರಿಜಾತ ವೃಕ್ಷವನ್ನು ಕಂಡಳು. ಅದು ಹಿಂದೆ ಅಮೃತ ಮಥನದ ಕಾಲದಲ್ಲಿ ಹೊರಬಂದದ್ದು. ಆ ಪಾರಿಜಾತ ವೃಕ್ಷ ಶೋಭಿಸುತ್ತಿತ್ತು. ಸುವರ್ಣಮಯವಾದ ಟೊಂಗೆಗಳು, ಮುತ್ತುರತ್ನಗಳ ಗೊಂಚಲುಗಳಿಂದ ಸಮಸ್ತ ಇಚ್ಛೆಗಳನ್ನು ಪೂರ್ತಿ ಮಾಡುವ ಶಕ್ತಿ, ದುಃಖಗಳನ್ನು ನಾಶ ಮಾಡುವ ಸಾಮರ್ಥ್ಯವುಳ್ಳದ್ದಾಗಿತ್ತು.

ದೃಷ್ಟ್ವೈವ ತಂ ಸುಸ್ಮಿತ ಚಂದ್ರಿಕಾಸ್ಫುರನ್
ಮುಖಾರವಿಂದಾಸಿತ ಲೋಲ ಲೋಚನ ।
ಕಪೋಲನಿರ್ಭಾತ ಚಲತ್ಸು ಕುಂಡಲಾ
ಜಗಾದ ದೇವಾಧಿಪತಿಂ ಪತಿಂ ಸತೀ ॥೧೨೫॥

ಆ ವೃಕ್ಷವನ್ನು ಕಂಡ ಸತ್ಯಭಾಮೆ, ಚಲ್ವಾದ ಬೆಳದಿಂಗಳಿನಂತೆ ಮುಗುಳುನಗೆಯನ್ನು ಬೀರುತ್ತ, ಕಮಲದಂತೆ ಮುಖವನ್ನು ಅರಳಿಸಿ, ಸುಂದರ ನೇತ್ರಗಳಿಂದ ಕುಡಿನೋಟ ಬೀರಿ, ಕುಂಡಲ ಕಾಂತಿಗಳಿಂದ ಕಪೋಲಗಳುಳ್ಳವಳಾಗಿ ದೇವಾಧಿದೇವನಾದ ತನ್ನ ಪತಿಯನ್ನು ಕುರಿತು ಕೇಳಿದಳು.

ತರುರ್ಜಗಚ್ಛೀಪದ ಮೇ ಗೃಹಾಂಗಣೇ
ಸಂಸ್ಥಾಪನೀಯೋಽಯೆ ಮಚಿಂತ್ಯ ಪೌರುಷ
ಇತೀರಿತಸ್ತಾಂ ಕಲಶೋಪಮಸ್ತನೀ
ಮಾಲಿಂಗ್ಯ ದೇವಸ್ತರುಮುದ್ಧಬರ್ಹ ॥೧೨೬॥

ಹೇ ಚರಾಚರ ಜಗತ್ತಿನ ಪ್ರಾಣ ಪತಿಯೇ, ಅಚಿಂತ್ಯ ಪುರುಷನೇ ಪರಾಕ್ರಮಿಯಾದ ಶ್ರೀ ಕೃಷ್ಣನೇ, ಈ ವೃಕ್ಷವು ನನ್ನ ಮನೆಯ ಅಂಗಳದಲ್ಲಿ ಸ್ಥಾಪಿತವಾಗಲಿ, ಎಂದು ತನ್ನ ಇಂಗಿತವನ್ನು ತೋರಿದ ಸತ್ಯಭಾಮೆಯನ್ನು ಆಲಿಂಗಿಸಿ, ಸಂತುಷ್ಟನಾದ ಶ್ರೀಕೃಷ್ಣನು ಅದನ್ನು ಕಿತ್ತಲು ಸಿದ್ಧನಾದನು.

ಸ ತೇನ ವೃಕ್ಷೇಣ ಸಹೈವ ಕೇಶವಃ
ತಯಾ ಚ ದೇವ್ಯಾರುಹದಗ್ರ್ಯಪೌರುಷಂ
ಖಗೇಶ್ವರಂ ತಚ್ಛ ನಿರಮ್ಯ ಶಚ್ಯಾ
ಪ್ರಚೋದಿತೋ ವಾಸವ ಆಗಮತ್ಕ್ರುಧಾ ॥೧೨೭॥

ಶ್ರೀಕೃಷ್ಣನು, ಆ ವೃಕ್ಷವನ್ನು ಕಿತ್ತು, ಸತ್ಯಭಾಮೆಯನ್ನೊಡಗೂಡಿ, ಬಲಶಾಲಿಯಾದ ಗರುಡನ ಹೆಗಲೇರಿ ಹೊರಡಲು ಸಿದ್ಧನಾದನು. ಇದನ್ನು ಕಂಡ

ಇಂದ್ರನು ಶಚಿದೇವಿಯರಿಂದ ಪ್ರಚೋದಿತನಾಗಿ ಸುರರನ್ನು ಕೂಡಿಕೊಂಡು ಅಲ್ಲಿಗೆ ಬಂದನು.

**ತಾನಾಸುರಾವೇಶಯುತಾನ್ ಹರೇಶ್ಚ**
**ಬಲಪ್ರಕಾಶಾಯ ಸಮುದ್ಯತಾನ್ ಸುರಾನ್**
**ನ್ಯವಾರಯಚ್ಛಾರ್ಙ್ಗಶರಾಸನಚ್ಯುತೈಃ**
**ಹರಿಪ್ರಿಯಾ ಬಾಣವರೈಃ ಸಮಸ್ತಶಃ** ||೧೨೮||

ಇಂದ್ರನಿಗೆ ಆ ಸಮಯದಲ್ಲಿ ಅಸುರಾವೇಶವುಂಟಾಗಿತ್ತು. ದೇವತೆಗಳು, ಜ್ಞಾನಿಗಳು ಆದರೂ ಶ್ರೀಹರಿಯ ಬಲಪ್ರಕಟಿಸಲು ಇದು ಸರಿಯಾದ ಕಾಲವೆಂದು ಬಗೆದು ಅವರು ಯುದ್ಧಕ್ಕೆ ಸಿದ್ಧರಾಗಿ, ಅವರನ್ನು ತಡೆದರು. ಆಗ ಹರಿಪ್ರಿಯಳಾದ ಸತ್ಯಭಾಮೆಯು ತನ್ನ ಪತಿಯಲ್ಲಿದ್ದ ಶಾಂರ್ಙ್ಗ ಎಂಬ ಧನುವನ್ನು ಧರಿಸಿ, ದೇವತೆಗಳಿಂದ ಬಿಡಲ್ಪಟ್ಟ ಉತ್ತಮ ಬಾಣಗಳನ್ನು ಕತ್ತರಿಸಿದಳು.

**ನಿರಾಯುಧಂ ವೈಶ್ರವಣಂ ಚಕಾರ**
**ಚಿಕ್ಷೇಪ ಚಾಬ್ಧೌ ಗರುಡೋ ಜಲೇಶಂ (ಶ್ವರಂ)**
**ಪ್ರಧಾನವಾಯೋ ಸ್ತನಯಂ ತು ವಾಯುಂ**
**ಕೋಣಾಧಿಪಂ ವಹ್ನಿಯಮಾದಿಕಾನಪಿ** ||೧೨೯||

**ನಿ(ವಿ)ಬೋಧ್ಯ ಶಾಂರ್ಗೋತ್ಥರವೈಃ ಸ್ವಕಾಂ ತನು–**
**ಮಾವೇಶಿತಾನಾಮಸುರೈರಗಾದ್ಧರಿಃ**
**ತೇ ಬೋಧಿತಾಸ್ತೇನ ರಣಂ ವಿಸೃಜ್ಯ**
**ಯಯುರ್ವಿದಿತ್ವಾ ತಮನಾದಿ ಪೂರುಷಮ್** ||೧೩೦||

ಪುನಃ ಸತ್ಯಭಾಮೆಯು ಕುಬೇರನನ್ನು ನಿರಾಯುಧನನ್ನಾಗಿ ಮಾಡಿದಳು. ಗರುಡನು ವರುಣನನ್ನು ಸಮುದ್ರದಲ್ಲಿ ಒಗೆದನು. ಕೋಣಾಧಿಪತಿ (ಪ್ರಧಾನ ವಾಯುವಿನ ಮಗ) ಅಗ್ನಿ, ಯಮ, ಮೊದಲಾದ ದಿಕ್ಪಾಲಕರು ಇತರ ದೇವತೆಗಳು ಇಂದ್ರನ ಸಹಾಯಕ್ಕಾಗಿ ಬಂದಿದ್ದರು. ಅವರೆಲ್ಲರಿಗೂ ಅಸುರಾವೇಶವಿದ್ದಿತು. ಶ್ರೀಕೃಷ್ಣನು ತನ್ನ ಶಾಂರ್ಙ್ಗ ಧನುವಿನಿಂದಲೇ ಪಾಠ ಕಲಿಸಿದನು. ಅಂದರೆ ಅಲ್ಲಿನ ಧ್ವನಿ, ಅದರ ಸ್ಪರ್ಶ ಇದರಿಂದಲೇ ಶ್ರೀಕೃಷ್ಣನ ನಿಜಸ್ವರೂಪವನ್ನು ತಿಳಿದರು. ಅವರೆಲ್ಲರ ಅಸುರಾವೇಶ ದೂರಾಯಿತು. ಶ್ರೀಕೃಷ್ಣ ಮತ್ತು ಸತ್ಯಭಾಮೆಯನ್ನು ನಾರಾಯಣ, ಲಕ್ಷ್ಮಿ ಎಂದು ತಿಳಿದು ಶರಣಾಗತರಾಗಿ ಯುದ್ಧವನ್ನು ಬಿಟ್ಟು ಹೊರಟುಹೋದರು.

**ವಿ. ವಿ. :** ಶ್ರೀಮದಾಚಾರ್ಯರು **"ಶಾಂರ್ಗೋತರವೈ ವಿಬೋಧ್ಯ"** ಎಂಬ ಪದವನ್ನು ಬಳಸಿದ್ದಾರೆ. ಇಲ್ಲಿ ಶ್ರೀಕೃಷ್ಣನ ಕರುಣೆ, ಭಕ್ತರಲ್ಲಿರುವ ವಾತ್ಸಲ್ಯವನ್ನು ವ್ಯಕ್ತಪಡಿಸಿದ್ದಾರೆ. ಏಕೆಂದರೆ, ಶಾಂರ್ಙ್ಗದ ಪೆಟ್ಟಿಗೆ ಯಾರೂ ನಿಲ್ಲುವಂತಿಲ್ಲ. ಆದರೂ ಶ್ರೀಕೃಷ್ಣ ಅದನ್ನು ಬಿಟ್ಟು ಧ್ವನಿಯಿಂದ ದೇವತೆಗಳಿಗೆ ಎಚ್ಚರಿಕೆ ನೀಡಿದ್ದಾನೆ. ಜೊತೆಯಲ್ಲಿ

ಮೃದುವಾಗಿ ಸ್ಪರ್ಶವಾಗುವಂತೆ ಬಾಣವನ್ನು ಪ್ರಯೋಗಿಸಿದ್ದಾನೆ. ದೇವತೆಗಳು ತನ್ನ ಭಕ್ತರು ಎಂಬುದನ್ನು ಬಲ್ಲನು. ಜೊತೆಯಲ್ಲಿ ಅವರು ಅಮರರೂ ಎಂದು ತಿಳಿದಿದ್ದನು.

ಒಬ್ಬ ತಂದೆಯು ಮಗನಿಗೆ ಬುದ್ಧಿ ಕಲಿಸಲು ಬಡಿಗೆಯಿಂದ ಹೊಡೆದಂತೆ ಮಾಡಿ, ನೆಲಕ್ಕೆ ಬಡಿದಾಗ ಅದರ ಸಪ್ಪಳಿನಿಂದ ಮಗುವನ್ನು ಹೆದರಿಸಿ ದಾರಿಗೆ ತರುವುದಿಲ್ಲವೇ?

**ಶಿವಂ ಚ ಶಕ್ರಾರ್ಥಮುಪಾಗತಂ ಹರಿಃ**
**ವ್ಯದ್ರಾವಯಚ್ಛಾರ್ಙ್ಗವಿನಿಃ ಸೃತೈಃ ಶರೈಃ**
**ಸವಾಹನೋ ದೂರತರೇ ನಿಪಾತಿತೋ**
**ಗುರುತ್ಮತಾ ಶಂಭುರಗಾಚ್ಛರಾಹತಃ** ॥೧೩೧॥

ಇಂದ್ರನ ಸಹಾಯಕ್ಕಾಗಿ ರುದ್ರದೇವರು ಬಂದರು. ಶ್ರೀಹರಿಯು ಶಾರ್ಙ್ಗದಿಂದ ಬಾಣ ಬಿಟ್ಟು ಓಡಿಸಿದನು. ಗರುಡನು ನಂದಿಯನ್ನು ಅದನ್ನು ಆರೂಢನಾದ ಶಿವನನ್ನು ಬಹುದೂರದಲ್ಲಿ ಒಗೆದನು. ರುದ್ರದೇವರು ಶರದ ಪೆಟ್ಟಿಗೆ ಹೆದರಿ ಓಡಿಹೋದರು.

**ವಿದ್ರಾವಿತೇ ಬಾಣಗಣೈಶ್ಚ ಶೌರಿಣಾ**
**ಹರೇಹರೌ ವಜ್ರಮವಾಸೃ ಸೃಜದ್ವ್ರತಂ**
**ಶಕ್ರೋsಗ್ರಹೀತ್ತಂ ಪ್ರಹಸನ್ ಜನಾರ್ದನಃ**
**ಕರೇಣ ವಾಮೇನ ಸ ಚಾಪಜಗ್ನಿವಾನ್** ॥೧೩೨॥

ಶ್ರೀಕೃಷ್ಣನು ಬಾಣಗಳನ್ನು ಪ್ರಯೋಗಿಸಿ ಹರನನ್ನು ಓಡಿಸಿದ್ದನ್ನು ಕಂಡು ಶಕ್ರನು ಶ್ರೀಕೃಷ್ಣನ ಮೇಲೆ ವಜ್ರಾಯುಧವನ್ನೇ ಪ್ರಯೋಗಿಸಿದನು. ಅಂತಹ ಬಲವಾದ ಆಯುಧವನ್ನು ಶ್ರೀಕೃಷ್ಣನು ನಗುತ್ತ ತನ್ನ ಎಡಗೈಯಿಂದ ಹಿಡಿದು ನಿಲ್ಲಿಸಿದನು. ಇಂದ್ರನೂ ನಿಲ್ಲದೆ ಕಾಲ್ತೆಗೆದನು.

**ಅಪಾಹಸತ್ತ್ರ ಜಗದೇಕ ಸುಂದರೀ**
**ಹರಿ ಪ್ರಿಯಾಥೋ ಜಗದೇಕ ಮಾತಂ**
**ಉವಾಚ ಶಕ್ರೋ ಜಗತಾಂ ಜನಿತ್ರೇ**
**ಪ್ರದರ್ಶಯೋಮೋ ವಯಮಾತ್ಮ ಶೈಶವಮ್** ॥೧೩೩॥

ಜಗದೇಕ ಸುಂದರಿಯಾದ ಸತ್ಯಭಾಮೆಯು, ಇಂದ್ರನಿಗೆ ಅಪಹಾಸ್ಯ ಮಾಡಿದಳು. (ಅಪ್ಸರಲ್ಲಿ ಆವೇಶ ಇಳಿದಿತ್ತು) ಆಗ ದೇವೇಂದ್ರನು ಶ್ರೀಕೃಷ್ಣನನ್ನು ಕುರಿತು ನೀವಿಬ್ಬರು ಜಗತ್ತಿಗೆ ತಂದೆ-ತಾಯಿ. ನಾನು ನಿಮ್ಮನ್ನು ಚೆನ್ನಾಗಿ ಅರಿಯದೆ ನನ್ನ ಬಾಲಬುದ್ಧಿಯನ್ನು ಪ್ರದರ್ಶಿಸಿದೆನು. ಕ್ಷಮಿಸಿ ಎಂದು ಪ್ರಾರ್ಥಿಸಿದನು.

**ಜಗಾಮ ಚಾಥೋ ಶರಣಂ ಜನಾರ್ದನಂ**
**ಸುರೈರ್ವೃತೋ ದೇವಪತಿ ಕ್ಷಮಾಪಯೇನ್**
**ಶೃಂಗಂ ಚ ದತ್ವಾ ಮಣಿಪರ್ವತಸ್ಯ**
**ಪ್ರಣಮ್ಯ ದೇವ್ಯಾ ಸಹಿತಂ ಜಗದ್ಗುರುಮ್** ॥೧೩೪॥

ದೇವತೆಗಳಿಂದೊಡಗೂಡಿ, ದೇವೇಂದ್ರನು ಜನಾರ್ದನನಿಗೆ ಶರಣಾಗತನಾದನು. ಕ್ಷಮೆಯನ್ನು ಯಾಚಿಸಿದನು. ಮಣಿಮಯವಾದ ಶೃಂಗಗಳಿಂದ ಕೂಡಿದ ಪರ್ವತದ ಶಿಖರವನ್ನೇ ಕೊಟ್ಟು, ಜಗದ್ಗುರುವಾದ ಶ್ರೀಕೃಷ್ಣನಿಗೆ ನಮಸ್ಕರಿಸಿದನು. ಅಲ್ಲದೆ,

**ಯಯಾಚ ಏನಂ ಪರಿರಕ್ಷಣಾಯ**
**ಶಚೀಪತಿಃ ಕೇಶವಮರ್ಜುನ ಸ್ಯ**
**ಜಗಾದ ಕೃಷ್ಣೋಽಪಿ ಧರಾತಲೇ ಸ್ಥಿತೇ**
**ನ ಮಯ್ಯಮುಂ ಕಶ್ಚನ ಚೇಷ್ಯ ತೀತಿ** ||೧೩೫||

ಶಚೀಪತಿಯು, ತನ್ನ ಮಗನಾದ ಅರ್ಜುನನ ರಕ್ಷಣೆಗಾಗಿ ಶ್ರೀಕೃಷ್ಣನನ್ನು ಪ್ರಾರ್ಥಿಸಿಕೊಂಡನು. ಆಗ ಶ್ರೀಕೃಷ್ಣನು, ನಾನು ಭೂಮಿಯ ಮೇಲೆ ಇರುವವರೆಗೆ ಅರ್ಜುನನನ್ನು ಯಾರೊಬ್ಬರು ಕೊಲ್ಲಲಾರರು ಎಂದು ಹೇಳಿದನು.

**ತಮರ್ಜುನಾರ್ಥಂ ವರಮಾಪ್ಯ ವಾಸವಃ**
**ಪುನಃ ಪುನಶ್ಚಕ್ರ ಧರಂ ಪ್ರಣಮ್ಯ**
**ಪ್ರಸನ್ನ ದೃಷ್ಟ್ಯಾ ಹರಿಣಾಭಿ ವೀಕ್ಷಿತೋ**
**ಯಯೌ ಮಹಾಭಾಗವತಃ ಸ್ವಮಾಲಯಮ್** ||೧೩೬||

ಮಗನ ರಕ್ಷಣೆಗಾಗಿ ವರವನ್ನು ಪಡೆದ ದೇವೇಂದ್ರನು ಚಕ್ರಧರನಾದ ಶ್ರೀಕೃಷ್ಣನಿಗೆ ಪುನಃ ಪುನಃ ನಮಸ್ಕರಿಸಿದನು. ಶ್ರೀಕೃಷ್ಣನು ಪ್ರಸನ್ನನಾದುದನ್ನು ಕಂಡು, ಮಹಾಭಗವದ್ಭಕ್ತನಾದ ದೇವೇಂದ್ರನು ತನ್ನ ಆಲಯಕ್ಕೆ ನಡೆದನು.

**ಕೃಷ್ಣೋಽಪ್ಯನುಜ್ಞಾಪ್ಯ ಪುರಂದರಂ ಪುರೀಂ**
**ನಿಜಾಂ ವ್ರಜನ್ನಭ್ಯಧಿಕಂ ವ್ಯರೋಚತ**
**ಕಿರೀಟಧಾರಿ ಚಲಕುಂಡಲೋಲ್ಲಸ**
**ನ್ಮುಖಾಂಬುಜಃ ಪೀತಪಟಃ ಸಕೌಸ್ತುಭಃ** ||೧೩೭||

ಇಂದ್ರನಿಗೆ ತನ್ನ ಪುರಕ್ಕೆ ಹೋಗಲು ಅಪ್ಪಣೆಯಿತ್ತು, ಕಿರೀಟಧಾರಿಯಾದ, ಕುಂಡಗಳ ಹೊಳಪಿನ ಮುಖಕಾಂತಿಯುಳ್ಳ, ಕೌಸ್ತುಭಧಾರಿಯಾದ, ಪೀತಾಂಬರವನ್ನು ಧರಿಸಿದ, ಸರ್ವೋತ್ತಮನಾದ ಶ್ರೀಕೃಷ್ಣನು ತನ್ನ ಪಟ್ಟಣಕ್ಕೆ ತೆರಳಿದನು.

**ವಿರೋಚಮಾನಸ್ಯ ಸದಾ ಜಗತ್ಪ್ರಭೋಃ**
**ನ ವೈ ವಿಶೇಷಃ ಕ್ವಚಿದಚ್ಯುತಸ್ಯ**
**ತಥಾಪಿ ತತ್ ಸ್ಮಾರಯಿತುಂ ಪಭೋಭವೇ**
**ದಪೇಕ್ಷ್ಯ ಚಾಲ್ಪಜ್ಞಮತಿಂ ಪುರಾಣಗಮ್** ||೧೩೮||

ಜಗತ್ಪ್ರಭುವಾದ ಶ್ರೀಕೃಷ್ಣನು ಸದಾ ಪ್ರಕಾಶಮಾನನೆ – ಆತನಿಗೆ ಯಾವುದೂ ವಿಶೇಷವಿಲ್ಲ. ಆದರೂ ಮಂದಮತಿಗಳಾದ, ಅಜ್ಞಾನಿಗಳಿಗೆ (ಎಚ್ಚರಿಕೆ) ನೆನಪು ಕೊಡುವುದಕ್ಕಾಗಿ, ಪುರಾಣಗಳಲ್ಲಿ ಬಣ್ಣಿಸಿದಂತೆ – ಆಗಾಗ ಕಾಣಿಸಿಕೊಳ್ಳುವುದುಂಟು.

**ವಿ. ವಿ. :** ಶ್ರೀಕೃಷ್ಣ ಮತ್ತು ದೇವೇಂದ್ರರ ಈ ಘಟನೆಯನ್ನು ಓದಿದಾದ ನೆನಪಿಗೆ ಬರುವ ಕೆಲವು ವಿಷಯಗಳು.

೧) ದೇವೇಂದ್ರನು ಸುರಪತಿಯಾದರೂ, ಅಜ್ಞಾನ, ಅಸುರಾವೇಶ ಅವನಿಗೂ ತಪ್ಪಿಲ್ಲ.

೨) ದೇವೇಂದ್ರನ ಅಹಂಕಾರವನ್ನು ಕಳೆಯುವದಕ್ಕಾಗಿ, ಭಕ್ತನ ಉದ್ಧಾರಕ್ಕಾಗಿ ಈ ಘಟನೆ ನಡೆಯಿತು.

೩) ಶ್ರೀಕೃಷ್ಣನು ಕೇಳಿದ್ದರೆ, ಪಾರಿಜಾತ ವೃಕ್ಷವನ್ನು ದೇವೇಂದ್ರನು ಮೊದಲೇ ಕೊಡಬಹುದಾಗಿತ್ತೇನೋ? ಹಾಗೆ ಮಾಡಿಲ್ಲ. ಅಷ್ಟೇ ಅಲ್ಲ. ಅವನನ್ನು ಕೆಣಕಲೆಂದೇ ಶ್ರೀಕೃಷ್ಣನು ದೇವೇಂದ್ರನಿಗೂ ತಿಳಿಸದೆ ಪಾರಿಜಾತ ವೃಕ್ಷವನ್ನು ಕಿತ್ತಿದ್ದಾನೆ.

೪) ಇಂದ್ರ ಮತ್ತು ಶ್ರೀಕೃಷ್ಣ ಇಬ್ಬರೂ ಮಾನವರಂತೆ ನಡೆದುಕೊಂಡಿದ್ದಾರೆ. ಪರಮ ಭಾಗವತನಾದ ದೇವೇಂದ್ರನು ಬಲ್ಲವನಾದರೂ ಮಗನ ರಕ್ಷಣೆಗಾಗಿ ಪುನಃ ಪುನಃ ಪ್ರಾರ್ಥಿಸಿದ್ದಾನೆ. ಮಾನವನಿಗೆ ಮಗನಲ್ಲಿ ಮಮತೆ ಸಹಜವೇ.

೫) ಇಬ್ಬರೂ ಮಡದಿಯರ ಮಾತನ್ನು ಕೇಳಿದ್ದಾರೆ. ಇಬ್ಬರಿಗೂ ಪತ್ನಿಯರು ಪ್ರಚೋದಿಸಿದ್ದಾರೆ.

**ಗಮನಿಸಬೇಕಾದ ಅಂಶ :** ಯಾವ ಮಾತಿನಿಂದ, ಸಜ್ಜನರಿಗೆ ಒಳ್ಳೆಯದಾಗುತ್ತದೆ. ಮನೆತನದ ಕೀರ್ತಿ ಬೆಳೆಯುತ್ತದೆ. ಜಗತ್ತಿನ ಕಲ್ಯಾಣವಾಗುತ್ತದೆ. ಅಂತಹ ಮಾತು ಹೆಂಡತಿ ಹೇಳಿದರೂ ಕೇಳಿದರೆ ತಪ್ಪಲ್ಲ. ಅದರ ವಿರುದ್ಧ ಪರಿಣಾಮವಾದರೆ ಇಬ್ಬರಿಗೂ ನಷ್ಟ. ಇಂತಹ ಪ್ರಸಂಗ ಇದೇ ಭಾರತದಲ್ಲಿ ಇನ್ನೊಂದಿದೆ.

ಭೀಷ್ಮ ಮತ್ತು ಭೀಮನು. ಭೀಷ್ಮರು 'ವಸು' ಆಗಿದ್ದಾಗ ವರಾಂಗದೆಯ ಮಾತನ್ನು ಕೇಳಿದ. ತಾನೂ ಹಾಳಾದ, ಕುರುಕುಲವನ್ನೇ ನಾಶ ಮಾಡಿದ. (ವಿವರಣೆ ಅನಗತ್ಯ) ಭೀಮನು ಸೌಗಂಧಿಕ ಪುಷ್ಪಕ್ಕಾಗಿ ದ್ರೌಪದಿದೇವಿಯರ ಮಾತನ್ನು ಕೇಳಿದ್ದಾನೆ. ಪರಿಣಾಮವನ್ನು ವಾಚಕರು ಬಲ್ಲರು.

ಇಂದಿನ ಯುವಕ, ಯುವತಿಯರು ಮೇಲಿನ ಘಟನೆಗಳ ಬೆಳಕಿನಲ್ಲಿ ತಮ್ಮ ಬಾಳನ್ನು ಸಾಗಿಸಿದರೆ, ತಮಗೂ ಹಿತ. ಜಗತ್ತಿಗೂ ಕಲ್ಯಾಣ. ಜಗತ್ತಿಗೆ ಮಾರ್ಗದರ್ಶನವೇ **ಆಚಾರ್ಯರ ಮುಖ್ಯ ಉದ್ದೇಶ.**

**ಪ್ರವಿಶ್ಯ ಚೇಶಃ ಸ್ವಪುರೀಂ ಸಯಾದವೈಃ**
**ಸು ಪೂಜಿತೋಽಂತಃ ಪುರಮೇತ್ಯ ಚಾಂಗಣೇ**
**ತರುಂ ಪ್ರಿಯಾಯಾ ಸ್ಯದಧ (ಧಾ) ದ್ಗೃಹಸ್ಯ**
**ಸಹೈವ ಶೃಂಗೇಣ ಚ ರತ್ನಸದ್ಗಿರೇಃ** ||೧೩೬||

ಶ್ರೀಕೃಷ್ಣನು ತನ್ನ ಪುರವನ್ನು ಪ್ರವೇಶಿಸಿದನು. ಯಾದವರೆಲ್ಲರೂ ಸೇರಿ ಅರಮನೆಯ ಅಂಗಳದಲ್ಲಿ ಅವರನ್ನು ಸ್ವಾಗತಿಸಿ ಪೂಜಿಸಿದರು. ರತ್ನಮಯವಾದ

ಪರ್ವತದ ಶಿಖರದಲ್ಲಿದ್ದ ಆ ಪಾರಿಜಾತದ ವೃಕ್ಷವನ್ನು ಸತ್ಯಭಾಮೆಯ ಮನೆಯ ಅಂಗಳದಲ್ಲಿ ನೆಟ್ಟನು.

**ಪ್ರದಾಯ ರತ್ನಾನಿ ಚ ಸರ್ವಸಾತ್ವತಾಂ**
**ಯಥೇಷ್ಟ ತಸ್ಮಾ ಅಪಿ ಕನ್ಯಕಾಃ ಪ್ರಭುಃ**
**ಉದ್ವಾಹ್ಯ ರೇಮೇ ಪೃಥಗೇವ ರತ್ನ–**
**ಪ್ರಾಸಾದ ಸಂಸ್ಥಾಭಿರನಂತರೂಪಃ** ॥೧೪೦॥

ಶ್ರೀಕೃಷ್ಣನು ಎಲ್ಲ ಯಾದವರಿಗೂ ಅವರ ಇಚ್ಛಾನುಸಾರ ರತ್ನಗಳನ್ನಿತ್ತು ಸಂತುಷ್ಟಪಡಿಸಿದನು. ನಂತರ ಎಲ್ಲ ಕನ್ನಿಕೆಯರನ್ನು ಮದುವೆಯಾಗಿ, ಪ್ರತಿಯೊಬ್ಬರಿಗೂ ಒಂದು ರತ್ನಪ್ರಾಸಾದವನ್ನು ಕಟ್ಟಿಸಿ, ಅದರಲ್ಲಿ ಅವರಹಗಳನ್ನಿಟ್ಟು ಪ್ರಭುವಾದ ಶ್ರೀಕೃಷ್ಣನು ಅನಂತ ರೂಪದಿಂದ ಅವರೊಡನೆ ಕ್ರೀಡಿಸುತ್ತಿದ್ದನು.

**ಪೃಥಕ್ಪೃಥಕ್ ತಾಸು ದಶೈವ ಪುತ್ರಕಾನ್**
**ಸ್ಯ(ಅ)ದತ್ತ ಕನ್ಯಾಮಪಿ ಸರ್ವಶಃ ಪ್ರಭುಃ**
**ಪ್ರದ್ಯುಮ್ನ ಸಾಂಬಾವಪಿ ಭಾನು ಚಾರು–**
**ದೇಷ್ಣೌ ಚ ತೇಷಾಂ ನಿತರಾಂ ಗುಣಾಧಿಕಾಃ** ॥೧೪೧॥

ಸರ್ವಶಕ್ತನಾದ ಸ್ವಾಮಿ ಆ ಕನ್ಯೆಯರಲ್ಲಿ ಒಬ್ಬೊಬ್ಬರಲ್ಲಿ ಹತ್ತು ಜನ ಗಂಡು ಮಕ್ಕಳನ್ನು ಒಂದು ಕನ್ಯೆಯನ್ನೂ ಹಡೆದನು. ಅವರಲ್ಲಿ ಪ್ರದ್ಯುಮ್ನ, ಸಾಂಬ, ಭಾನು ಮತ್ತು ಚಾರುದೇಷ್ಣ ಎಂಬವರು ಗುಣಗಳಿಂದ ಅಧಿಕರು ಮತ್ತು ಪ್ರಸಿದ್ಧರು ಕೂಡ.

**ವಿವಸ್ವತೋ ಯೋಽವರಜೋಽದಿತೇಃ ಸುತಃ**
**ಖ್ಯಾತಶ್ಚ ನಾಮ್ನಾ ಸವಿತೇತಿ ಕೃಷ್ಣಾನ್**
**ಜಾತಃ ಸ ಸತ್ಯಾ ಜಠರೇ ಸ(ಽತ್ರ) ನಾಮ್ನಾ**
**ಭಾನುಸ್ತು ಭೈಷ್ಮ್ಯಾ ಅಪಿ ಚಾರುದೇಷ್ಣಃ** ॥೧೪೨॥

ಸೂರ್ಯನ ತಮ್ಮನು 'ಸವಿತೃ' ಅವನು ಅದಿತಿಯ ಮಗನೂ ಅಹುದು. ಅವನು ಬಹುಪ್ರಸಿದ್ಧನು ಕೂಡ. ಅವನೇ ಸತ್ಯಭಾಮೆಯ ಹೊಟ್ಟೆಯಲ್ಲಿ ಶ್ರೀಕೃಷ್ಣನಿಗೆ ಮಗನಾಗಿ ಹುಟ್ಟಿದ್ದಾನೆ. ಅವನ ಹೆಸರೇ 'ಭಾನು' ರುಕ್ಮಿಣಿ ದೇವಿಯರಲ್ಲಿ 'ಚಾರುದೇಷ್ಣ' ಎಂಬವನ ಜನ್ಮವಾಗಿದೆ.

**ಸ ಚಾರುದೇಷ್ಣೋಽಪಿ ಹಿ ವಿಘ್ನ ರಾಜೋ**
**ಯೇಽನ್ಯೇ ಚ ಕೃಷ್ಣಸ್ಯ ಸುತಾಃ ಸಮಸ್ತಾಃ**
**ತೇ ಚೈವ ಗೀರ್ವಾಣಗಣಾಸ್ತ ಥಾನ್ಯೇ**
**ಯೇ ದ್ವಾರಕಾಯಾಂ ನಿವಸಂತಿ ಸರ್ವೇ** ॥೧೪೩॥

ಆ ಚಾರುದೇಷ್ಣನು ಹಿಂದೆ ಗಣಪತಿಯಾಗಿದ್ದನು. ಶ್ರೀಕೃಷ್ಣನ ಇತರ ಮಕ್ಕಳು ಕೂಡ ದೇವತೆಗಳೆ. ಅಷ್ಟೇ ಏಕೆ ದ್ವಾರಕೆಯಲ್ಲಿರುವ ಎಲ್ಲ ಜನರು ದೇವತೆಗಳೇ ಆಗಿದ್ದರು.

ವಿ. ವಿ. : ಶ್ರೀಕೃಷ್ಣನು ವಾಸವಾಗಿರುವ ಸ್ಥಳವು ವೈಕುಂಠವಲ್ಲವೇ? ಅಂದಮೇಲೆ ಅಲ್ಲಿ ಇತರರಿಗೆ ಸ್ಥಾನವೆಲ್ಲಿ?

**ತಸ್ಯಾಂ ಸಮಸ್ತೈರಭಿಪೂಜ್ಯಮಾನೇ**
**ದೇವೈಃ ಸ್ವಪೂರ್ಯಾಂ ನಿವಸತ್ಯನಂತೇ**
**ಯಯೌ ಕದಾಚಿತ್ಸ ತು ರೌಕ್ಮಿಣೇಯಃ**
**ಸಾಂಬೇನ ಸಾಕಂ (ರ್ಧಂ) ಭುಜಗೇಂದ್ರ ಲೋಕಮ್ ||೧೪೪||**

ದ್ವಾರಾವತಿಯ ಎಲ್ಲ ಪ್ರಜೆಗಳಿಂದಲೂ ಶ್ರೀಕೃಷ್ಣನು ಪೂಜೆಗೊಳ್ಳುತ್ತ ಸುಖವಾಗಿ ಆನಂದದಿಂದ ಕಾಲ ಕಳೆಯುತ್ತಿರಲು, ಒಂದುದಿನ ರುಕ್ಮಿಣಿಯ ಪುತ್ರನಾದ ಪ್ರದ್ಯುಮ್ನನು ಸಾಂಬನನ್ನು ಕೂಡಿಕೊಂಡು ನಾಗಲೋಕ (ಪಾತಾಳಲೋಕ)ಕ್ಕೆ ಹೋದನು.

**ಅಜ್ಞಾನ ತಸ್ತೈರಭಿ ಯೋಧಿತಃ ಸ**
**ಜಿಗಾಯ ಸರ್ಪಾನಪಿ ವಾಸುಕಿಂ ಚ**
**ವಿದ್ರಾವ್ಯ ಬಾಣೈರಥ ರತ್ನ ಸಂಚಯೋನ್**
**ಸಮಾದದೇ ಸೇಮುರಮುಂ ತತಸ್ತೇ ||೧೪೫||**

ಸಾಂಬ ಮತ್ತು ಪ್ರದ್ಯುಮ್ನರು ಶ್ರೀಕೃಷ್ಣನ ಮಕ್ಕಳೆಂಬುದು ಪಾತಾಳದಲ್ಲಿದ್ದ ಸರ್ಪಗಳಿಗೆ ಜ್ಞಾನವಿರಲಿಲ್ಲ. ಕಾರಣ ಅವರಲ್ಲಿ ಯುದ್ಧವಾಯಿತು. ಪ್ರದ್ಯುಮ್ನನು ಇತರ ಸರ್ಪಗಳನ್ನು, ವಾಸುಕಿಯನ್ನೂ ಗೆದ್ದನು. ಬಾಣಗಳಿಂದ ಪೆಟ್ಟು ತಿಂದು ಪರಾಜಿತರಾದ ಸರ್ಪಗಳು, ಪ್ರದ್ಯುಮ್ನನಿಗೆ ಮುತ್ತುರತ್ನಗಳನ್ನಿತ್ತು ನಮಸ್ಕರಿಸಿದವು.

**ತೈಃ ಪೂಜಿತಃ ಸಾಂಬಸಹಾಯ ಆಶು**
**ಮಯಂ ಚ ಮಾಯಾವಿನಮಸ್ತ್ರ ವರ್ಷೈಃ**
**ವಿಜಿತ್ಯ ರುಂಧಾನಮನೇನ ಪೂಜಿತೋ**
**ಯೆಯೌ ರಥಸಾಂಬರಗೇನ ನಾಕಮ್ ||೧೪೬||**

ಆ ಸಾಂಬ ಮತ್ತು ಪ್ರದ್ಯುಮ್ನರು ಸರ್ಪಗಳಿಂದ ಪೂಜಿತರಾಗಿ ಮುಂದೆ ಸಾಗುವಾಗ, ಮಾಯಾವಿಯಾದ ರುಂಧನು ಎದುರಾದನು. ಅವನು ತನ್ನ ಮಾಯೆಯಿಂದ ಮಾರ್ಗವನ್ನು ತಡೆದನು. ಪ್ರದ್ಯುಮ್ನನು ಬಾಣಗಳ ಮಳೆಗರೆದು ಅವನನ್ನು ಗೆದ್ದು, ಅವನಿಂದ ಪೂಜೆಗೊಂಡು ಆಕಾಶ ಮಾರ್ಗದಿಂದ ಸ್ವರ್ಗಲೋಕಕ್ಕೆ ಹೋದರು.

**ತತ್ರೈವ ಕೃಷ್ಣೇನ ತು ಪಾರಿಜಾತೇ**
**ಹೃತೇ ಜಯೆಂತಂ ಪ್ರಜಗಾಯ ಬಾಚೌ**
**ಸಂಸ್ಪರ್ಧ ಯಾಯಾತ ಮಮುಷ್ಯ ಚಾನುಜಂ**
**ಸಾಂಬೋऽಜಯದ್ವೃಷಭಂ ನಾಮ ಶಸ್ತ್ರೈಃ ||೧೪೭||**

ಅಲ್ಲಿಗೆ (ಸ್ವರ್ಗಲೋಕಕ್ಕೆ) ದೇವೇಂದ್ರನ ಮಕ್ಕಳಾದ ಜಯಂತ ಮತ್ತು ಋಷಭರು ಬಂದರು. ಶ್ರೀಕೃಷ್ಣನು ಪಾರಿಜಾತ ವೃಕ್ಷ ಒಯ್ದುದ್ದನ್ನು ನಿಮಿತ್ತ ಮಾಡಿಕೊಂಡು,

ಪ್ರದ್ಯುಮ್ನ ಮತ್ತು ಸಾಂಬರೊಡನೆ ಯುದ್ಧಕ್ಕೆ ನಿಂತರು. ಪ್ರದ್ಯುಮ್ನನು ಜಯಂತನನ್ನು ಗೆದ್ದರೆ, ಸಾಂಬನು ಋಷಭನನ್ನು ಗೆದ್ದನು.

**ವಿ. ವಿ. :** ಜಯಂತ ಮತ್ತು ಋಷಭರು, ಪ್ರದ್ಯುಮ್ನ ಮತ್ತು ಸಾಂಬನ ಮೇಲೆ ಏಕೆ ಯುದ್ಧಕ್ಕೆ ಬಂದಿದ್ದರು? ಎಂಬುದಕ್ಕೆ ಸಮಾಧಾನ. ಜಯಂತ ಮತ್ತು ಋಷಭರ ತಂದೆ ದೇವೇಂದ್ರನನ್ನು ಗೆದ್ದು ಪ್ರದ್ಯುಮ್ನ ಮತ್ತು ಸಾಂಬರ ತಂದೆ ಶ್ರೀಕೃಷ್ಣನು ಪಾರಿಜಾತ ವೃಕ್ಷವನ್ನು ಒಯ್ದಿದ್ದನು. ಅದರ ಸೇಡು ತೀರಿಸುವದಕ್ಕಾಗಿ, ಆ ವೃಕ್ಷವನ್ನು ಪುನಃ ಪಡೆಯುವುದಕ್ಕಾಗಿ ಬಂದಿದ್ದರು. ಅಂದರೆ ಇವರಿಬ್ಬರು ಮಕ್ಕಳನ್ನು ಬಂಧಿಸಿದರೆ, ಶ್ರೀಕೃಷ್ಣನು ಬಂದು ಪಾರಿಜಾತ ವೃಕ್ಷ ಒಪ್ಪಿಸಿ ಮಕ್ಕಳನ್ನು ಬಿಡಿಸಿಕೊಳ್ಳುತ್ತಾನೆ ಎಂಬ ಊಹೆ ಅವರದಾಗಿತ್ತು.

**ಅಸ್ತ್ರಾಣಿ ತಾವಸ್ತ್ರವರೈರ್ನಿಹತ್ಯ**
**ತಯೋಶ್ಚ ತಾಭ್ಯಾಂ ಪ್ರತಿದಗ್ಧ ಯಾನೌ**
**ವಿದ್ರಾವ್ಯ ತೌ ಬಾಣವರೈಃ ಸುರೇಂದ್ರ–**
**ಸಂಪೂಜಿತೌ ಯಯತುರ್ವಿದ್ಯಯಾ ಖೇ ॥೧೪೮॥**

ಅಸ್ತ್ರಕ್ಕೆ ಪ್ರತ್ಯಸ್ತ್ರಗಳನ್ನು ಉಪಯೋಗಿಸಿ, ಪ್ರದ್ಯುಮ್ನ ಮತ್ತು ಸಾಂಬರು, ಜಯಂತ ಮತ್ತು ಋಷಭರ ಬಾಣಗಳನ್ನು ಕತ್ತರಿಸಿ ಅವರ ರಥಗಳನ್ನೂ ಸುಟ್ಟು ಹಾಕಿದರು. ಅವರು ಓಡಿಹೋದರು. ದೇವೇಂದ್ರನು ಬಂದು ಕ್ಷಮೆ ಯಾಚಿಸಿ ಅವರನ್ನು ಸತ್ಕರಿಸಿ ಪೂಜಿಸಿದನು. ನಂತರ ಅವರು ಆಕಾಶಮಾರ್ಗದಿಂದ ಹೊರಟುಹೋದರು.

**ಸ ವಿದ್ಯಯಾ ಸಾಂಬಮುದೂಹ್ಯ ರತ್ಯಾ**
**ಪ್ರದತ್ತಯಾ ರುಕ್ಮಿಣಿ ನಂದನಃ ಪುರೀಂ**
**ಯಯೌ ತತೋ ನಾರದ ಆಗಮದ್ವ್ರತಂ**
**ಜ್ಞಾತುಂ ಹರೇರ್ಬಹು ಭಾರ್ಯಾಸು ವೃತ್ತಿಮ್ ॥೧೪೯॥**

ರತಿಯಿಂದ ಪಡೆದ ವಿದ್ಯೆಯ ಪ್ರಭಾವದಿಂದ ಪ್ರದ್ಯುಮ್ನನು ಸಾಂಬನನ್ನು ಹೆಗಲಲ್ಲಿರಿಸಿಕೊಂಡು ದ್ವಾರಕಾ ನಗರಕ್ಕೆ ಬಂದನು. ಶ್ರೀಕೃಷ್ಣನು ಅನೇಕ ಜನ ಹೆಂಡಂದಿರಲ್ಲಿ ಯಾವ ರೀತಿ ನಡೆದುಕೊಳ್ಳುತ್ತಾನೆ ಎಂಬುದನ್ನು ಅರಿಯಲು ನಾರದರು ಅಲ್ಲಿಗೆ ಬಂದರು.

**ತಂ ದೃಷ್ಟ್ವ ಸಾಹಸ್ರಗೃಹೇಷು ದೃಷ್ಟ್ವಾ**
**ತಾವತ್ಸು ರೂಪೈರ್ವಿಹರಂತ ಮೇಕಂ**
**ಸ ವಿಸ್ಮಿತಃ ಪ್ರಯಯೌ ತಂ ಪ್ರಣಮ್ಯ**
**ಶಕ್ರ ಪ್ರಸ್ಥಂ ಪೂಜಿತಶ್ಚಾತ್ರ ಪಾರ್ಥೈಃ ॥೧೫೦॥**

ಆ ನಾರದರು, ಹದಿನಾರು ಸಾವಿರ ಮನೆಗಳಲ್ಲಿ, ಹದಿನಾರು ಸಾವಿರ ರೂಪ ಗಳಿಂದ ವಿಹರಿಸುತ್ತಿರುವ ಒಬ್ಬನೇ ಶ್ರೀಕೃಷ್ಣನನ್ನು ವಿಸ್ಮಯಗೊಂಡು ಕಂಡರು. ಅಲ್ಲಿಂದ ಮುಂದೆ ಇಂದ್ರಪ್ರಸ್ಥಕ್ಕೆ ನಡೆದರು. ಅಲ್ಲಿ ಪಾಂಡವರು ನಾರದರನ್ನು ಸತ್ಕರಿಸಿ ಪೂಜಿಸಿದರು.

ವಿ. ವಿ. : ನಾರದರ ಪ್ರವಾಸ ಸುಮ್ಮನೆ ಇರುವುದಿಲ್ಲ.

೧) ದ್ವಾರಕೆಗೆ ಬಂದಾಗ ಒಬ್ಬ ಶ್ರೀಕೃಷ್ಣ, ಹದಿನಾರು ಸಾವಿರ ಮನೆಗಳಲ್ಲಿ ಹೇಗೆ ಸಂಸಾರ ನಡೆಸಿದ್ದಾನೆ ಎಂಬುದನ್ನು ತೋರಿಸಿ, ಭಗವಂತನ ಅಗಾಧ ಮಹಿಮೆಯನ್ನು ಜಗತ್ತಿಗೆ ತೋರಿದರು.

ಅದೇ ರೀತಿಯಾಗಿ ಇಂದ್ರಪ್ರಸ್ಥಕ್ಕೂ ಸುಮ್ಮನೆ ಬಂದಿಲ್ಲ. ಐದು ಮಂದಿ ಪಾಂಡವರು ದ್ರೌಪದಿಯೊಡನೆ ಹೇಗೆ ಸಂಸಾರ ಸಾಗಿಸಿದ್ದಾರೆ ಎಂಬುದನ್ನು ತೋರಿಸುತ್ತ ದ್ರೌಪದಿದೇವಿಯರ ವಿಚಿತ್ರ ಮಹಿಮೆಯನ್ನು ಜಗತ್ತಿಗೆ ತಿಳಿಸಲು ಬಂದರು ಎಂದು ಹೇಳಿದರೆ ತಪ್ಪಲ್ಲ.

**ಸ ಆಜ್ಞಯಾ ಬ್ರಹ್ಮ ಆಪಕೃಷ್ಣಾಂ**
**ಕ್ರಮಾತ್ಕರ್ತುಂ ಭೀಮ ಏವೈಕ ಸಂಸ್ಥಾಂ**
**ಅನ್ಯಾದೇವಿಃ ಸ್ಥಾಪಯಿತ್ವಾ ಶರೀರೇ**
**ತಾಸ್ಯಾ ಭಾರತ್ಯಾಃ ಪೂರ್ಣಭೋಗಾರ್ಥಮೇವ** ||೧೫೧||

ಆ ನಾರದರು ಬ್ರಹ್ಮದೇವರ ಆಜ್ಞೆಯಿಂದಲೇ ಅಲ್ಲಿಗೆ ಬಂದಿದ್ದರು. ದ್ರೌಪದಿ ದೇವಿಯರು, ಭಾರತಿದೇವಿಯರ ಅವತಾರ. ಕಾರಣ ಭೀಮಸೇನ ದೇವರೊಬ್ಬರೇ ಪೂರ್ಣ ಭೋಗಕ್ಕೆ ಯೋಗ್ಯರು. ಇತರ ದೇವಿಯರೂ ದ್ರೌಪದಿ ದೇವಿಯರ ಶರೀರದಲ್ಲಿದ್ದಾರೆ, ಅವರಿಗೆ ಸ್ಪರ್ಶವಾಗದಂತೆ ಸಂಸಾರ ನಡೆಯಬೇಕು ಎಂಬ ಕ್ರಮವನ್ನು ತಿಳಿಸುವುದೇ ನಾರದರು ಬಂದ ಮುಖ್ಯ ಉದ್ದೇಶವಾಗಿತ್ತು.

(ಅದನ್ನು ನೇರವಾಗಿ ಹೇಳದೆ ಒಂದು ಕಥೆಯ ಮೂಲಕ ಪ್ರಾರಂಭಿಸುತ್ತಾರೆ. ಇದು ಉತ್ತಮ ಸಂಪ್ರದಾಯ ಮತ್ತು ಶೈಲಿಯೂ ಅಹುದು.)

**ಸುಂದೋಪಸುಂದೌ ಭ್ರಾತರೌ ಬ್ರಹ್ಮವಾಕ್ಯತ್**
**ಪರಸ್ಪರಾದನ್ಯತೋ ನೈವ ವಧ್ಯೌ**
**ತಿಲೋತ್ತಮಾರ್ಥೇ ನಿಹತೌ ಪರಸ್ಪರಂ**
**ತಯೋರ್ವಧಾ ರ್ಥೇ ಸೃಷ್ಟಯಾ ತೇನದೈತ್ಯೌ** ||೧೫೨||

ಸುಂದೋಪ ಸುಂದರರು ದೈತ್ಯರು. ಆದರೂ ನೆಚ್ಚಿನ ಅಣ್ಣ ತಮ್ಮಂದಿರು (ಸಹೋದರರು) ಒಬ್ಬರನ್ನೊಬ್ಬರನ್ನು ಅನ್ಯೋನ್ಯವಾಗಿ ಪ್ರೀತಿಸುತ್ತಿದ್ದರು. ಇತರ ಯಾರಿಂದಲೂ ಸಾಯಬಾರದೆಂದು ಬ್ರಹ್ಮನಿಂದ ವರವನ್ನೂ ಪಡೆದಿದ್ದರು. (ದೇವತೆಗಳಿಗೆ ಅವರ ಕಾಟ ಹೆಚ್ಚಾಯಿತು. ದೇವತೆಗಳ ಪ್ರಾರ್ಥನೆಯ ಮೇರೆಗೆ, ಅವರ ವಧಾರ್ಥವಾಗಿ ತಿಲೋತ್ತಮೆ ಯನ್ನು ಸೃಷ್ಟಿಸಿದನು.) ಅವಳಿಗೆ ಮೋಹಿತರಾಗಿ, ಪರಸ್ಪರ ಹೊಡೆದಾಡಿಕೊಂಡು ಸತ್ತರು.

ವಿ. ವಿ. : ಇದರ ವಿವರಣೆ ಇತರ ಪುರಾಣಗಳಲ್ಲಿ ಅನೇಕ ಪುಟಗಳಷ್ಟು ತುಂಬಿದೆ. ಆಚಾರ್ಯರು ಕೇವಲ ಒಂದೇ ಶ್ಲೋಕದಲ್ಲಿ ಅದರ ಸಾರವನ್ನೇ ಇಳಿಸಿದ್ದಾರೆ. ಇದು ಅವರ ಶೈಲಿಗೆ ಒಂದು ಮಾದರಿ.

**ಅತಃ ಪೃಥಗ್ವತ್ಸರಂತೋ ಭವತ್ಸು**
**ಕ್ರಮಾತ್ಕೃಷ್ಣಾ ತಿಷ್ಠತಾಂ ಯೋಽನ್ಯೋಯುಕ್ತಾಂ ।**
**ಪಶ್ಯೇದ್ಯೋಽಸೌ ವತ್ಸರಂ ತೀರ್ಥಯಾತ್ರಾಂ**
**ಕುರ್ಯಾದಿತಿ ಸ್ಮಾಥ ಚಕ್ರುಸ್ತಥಾ ತೇ** ||೧೫೩||

"ಆದುದರಿಂದ, ನಿಮ್ಮ ಜ್ಯೇಷ್ಠತೆಯ ಕ್ರಮದಂತೆ ದ್ರೌಪದಿ ದೇವಿಯರು ಒಬ್ಬೊಬ್ಬರಿಗೆ ಒಂದೊಂದು ವರ್ಷ ಮೀಸಲಾಗಿರಲಿ. ದ್ರೌಪದಿ ದೇವಿಯರು ಒಬ್ಬನಲ್ಲಿ ಕೂಡಿರುವಾಗ, ಮತ್ತೊಬ್ಬನು ಕಂಡರೆ, ಅವನು ಒಂದುವರ್ಷ ತೀರ್ಥಯಾತ್ರೆಯನ್ನು ಮಾಡಲಿ" ಎಂದು ನಾರದರು ಹೇಳಿದರು. ಪಾಂಡವರೂ ಅದೇ ರೀತಿಯಾಗಿ ಮಾಡಿದರು.

**ತತಃ ಕದಾಚಿದ್ಧರ್ಮ ರಾಜೇನ ಯುಕ್ತಾಂ**
**ಶಸ್ತ್ರಾಗಾರೇ ವಿಪ್ರ ಗೋರಕ್ಷಣಾರ್ಥಂ**
**ಶಸ್ತ್ರಾದಿತ್ಸುಃ ಫಲ್ಗುನೋಽದ್ರಾಕ್ಷ ಶಸ್ತ್ರೈಃ**
**ದಸ್ಯೂನ್ ಹತ್ವಾ ತೀರ್ಥಯಾತೋಽನ್ವಿಮೋಽಭೂತ್** ||೧೫೪||

ಅನಂತರ, ಒಂದುದಿನ ಧರ್ಮರಾಜನು, ದ್ರೌಪದಿಯೊಡನೆ (ಧರ್ಮರಾಜನು) ಶಸ್ತ್ರಾಗಾರದಲ್ಲಿ ಕೂಡಿದ್ದನು. ಅದೇ ಸಮಯಕ್ಕೆ ಒಬ್ಬ ಬ್ರಾಹ್ಮಣನು ಗೋರಕ್ಷಣೆಗಾಗಿ ಅಲ್ಪರಿಯುತ್ತ ಬಂದನು. ಅರ್ಜುನು ಶಸ್ತ್ರಾಗಾರ ಪ್ರವೇಶಿಸಿ, ಶಸ್ತ್ರಗಳನ್ನು ತಂದು ಕಳ್ಳರನ್ನು ಕೊಂದು, ಗೋವುಗಳನ್ನು ರಕ್ಷಿಸಿದನು. ತಾನು ತೀರ್ಥಯಾತ್ರೆಗಾಗಿ ಸಿದ್ಧನಾದನು.

**ಯುಧಿಷ್ಠಿರಾದ್ಯೈಃ ಸೌಹೃದಾದ್ವಾರಿತೋಽಪಿ**
**ಯಯೌ ಸತ್ಯಾರ್ಥಂ ಸ ಕದಾಚಿದ್ಗ್ರಸದ್ಯಾಂ**
**ಕುರ್ವನ್ ಸ್ನಾನಂ ಮಾಯಯಾ ನಾಗವಧ್ವಾ**
**ಹೃತೋ ಲೋಕಂ ಭುಜಗಾನಾಂ ಕ್ಷಣೇನ** ||೧೫೫||

ಧರ್ಮರಾಜ ಮೊದಲಾಗಿ ಎಲ್ಲ ಸಹೋದರರು, ಸಹೃದಯದಿಂದ ಅರ್ಜುನನನ್ನು ತಡೆದರಾದರೂ, ಅರ್ಜುನನು ಸತ್ಯಪಾಲನೆಗಾಗಿ ತೀರ್ಥಯಾತ್ರೆಗೆ ನಡೆದೇಬಿಟ್ಟನು. ಒಂದುದಿನ ಗಂಗಾನದಿಯಲ್ಲಿ ಸ್ನಾನ ಮಾಡುತ್ತಿರುವಾಗ, ಮಾಯಾವಿಳಾದ ನಾಗಲೋಕದವರು ಬಂದು ಅರ್ಜುನನನ್ನು ಅಪಹರಿಸಿದರು. ಕ್ಷಣಾರ್ಧದಲ್ಲಿ ಅವನು ನಾಗಲೋಕವನ್ನು ಪ್ರವೇಶಿಸಿದನು.

**ತಸ್ಯಾಃ ಪಿತಾಗರುಡೇನಾತ್ತಪತ್ಯುಃ**
**ಪುತ್ರಾಕಾಂಕ್ಷೀ ಚೋದಯಾಮಾಸ ಪಾರ್ಥಂ**
**ಸಂವತ್ಸರಂ ಬ್ರಹ್ಮಚರ್ಯೇಽತು ಪಾರ್ಥೈಃ**
**ಕೃಷ್ಣಾ ಹೇತೋಃ ಸಮಯೇಸಾಧು ಬದ್ಧಮ್** ||೧೫೬||

ಅಲ್ಲಿಯ ನಾಗಕನ್ನಿಕೆಯ ಪತಿಯನ್ನು ಗರುಡನು ಕೊಂದು ಹಾಕಿದ್ದನು. ಆ ಕನ್ನಿಕೆಯು ಪುತ್ರಾಕಾಂಕ್ಷಿಯಾಗಿದ್ದಳು. ಕಾರಣ ಅವಳ ತಂದೆಯು, ಪುತ್ರನನ್ನು

ದಯಪಾಲಿಸಬೇಕೆಂದು ಅರ್ಜುನನಿಗೆ ಪ್ರಾರ್ಥಿಸಿದನು. (ಪ್ರಚೋದಿಸಿದನು) ಅರ್ಜುನನು ಒಂದು ವರ್ಷ ಪರ್ಯಂತ ದ್ರೌಪದಿಯ ನಿಮಿತ್ತವಾಗಿ ಬ್ರಹ್ಮಚಾರಿಯಾಗಿರಲು ನಿಶ್ಚಯಿಸಿದನು.

**ಪುನಃ ಪುನರ್ಯಾಚ (ಚ್ಯ) ಮಾನಃ ಸ ಪಾರ್ಥಃ**
**ಪುತ್ರಾರ್ಥಮಸ್ಯಾ ಭುಜಗೇನ ತಸ್ಯಾಂ**
**ಉತ್ಪಾದಯಾಮಾಸ ಸುತಂ ಕುಜಾಂಶಂ**
**ನಾಮ್ನೇರಾವಂತಂ ವರುಣಾವೇಶಯುಕ್ತಮ್** ॥೧೫೭॥

ಪುನಃ ಪುನಃ ಯಾಚಿಸಿದ ಪ್ರಾರ್ಥನೆಯನ್ನು ಮನ್ನಿಸಿ, ಆ ಪಾರ್ಥನು ನಾಗಕನ್ನಿಕೆಗೆ ಪುತ್ರನನ್ನು ದಯಪಾಲಿಸಿದನು. ಅವಳ ಉದರದಲ್ಲಿ 'ಇರಾವಂತ' ಎಂಬ ಮಗನು ಹುಟ್ಟಿದನು. ಅವನು ಕುಜ ಅಂಶ ಇದ್ದು ವರುಣನ ಆವೇಶದಿಂದ ಕೂಡಿದ್ದನು.

**ಗುಣಾಃ ಪಿತುರ್ಮಾತೃಜಾತಿಃ ಸುತಾನಾಂ**
**ಯಸ್ಮಾ ತ್ತತಾಂ ಪ್ರಾಯಶಸ್ತೇನ ನಾಗಃ**
**ಬಲೀ ಚ ಪಾರ್ಥ ಪ್ರಥಮೋದ್ಭವತ್ವಾತ್**
**ಮಾಯಾವಿದಸ್ತ್ರೀ ಚ ಸುಧಾರ್ಮಿಕಶ್ಚ** ॥೧೫೮॥

ಆ ಮಗುವಿಗೆ ತಂದೆಯ ಗುಣ ಮತ್ತು ತಾಯಿಯ ಜಾತಿ, ಬಂದಿದ್ದವು. ಆ ನಾಗಕನ್ನಿಕೆಯಲ್ಲಿ, ಅರ್ಜುನನಿಂದ ಈ ಮಗನು ಮೊದಲಿಗೆನಾದ ಕಾರಣ ಜಾತಿಯಿಂದ 'ನಾಗ'ನಾದರೂ, ಅರ್ಜುನನ ಗುಣಗಳು ಬಂದಿದ್ದವು. ಅಂದರೆ ಬಲಿಷ್ಠನಿದ್ದನು. ಮಾಯೆಯನ್ನು ತಿಳಿವವನಾಗಿ, ಶಸ್ತ್ರಜ್ಞನು ಮತ್ತು ಧಾರ್ಮಿಕನೂ ಆಗಿದ್ದನು.

**ತತೋ ಯಯಾವರ್ಜುನ ಸ್ತೀರ್ಥಯಾತ್ರಾ**
**ಕ್ರಮೇಣ ಪಾಂಡ್ಯಾಸ್ತನಯೋಽಸ್ಯ ಮಾತ್ರಾ**
**ಸಹ ತ್ಯಕ್ತೋ ಭುಜಗೈ ರ್ದೇವ ಲೋಕೇ**
**ಸಂಪೂಜಿತೋಽನ್ಯವ ಸದ್ದೈವತೈಶ್ಚ** ॥೧೫೯॥

ಆನಂತರ ಅರ್ಜುನನು ತೀರ್ಥಯಾತ್ರೆಯನ್ನು ಮಾಡುತ್ತ ಕ್ರಮೇಣ ಪಾಂಡ್ಯ ದೇಶಕ್ಕೆ ಬಂದನು.

ಇತ್ತ ಎಲ್ಲ ಸರ್ಪಗಳು ಸೇರಿ, ಈ ನಾಗಕನ್ಯೆಯ ಮೇಲೆ ದೂರು ಹೊರಿಸಿ ಬಹಿಷ್ಕರಿಸಿದರು. ಕಾರಣ ಆ ಕನ್ಯೆ ಮಗನನ್ನು ಕರೆದುಕೊಂಡು ದೇವಲೋಕಕ್ಕೆ ಹೋದಳು. ಅಲ್ಲಿ ದೇವತೆಗಳು ಮಗುವನ್ನು ಸತ್ಕರಿಸಿದರು. ತಾಯಿ ಮಗ ಅಲ್ಲಿ ವಾಸಿಸಿದರು.

**ವಿ. ವಿ. :** "ಗಂಡಸತ್ತ ಮೇಲೆ ಈ ಕನ್ಯೆ ಪರಪುರುಷ ಅರ್ಜುನನಿಂದ ಮಗನನ್ನು ಪಡೆದಿದ್ದಾಳೆ" ಎಂಬುದೇ ಆಕೆಯ ಬಹಿಷ್ಕಾರಕ್ಕೆ ಕಾರಣ. ಇದು ಅಂದಿನ ಅಲ್ಲಿಯ ಸಮಾಜಧರ್ಮ. ಇಂದಿಗೂ ಇಲ್ಲಿ ಆ ವಿಚಾರ ಉಳಿದುಕೊಂಡಿದೆ.

ಈ ದೋಷ ಅರ್ಜುನನಿಗೆ ಇಲ್ಲವೇ? ಎಂಬುದಕ್ಕೆ ಸಮಾಧಾನ.

**ಸತ್ಯಾತ್ಯಯಾನ್ನೈವ ದೋಷೋऽರ್ಜುನಸ್ಯ**
**ತೇಜೀಯ ಸಂಶ್ಚಿಂತನೀಯಃ ಕಥಂಚಿತ್**
**ಶ್ರೇಷ್ಠಾಪರಾಧಾನ್ನಾನ್ಯ ದೋಷಸ್ಯ ಲೇಪ**
**ಸ್ತೇ ಜೇಯಸಾಂ ನಿರ್ಣಯೋऽಯಂ ಹಿ ಶಾಸ್ತ್ರೇ** ||೧೬೦||

"ಜ್ಞಾನಿಗಳಿಗೆ ಕ್ಷುದ್ರಾಪರಾಧದ ದೋಷ ಹತ್ತಲಾರದು" ಇದು ನಿಯಮ. ಶಾಸ್ತ್ರ ಸಮ್ಮತವು ಅಹುದು. ಅರ್ಜುನ ಮಹಾಜ್ಞಾನಿ. ಅವನಿಗೆ ಇದು ಕ್ಷುದ್ರ ಅಪರಾಧ. ಅದಕ್ಕಾಗಿ ಗಣನೆಗೆ ತರಬಾರದು. ಮೇಲಾಗಿ ದೇವತೆಗಳ ಧರ್ಮವೇ ಬೇರೆ. ಇದನ್ನರಿತೇ ಅರ್ಜುನನ ಸಹೋದರರು ಅರ್ಜುನನ ಮೇಲೆ ತಪ್ಪನ್ನು ಹೊರಿಸಲಿಲ್ಲ. ಕೀಳಾಗಿಯೂ ಕಾಣಲಿಲ್ಲ.

ಅರ್ಜುನನ ಬ್ರಹ್ಮಚರ್ಯದ ನಿಯಮಕ್ಕೆ ಚ್ಯುತಿಯಾಗಲಿಲ್ಲವೇ?

**ಅತಿ ಸ್ನೇಹಾ ಚ್ಚಾಗ್ರಜಾಭ್ಯಾಂ ತದಸ್ಯ**
**ಕ್ಷಾಂತಂ ಸುತಾ ಪಾಂಡ್ಯ ರಾಜೇನ ದತ್ತಾ**
**ಸಂವತ್ಸರಾಂತೇ ಫಲ್ಗುನಸ್ಯಾನುರೂಪಾ**
**ಚಿತ್ರಾಂಗದಾ ವೀರಸೇನೇನ ತೋಷಾತ್** ||೧೬೧||

ತಮ್ಮನ ಮೇಲಿನ ಅತಿ ಸ್ನೇಹದಿಂದ ಅಗ್ರಜರಾದ ಧರ್ಮ, ಭೀಮರು ಆ ಕ್ಷುದ್ರ ಅಪರಾಧವನ್ನು ಕ್ಷಮಿಸಿದ್ದಾರೆ. (ಕಾರಣ ಅರ್ಜುನನಿಗೆ ಆ ನಿಯಮ ಮುರಿದ ದೋಷವಿಲ್ಲ.)

ಪಾಂಡ್ಯ ದೇಶದ ರಾಜರು ವೀರಸೇನ. ಅವನ ಮಗಳೇ ಚಿತ್ರಾಂಗದೆ. ಆ ರಾಜನು ತನ್ನ ಮಗಳನ್ನು ಅರ್ಜುನನಿಗೆ ಕೊಟ್ಟನು. ಅವಳು ಅರ್ಜುನನಿಗೆ ತಕ್ಕಂತೆ ಅನುರೂಪಳಾಗಿದ್ದಳು.

ವೀರಸೇನ ಮತ್ತು ಚಿತ್ರಾಂಗದೆಯವರ ಮೂಲರೂಪ.

**ಸ ವೀರಸೇನಸ್ತ್ವ ಷ್ಟುರಂಶೋ ಯಮಸ್ಯಾ**
**ಪ್ಯಾವೇಶಯುಕ್ ಸಾ ಚ ಕನ್ಯಾ ಶಚೀ ಹಿ**
**ತಾರಾದೇಹೇ ಸೂರ್ಯಜಸ್ಯಾಂಗ ಸಂಗಾತ್**
**ಸ್ವರ್ಗಂ ನಾಗಾದಂತರಿಕ್ಷಾದಿ ಹಾಸೀತ್** ||೧೬೨||

ಆ ವೀರಸೇನನು 'ತ್ವಷ್ಟ' ಎಂಬ ಸೂರ್ಯನ ಅಂಶದವನು. ಅಲ್ಲದೇ ಅವನಲ್ಲಿ ಯಮನ ಆವೇಶವೂ ಇದ್ದಿತು. ಆ ಕನ್ಯೆ ಶಚಿದೇವಿ. ಇವಳೇ ತಾರಾದೇವಿಯಾದಳು. ಆದರೆ ಆ ತಾರಾದೇವಿಗೆ ಸೂರ್ಯಜ (ಸುಗ್ರೀವನ) ಸಂಗದ ದೋಷದ ನಿಮಿತ್ತ ಸ್ವರ್ಗ ದೊರೆಯಲಿಲ್ಲ. ಅವಳೇ ಇಂದು ಚಿತ್ರಾಂಗದೆಯಾಗಿ ಹುಟ್ಟಿದ್ದಾಳೆ.

**ತೇನೈವ ಹೇತೋರ್ನಾತಿ ಸಾಮೀಪ್ಯ ಮಾಸೀತ್**
**ತಸ್ಯಾಃ ಪಾರ್ಥೇ ಪುತ್ರಿಕಾ ಪತ್ರಧರ್ಮಾತ್**
**ತಾಸ್ಯಾಂ ಜಾತೋ ಬಭ್ರುವಾಹೋऽರ್ಜುನೇನ**
**ಪೂರ್ವಂ ಜಯಂತಃ ಕಾಮದೇವಾಂಶಯುಕ್ತಃ** ||೧೬೩||

ಹಿಂದಿನ ದೋಷದಿಂದಲೇ ಇಲ್ಲಿಯೂ ಕೂಡ ದಂಪತಿಗಳ ಸಾಮೀಪ್ಯ ಬಹಳ ದಿನ ಇರಲಿಲ್ಲ. ಅರ್ಜುನನಿಂದ, ಚಿತ್ರಾಂಗದೆಯ ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನೇ ಪುತ್ರಿಕಾ ಪುತ್ರಿಕ ನ್ಯಾಯದಿಂದ ಪಾರಸೇನನು ತನ್ನ ರಾಜ್ಯಕ್ಕಾಗಿ ತೆಗೆದುಕೊಂಡನು. ಅವನೇ ಬಭ್ರುವಾಹನನು. ಇವನು ಮೊದಲು ಇಂದ್ರನ ಪುತ್ರನಾದ ಜಯಂತನು. ಇಂದು ಮನ್ಮಥನ ಆವೇಶಯುಕ್ತನಾಗಿ ಹುಟ್ಟಿದ್ದಾನೆ.

**ಪುತ್ರಂ ವೀರಂ ಜನಯಿತ್ವಾರ್ಜುನೋಽತೋ**
**ಗಚ್ಛನ್ ಪ್ರಭಾಸಂ ಶಾಪತೋ ಗ್ರಾಹದೇಹಾಃ**
**ಅಮೂಮುಚಚ್ಚಾಪ್ಸರಸಃ ಸ ಪಂಚ**
**ತಾಭಿರ್ಗೃಹೀತಃ ಪ್ರವಿಕ್ಷ್ಯಷ್ಯ ತೀರಮ್** ||೧೬೪||

ವೀರನಾದ ಪುತ್ರನ ಜನನ ಆದ ನಂತರ ಅರ್ಜುನನು ಅಲ್ಲಿಂದ ಪ್ರಭಾಸ ಕ್ಷೇತ್ರದತ್ತ ನಡೆದನು. ದಾರಿಯಲ್ಲಿ ಸ್ನಾನ ಮಾಡುವಾಗ ಶಾಪಗ್ರಸ್ಥವಾದ ಐದು ಮೊಸಳೆಗಳನ್ನು ಹೊರತೆಗೆದು ಅವರನ್ನು ಅಪ್ಸರೆಯನ್ನಾಗಿ ಮಾಡಿ ಶಾಪದಿಂದ ಮುಕ್ತಿ ಗೊಳಿಸಿ ಮುಂದೆ ಸಾಗಿದನು.

**ಮೊಸಳೆಗಳಾಗಲು ಕಾರಣ –**

**ವಿಪ್ರಾಪಹಾಸಾತ್ ಕುತ್ಸಿತಯೋನಿ ತಸ್ತಾಃ**
**ಕನ್ಯಾತೀರ್ಥೆ ಪಾಂಡವಃ ಸಂಪ್ರಮೋಚ್ಯ**
**ಪ್ರಾಪ್ತಃ ಪ್ರಭಾಸಂ ವಾಸುದೇವಾನುಜಾಂ ತಾಂ**
**ಶುಶ್ರಾವ ರಾಮೇಣ ಸುಯೋಧನೋ ದ್ಯತಾಮ್** ||೧೬೫||

ಅಪ್ಸರೆಯವರು ಒಬ್ಬ ವಿಪ್ರನನ್ನು ಅಪಹಾಸ್ಯ ಮಾಡಿದುದರಿಂದ ಕುತ್ಸಿತ ಯೋನಿಯಲ್ಲಿ ಒಂದು ಕನ್ಯಾ ತೀರ್ಥದಲ್ಲಿ ಮೊಸಳೆಗಳಾಗಿ ಬಿದ್ದಿದ್ದರು. ಅರ್ಜುನನು ಅವರನ್ನು ಹೊರತೆಗೆದು ಶಾಪದಿಂದ ಬಿಡುಗಡೆ ಮಾಡಿಸಿ, ತಾನು ಪ್ರಭಾಸಕ್ಕೆ ಬಂದನು. ಅಲ್ಲಿ ಶ್ರೀಕೃಷ್ಣನ ತಂಗಿಯನ್ನು ಬಲರಾಮನು ದುರ್ಯೋಧನನಿಗೆ ಕೊಡಲು ನಿಶ್ಚಯಿಸಿದುದನ್ನು ಕೇಳಿದನು.

**ವಿ. ವಿ. :** "ಸಜ್ಜನರ ಮನ ನೊಂದರೆ ಎಂತಹ ಅನರ್ಥ" ಎಂಬುದು ಈ ಘಟನೆಯಿಂದ ವ್ಯಕ್ತವಾಗುತ್ತದೆ.

**ವಿಚಿಂತ್ಯ ಕಾರ್ಯಂ ಯತಿರೂಪಂ ಗೃಹೀತ್ವಾ**
**ಕುಶಸ್ಥಲೀಂ ಪ್ರಯಯೌ ತಂ ಸಮೀಹೇ**
**ಪ್ರಾಪ್ತಂ ಕೃಷ್ಣಃ ಪ್ರಾಹಸತ್ ಸಂವಿಜಾನನ್**
**ಸತ್ವಾ ಸಹಾಯಃ ಶಯನೀಯಾಧಿ ರೂಢಮ್** ||೧೬೬||

ಅರ್ಜುನನು ತನ್ನ ಕಾರ್ಯದ ಬಗೆಗೆ ಚೆನ್ನಾಗಿ ಆಲೋಚನೆಯನ್ನು ಮಾಡಿ, ಯತಿ ವೇಷವನ್ನು ಧರಿಸಿ ಕುಶಸ್ಥಲೀ ಹತ್ತಿರ ಬಂದು ತಂಗಿದನು. ಶ್ರೀಕೃಷ್ಣ ಆಗ

ಸತ್ಯಭಾಮೆಯೊಂದಿಗೆ ಹಾಸಿಗೆಯ ಮೇಲೆ ಕುಳಿತಿದ್ದನು. (ಅರ್ಜುನನ ಸಮಾಚಾರ ತಿಳಿದು) ನಗಹತ್ತಿದನು.

**ಸವಜ್ಞಾ ಸಾ ಲೀಲಯಾ ಹಾಸಹೇತು-**
**ಮಪ್ಯಚ್ಛತಂ ಸೋಽಪಿ ತಸ್ಯೈ ಬಭಾಷೇ**
**ಲೀಲಾಭಾಟೌ ದರ್ಶನಾರ್ಥಂ ಪುನಸ್ತಾ**
**ವಗಚ್ಛತಾಂ ರೈವತಂ ಶೈಲರಾಜಮ್** ॥೧೬೮॥

ಸತ್ಯಭಾಮೆ ಬಲ್ಲವಳಾದರೂ, ಲೀಲೆಗಾಗಿ ನಗುತ್ತಲೇ ಅರಿಯದವಳಂತೆ ಶ್ರೀಕೃಷ್ಣನ ಭಾಷೆಯಲ್ಲಿಯೇ ಉತ್ತರಿಸಿದಳು. ಅಂದರೆ ಸಹಕರಿಸಿದಳು. ಇಬ್ಬರೂ ಕೂಡ ಯಾರಿಗೂ ತಿಳಿಯದ ಹಾಗೆ ಪರ್ವತ ರಾಜನಾದ ರೈವತ ಪರ್ವತಕ್ಕೆ ದರ್ಶನಾರ್ಥ ಬಂದರು.

**ಅಕ್ರೀಡೋಽಸೌ ಭೋಜವೃಷ್ಣ್ಯಂಧಕಾನಾಂ**
**ತತ್ರಾ ಪಶ್ಯತ್ ಕೇಶವಃ ಫಲ್ಗುನಂ ತಂ**
**ಸ್ವಸುರ್ದಾನೇ ಸ ಪ್ರತಿಜ್ಞಾ ರಹೋಽಸ್ಮೈ**
**ಚಕ್ರೇ ಕೃಷ್ಣೋಽಥಾ ಸದತ್ ಸರ್ವವೃಷ್ಣೀನ್** ॥೧೬೯॥

ಆ ಪರ್ವತವು ಭೋಜರಿಗೂ, ಯಾದವರಿಗೂ, ಅಂಧಕರಿಗೂ ಕ್ರೀಡಾ ಸ್ಥಾನವಾಗಿತ್ತು. ಅಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕಂಡನು. ಆತನಿಗೆ ತನ್ನ ತಂಗಿಯನ್ನು ಕೊಡುವುದಾಗಿಯೂ ರಹಸ್ಯವಾಗಿ ಪ್ರತಿಜ್ಞೆಯೂ ಮಾಡಿದನು. ನಂತರ ಯಾದವರನ್ನು ಕೂಡಿಕೊಂಡನು.

**ದೃಷ್ಟ್ವಾ ಗಿರೌ ರೌಹಿಣೇಯೋ ಯತೀಂದ್ರ**
**ವೇಷಂ ಪಾರ್ಥಂ ಜ್ಞಾತಿಯುಕ್ತಃ ಪ್ರಣಮ್ಯ**
**ಚಕ್ರೇ ಪೂಜಾಂ ಫಲ್ಗುನೋಽಪಿ ಪ್ರಣಾಮಂ**
**ಗುಣಜ್ಯೇಷ್ಠೋಽಸೀತಿ ಚಕ್ರೇ ಬಲಾಯ** ॥೧೭೦॥

ಬಲರಾಮನು ಆ ಯತೀಂದ್ರರ ವೇಷದಲ್ಲಿದ್ದ ಅರ್ಜುನನನ್ನು ಕಂಡನು. ಬಂಧುಗಳನ್ನು ಕೂಡಿಕೊಂಡು ಬಂದು ಆತನನ್ನು ಪೂಜಿಸಿ, ಸತ್ಕರಿಸಿದನು. ಯತಿ ರೂಪದಲ್ಲಿದ್ದ ಅರ್ಜುನನು ಕೂಡ, ನೀನು ಗುಣಗಳಲ್ಲಿ ಜ್ಯೇಷ್ಠನೆಂದು ಬಲರಾಮನಿಗೆ ನಮಸ್ಕರಿಸಿದನು.

ವಿ. ವಿ. : ಎಷ್ಟಾದರೂ ಬಲರಾಮನು ಶೇಷನಲ್ಲವೇ?

**ಸರ್ವಜ್ಞಂ ತಂ ವಾಗ್ಮಿನಂ ವಿಕ್ಷ್ಯ ರಾಮಃ**
**ಕನ್ಯಾಗಾರೇ ವರ್ಷಕಾಲೇ ನಿವಾಸಂ**
**ಸತ್ಕಾರ ಪೂರ್ವಂ ಕಾರಯೇತ್ಯಾಹ ಕೃಷ್ಣಂ**
**ನೈವೇತ್ಯೂಚೇ ಕೇಶವೋ ದೋಷವಾದೀ** ॥೧೭೧॥

ಆ ಯತಿಯು ಸರ್ವಜ್ಞನು ಮತ್ತು ಮಾತಿನಲ್ಲಿ ಚತುರನು ಎಂದು ಬಲರಾಮನು ತಿಳಿದನು. ಆತನನ್ನು ಸತ್ಕಾರಪುಗಿರ್ವರ ಪೂಜಿಸುತ್ತ ಕನ್ಯಾಗೃಹದಲ್ಲಿ ವರ್ಷಕಾಲ ವಾಸ ಮಾಡಿಸು ಎಂದು ಕೃಷ್ಣನಿಗೆ ಹೇಳಿದನು. ಶ್ರೀಕೃಷ್ಣನು ಬೇಡವೆಂದು ಹೇಳಿದಾಗ, "ಯತಿಗಳಲ್ಲಿ ದೋಷ ಹುಡುಕುವುದು ಸರಿಯಲ್ಲ" ಎಂದನು. ಆದರೂ ಶ್ರೀಕೃಷ್ಣನು,

**ಯುವಾ ಬಲೀ ದರ್ಶನೀಯೋಽತಿ ವಾಗ್ಮೀ**
**ನಾಯಂ ಯೋಗ್ಯ ಕನ್ಯಾಗಾರವಾಸಂ**
**ಇತ್ಯುಕ್ತವಂತಂ ರಾಮ ಆಹಾಪ್ತ ವಿದ್ಯೇ**
**ನಾಸ್ಮಿನ್ ಶಂಕೇ ತ್ಯೇವ ಲೋಕಾಧಿನಾಥಮ್** ॥೧೭೨॥

ಈ ಯತಿಯು ತರುಣನಾಗಿದ್ದಾನೆ. ಬಲಶಾಲಿಯೂ ಕೂಡ, ನೋಡಲು ಸುಂದರನು, ಮಾತಿನಲ್ಲಿ ಚತುರನು, ಇಂತಹ ಯತಿಯನ್ನು ಕನ್ಯಾಗಾರದಲ್ಲಿ ವಾಸ ಮಾಡಿಸುವುದು ಯೋಗ್ಯವಲ್ಲ ಎಂದು ಕೃಷ್ಣನು ಹೇಳಿದಾಗ, ಜ್ಞಾನಿಗಳಲ್ಲಿ ಶಂಕಿಸಬಾರದು ಎಂದು ಬಲರಾಮನು, ಲೋಕಾಧಿಪತಿಯಾದ ಶ್ರೀಕೃಷ್ಣನಿಗೆ ಉತ್ತರಿಸಿದನು.

**ನಾಸ್ಮನ್ಮತೇ ರೋಚತೇ ತ್ವನ್ಮತಂ ತು**
**ಸರ್ವೇಷಾಂ ನಃ ಪೂಜ್ಯ ಮೇವಾಸ್ತು ತೇನ**
**ಇತ್ಯುಕ್ತ್ವಾ ತಂ ಕೇಶವಃ ಸೋದರಾಯೈ**
**ಶುಶ್ರೂಷ ಸ್ವೇತ್ಯಾಹ ಸಂತಂ ಯತೀಂದ್ರಮ್** ॥೧೭೩॥

ಆಗ ಶ್ರೀಕೃಷ್ಣನು ಪುನಃ ಬಲರಾಮನಿಗೆ, ನಿಮ್ಮ ಮಾತು ನನಗಂತೂ ಸರಿಯೆನಿಸುವುದಿಲ್ಲ. ಆದರೂ ಹಿರಿಯರಾದ ನಿಮ್ಮ ಮಾತು ಎಲ್ಲರಿಗೂ ಪೂಜ್ಯವೇ, 'ಹಾಗೇ ಆಗಲಿ' ಎನ್ನುತ್ತ ತಂಗಿಯಾದ ಸುಭದ್ರೆಗೆ ಈ ಯತೀಂದ್ರರನ್ನು ಚೆನ್ನಾಗಿ ಸೇವಿಸು ಎಂದು ಹೇಳಿದನು.

**ನಿತ್ಯಾ ಪ್ರಮತ್ತಾ ಸಾಧು ಸಂತೋಷಯೇತಿ**
**ಪ್ರೋಕ್ತಾ ತಥಾ ಸಾಕರೋ ತ್ಯೋಽಪಿ ತತ್ರ**
**ಚಕ್ರೇ ಮಾಸಾನ್ವಾರ್ಷಿಕಾನ್ಸತ್ಕಥಾಭಿಃ**
**ವಾಸಂ ವಾಕ್ಯಂ ಶ್ರದ್ಧಧಾನೋ ಹರೇಸ್ತತ್** ॥೧೭೪॥

ದಿನಾಲು ಆಲಸ್ಯ ಮತ್ತು ಪ್ರಮಾದಗಳಿಲ್ಲದೆ ಈ ಸಾಧುವನ್ನು ಸಂತೋಷಿಸು" ಎಂದು ಶ್ರೀಕೃಷ್ಣನಿಂದ ಕೇಳಿದ ಆ ಸುಭದ್ರೆಯು ಅದರಂತೆ ಮಾಡುತ್ತಿದ್ದಳು. ಯತಿಯಾದರೋ ಒಳ್ಳೆಯ ಕಥೆಗಳನ್ನು ಹೇಳುತ್ತ ಶ್ರೀಹರಿಯ ಮಾತಿನಲ್ಲಿ ವಿಶ್ವಾಸವಿಟ್ಟು ಮಾಸಗಳನ್ನು ಕಳೆಯುತ್ತ ವಾಸವಾಗಿದ್ದನು.

**ಸಂಯಾಚಿತಃ ಫಲ್ಗುನೇನಾಹ ವಾಕ್ಯಂ**
**ಯದ್ವಾಸುದೇವಸ್ತನ್ನ ಜಾನಾತಿ ಕಶ್ಚಿತ್**
**ಋತೇ ಪಿತ್ರೋರ್ವಿ ಪೃಥೋ ಸಾತ್ಯಕೇರ್ವಾ**
**ಸುಭದ್ರಾಂ ತೇ ಪ್ರದದಾನೀತಿ ಸತ್ಯಂ** ॥೧೭೫॥

ಅರ್ಜುನನು ಯಾಚಿಸಿದ್ದು, ಶ್ರೀಕೃಷ್ಣನು ಸುಭದ್ರೆಯನ್ನು ಫಲ್ಗುನನಿಗೆ ಕೊಡಬೇಕೆಂದು ನಿಶ್ಚಯಿಸಿದ್ದು ಯಾರಿಗೂ ತಿಳಿದಿರಲಿಲ್ಲ. ಕೇವಲ ಅವಳ ತಂದೆ–ತಾಯಿ, ಪೃಥು ಮತ್ತು ಸಾತ್ಯಕಿ ಅವರು ಮಾತ್ರ ಇದನ್ನು ತಿಳಿದಿದ್ದರು.

ವಿ. ವಿ. : ಇಲ್ಲಿ ಒಂದು ಪ್ರಶ್ನೆ, ತಂದೆ–ತಾಯಿಗಳಿಗೆ ಈ ವಿಷಯ ತಿಳಿಯುವುದು ಯುಕ್ತವೇ? ಆದರೆ ಪೃಥು ಮತ್ತು ಸಾತ್ಯಕಿಗೆ ಏಕೆ ಹೇಳಬೇಕಾಗಿತ್ತು? ಅದಕ್ಕೆ ಸಮಾಧಾನ.

**ಅಸ್ತ್ರೇ ಶಸ್ತ್ರೇ ತತ್ತ್ವವಿದ್ಯಾಸು ಚೈವ**
**ಶಿಷ್ಯಃ ಶೈನೇಯೋ ವಾಸುದೇವೇಂದ್ರ ಸೂನ್ವೋಃ**
**ತಸ್ಮಾದಸ್ಮೈ, ಕಥಯಾಮಾಸ ಕೃಷ್ಣಃ**
**ಸ್ವಶಿಷ್ಯತ್ವಾ ದ್ವಿಷ್ಯಪೃಥೋಶ್ಚಾಪಿ ಸರ್ವಮ್** ||೧೭೬||

ಅಸ್ತ್ರ, ಶಸ್ತ್ರ ಮತ್ತು ತತ್ತ್ವಜ್ಞಾನ, ಇವೆಲ್ಲವುಗಳನ್ನು ಕಲಿಯುವುದರಲ್ಲಿ ಸಾತ್ಯಕಿಯು ಅರ್ಜುನ ಶಿಷ್ಯನು, ನಿಮ್ಮ ಪೃಥುವಾದರೋ ಶ್ರೀಕೃಷ್ಣನ ಸಾಕ್ಷಾತ್ ಶಿಷ್ಯನು. ಕಾರಣ ಇವರಿಗೂ ಎಲ್ಲ ವಿಷಯ ಹೇಳಿದ್ದನು.

ಇವರಿಂದ ಗುಟ್ಟು ರಟ್ಟಾಗುವುದಿಲ್ಲ. ಪ್ರಸಂಗ ಬಂದರೆ ಉಪಯೋಗವಾದೀತು ಎಂಬುದು ಕೃಷ್ಣನ ಉದ್ದೇಶ.

ಇತರರಿಗೆ ಏಕೆ ಹೇಳಲಿಲ್ಲ? ಉತ್ತರ.

**ಅನ್ಯೇ ಸರ್ವೇ ವಾಸುದೇವಸ್ಯ ಪಾರ್ಥಾನ್**
**ಪ್ರಿಯನ್ನಿತ್ಯಂ ಜಾನಾಮಾನಾ ಅಪಿ ಸ್ಮ**
**ರಾಮೇಣಾದಿಷ್ಟಾ, ಉದ್ಧವೋಽಥಾಹುಕಾ ದ್ಯ**
**ಹಾರ್ದಿಕ್ಯಾದ್ಯಾ ಸ್ಯವದಿತ್ಯಂತಿ ಜಿಷ್ಣೋಃ** ||೧೭೭||

ಉಳಿದವರು, ಎಲ್ಲರೂ ಶ್ರೀಕೃಷ್ಣನಿಗೂ, ಪಾಂಡವರಿಗೂ ಬೇಕಾಗಿದ್ದರು. ಅವರನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆದರೂ ಬಲರಾಮನ ಸ್ನೇಹ ಮತ್ತು ಪ್ರಭಾವದಿಂದ, ಉದ್ಧವ ಆಹುಕ ಮೊದಲಾದವರು ಕೂಡ ಕೃಷ್ಣನ ಮಾತನ್ನು ಒಪ್ಪಲಿಕ್ಕಿಲ್ಲ ಎಂಬ ವಿಚಾರದಿಂದ ಕೃಷ್ಣ ಅವರಿಗೆ ತಿಳಿಸಿರಲಿಲ್ಲ.

ಮೇಲಿನವರೆಲ್ಲರೂ ಶ್ರೀಕೃಷ್ಣನ ಭಕ್ತರೇ. ಆದರೂ ಅಸುರಾವೇಶ ಅವರಿಗೂ ತಪ್ಪಿದ್ದಲ್ಲ. ಜೊತೆಯಲ್ಲಿ ಬಲರಾಮನ ಪ್ರಭಾವ ಬೇರೆ.

**ದುರ್ಯೋಧನೇ ದಾತುಮಿಚ್ಛಂತಿ ಸರ್ವೇ**
**ರಾಮಪ್ರಿಯಾರ್ಥಂ ಜಾನಮಾನಾ ಹರೇಸ್ತತ್**
**ಅಪ್ಯಪ್ರಿಯಂ ರಾಕ್ಷಸಾವೇಶಯುಕ್ತಾಃ**
**ತಸ್ಮಾತ್ ಸರ್ವಾನ್ ವಂಚಯಾ ಮಾಸ ಕೃಷ್ಣಃ** ||೧೭೮||

ದುರ್ಯೋಧನನಿಗೆ ಸುಭದ್ರೆಯನ್ನು ಕೊಡುವ ಇಚ್ಛೆ ಶ್ರೀಕೃಷ್ಣನಿಗೆ ಇಲ್ಲ ಎಂಬುದನ್ನು ಅವರೆಲ್ಲರೂ ಬಲ್ಲವರಾಗಿದ್ದರು. ಆದರೂ ಬಲರಾಮನ ಪ್ರೀತಿಗೋಸ್ಕರ, ಅನುರಾವೇಶದಿಂದ, ಅವರು ಬಲರಾಮನ ಮಾತಿಗೆ ಒಪ್ಪುತ್ತಾರೆಂದು ತಿಳಿದು, ಶ್ರೀಕೃಷ್ಣನು ಅವರೆಲ್ಲರನ್ನು ವಂಚಿಸಿದನು.

(ಒಂದೇ ಕುಟುಂಬವಾದರೂ ಭಿನ್ನಾಭಿಪ್ರಾಯಗಳಿರುವುದು ಸ್ವಾಭಾವಿಕ.)

**ಪ್ರದ್ಯುಮ್ನಸಂಬ ಪ್ರಮುಖಾಶ್ಚ ವಂಚಿತಾ**
**ಯಯು ಸ್ತೀರ್ಥಾರ್ಥಂ ರಾಮಯುಕ್ತಾಃ ಸಮಗ್ರಾಃ**
**ಪಿಂಡೋದ್ಧಾರಂ ತತ್ರ ಮಹೋತ್ಸವೇಷು**
**ಸ್ವಾವರ್ತಯತ್ಸು ಕ್ವಚಿದೂಚೇ ಸುಭದ್ರಾ** ॥೧೭೯॥

ಪ್ರದ್ಯುಮ್ನ, ಸಾಂಬ ಮೊದಲಾದವರು ಕೂಡ ವಂಚಿತರಾಗಿ, ಎಲ್ಲರೂ ಕೂಡಿ ಬಲರಾಮನ ಜೊತೆಯಲ್ಲಿ ಪಿಂಡೋದ್ಧಾರ ಕ್ಷೇತ್ರಕ್ಕೆ ಹೋದರು. ಅಂದು ಅಲ್ಲಿ ಉತ್ಸವವಿದ್ದಿತು. ಇದನ್ನರಿತ ಸುಭದ್ರೆ ಯತಿಯನ್ನು ಕುರಿತು ಹೀಗೆ ಹೇಳಿದಳು.

**ಯತೇ ತೀರ್ಥಾನ್ಯಾಚರನ್ ಬಾಂಧವಾಂಸ್ತ್ವ-**
**ಮದ್ರಾಕ್ಷೀರ್ನಃ ಕ್ವಚಿದಿಷ್ಟಾನ್ ಸ್ಮ ಪಾರ್ಥಾನ್**
**ಕುಂತೀಂ ಕೃಷ್ಣಾಂ ಚೇತ್ಯಾಹ ಪೃಷ್ಟ್ವ ಃ ಸಪಾರ್ಥ**
**ಓಮಿತ್ಯೇ ಷಾ ಮಾಹ ಬಾನಾಮಯಂ ಸಃ** ॥೧೮೦॥

ಎಲೈ ಯತಿಗಳೇ! ತೀರ್ಥಯಾತ್ರೆಯಲ್ಲಿ ತಿರುಗಾಡುತ್ತಿರುವಾಗ, ನಮ್ಮ ಬಂಧುಗಳಾದ, ಪ್ರಿಯರಾದ, ಪಾಂಡವರನ್ನು, ಕುಂತಿಯನ್ನು ದ್ರೌಪದಿಯರನ್ನು ಎಲ್ಲಿ ಯಾದರೂ ಕಂಡಿದ್ದೀರಾ? ಎಂದು ಸುಭದ್ರೆ ಪ್ರಾರ್ಥಿಸಿದಾಗ 'ಓಂ' ಎಂದು ಯತಿವೇಷಧಾರಿಯಾದ ಅರ್ಜುನನು ಉತ್ತರವಿತ್ತನು.

'ಓಂ ಇತಿ' ಅಂದರೆ ಅಹುದು ಎಂದಂತೆ – ಅಷ್ಟೇ ಅಲ್ಲ 'ನಾನು ಆ ಪಾಂಡವ ರೊಂದಿಗೆ ಬಹಳ ದಿನ ಕೂಡಿಯೇ ಇದ್ದೆ. ಅವರ ವಿಷಯವನ್ನು ಬಲ್ಲೆ. ಅವರು ಕ್ಷೇಮದಿಂದ ಇದ್ದಾರೆ' ಎನ್ನುವ ಅಭಿಪ್ರಾಯ ಆತನದಾಗಿತ್ತು.

**ಭೂಯಃ ಸಾವಾದೀದ್ಭಗವನ್ನಿಂದ್ರಸೂನು**
**ಗತಸ್ತೀರ್ಥಾರ್ಥಂ ಬ್ರಾಹ್ಮಣೇಭ್ಯಃ ಶ್ರುತೋಮೇ**
**ಕ್ವಚಿದ್ದೃಷ್ಟೋ ಭವತೇತ್ಯೋಮಿತಿ ಸ್ಮ**
**ಪಾರ್ಥೋಽಪ್ಯೂಚೇ ಕ್ವೇತಿಸಾ ಪೃಚ್ಛದೇನಮ್** ॥೧೮೧॥

ಅವರಲ್ಲಿ ಅರ್ಜುನನು ತೀರ್ಥಯಾತ್ರೆಗೆ ಹೋಗಿದ್ದಾನೆಂದು ಒಬ್ಬ ಬ್ರಾಹ್ಮಣನಿಂದ ನಾನು ಕೇಳಿದ್ದೇನೆ. ಆತನು ಎಲ್ಲಿಯಾದರೂ ನಿಮಗೆ ಭೆಟ್ಟಿಯಾಗಿದ್ದನೇ? ಎಂದು ಪ್ರಾರ್ಥಿಸಿದಾಗ 'ಓಮಿತಸ್ಮ' ಎಂದು ಸಮ್ಮತಿಯ ಉತ್ತರವನ್ನಿತ್ತನು.

ಆಗ ಸುಭದ್ರೆ ಪುನಃ ಎಲ್ಲಿ? ಎಂದು ಪ್ರಶ್ನಿಸಿದಳು.

ಅತ್ರೈವೇತಿ ಸ್ಮಯಮಾನಂ ಚ ಪಾರ್ಥಂ
ಪುನಃ ಪುನಃ ಪರ್ಯಪೃಚ್ಛಚ್ಛುಭಾಂಗೀ
ಸೋಽಪ್ಯಾಹೋನ್ಮತ್ತೇಸೋಽಸ್ಮೀತಿ ಯಂಸ್ತಾಂ
ಫುಲ್ಲಾಕ್ಷೀ ತಂ ಸಾ ದದರ್ಶಾತಿ ಹೃಷ್ಟಾ ॥೧೮೨॥

ಆ ಪಾರ್ಥನನ್ನು ಇಲ್ಲಿಯೇ ನೋಡಿದೆನು. ಮಂದಹಾಸದಿಂದ ಆಶ್ಚರ್ಯ ಪಡುವಂತೆ ಆ ಅರ್ಜುನನು ಹೇಳಿದನು. ಅದನ್ನು ಕೇಳಿದ ಸುಭದ್ರೆ ಆಶ್ಚರ್ಯದಿಂದ ಪುನಃ ಪುನಃ ಎಲ್ಲಿ? ಎಲ್ಲಿ? ಕೇಳಿದಾಗ, ಎಲೆ ಶುಭಾಂಗಿ, ಹೀಗೇಕೆ ಮತ್ತಳಂತೆ ಮಾಡುವಿ. ಕಾಣುವುದಿಲ್ಲವೇ? ನಾನೇ ಆ ಪಾರ್ಥನು' ಎಂದಾಗ ಸುಭದ್ರೆಯು, ಆಶ್ಚರ್ಯಚಕಿತಳಾಗಿ, ಹರ್ಷಚಿತ್ತಳಾಗಿ ಆ ಅರ್ಜುನನನ್ನು ನೋಡಿದಳು.

ತತೋ ಹರ್ಷಾಲ್ಲಜ್ಜಯಾ ಚೋತ್ಪಲಾಕ್ಷೀ
ಕಿಂಚಿನ್ನೋಚೇ ಪಾರ್ಥ ಏವಾಮವಾಚ
ಕಾಮಾವಿಷ್ಟೋ ಮುಖ್ಯಕಾಲೋ ಹ್ಯಯಂ ನಾ
ವುದ್ವಾ ಹಾರ್ಥೇಽಸ್ತ್ವಿ ಸಾ ಚೈನ ಮಾಹ ॥೧೮೩॥

ಅರ್ಜುನನೆಂದು ತಿಳಿದ ಮೇಲೆ, ಆ ಉತ್ಪಲ ನೇತ್ರಿಯಾದ ಸುಭದ್ರೆ ಹರ್ಷಗೊಂಡು ನಾಚಿಕೆಯಿಂದ ಮೌನವನ್ನು ತಾಳಿದಳು. ಆಗ ಪಾರ್ಥನೇ ಮಾತನ್ನು ಮುಂದುವರಿಸಿದನು. ಕಾಮಯುಕ್ತವಾದ ಈ ಕಾಲವು ವಿವಾಹದ ಮುಖ್ಯ ಕಾಲವಾಗಲಿ, 'ಅಂದರೆ ಗಾಂಧರ್ವ ವಿವಾಹವಾಗಲಿ' ಎಂದಾಗ ಆ ಸುಭದ್ರೆ ಹೀಗೆ ಹೇಳಿದಳು.

ನಾತಿಕ್ರಮೋ ವಾಸುದೇವಸ್ಯ ಯುಕ್ತಃ
ತಸ್ಮಾತ್ತೇನೆಸ್ಯ ಪಿತೃಭ್ಯಾಂ ಚ ದತ್ತಾಂ
ಯುಕ್ತೋ ನಿಜೈರ್ಬಂಧು ಭಿರ್ಶ್ಯೋತ್ಸವೇ ಮಾಂ
ಸಮುದ್ವಹೇ ತ್ವಥ ಕೃಷ್ಣಂ ಸ ದಧ್ಯೌ ॥೧೮೪॥

ಶ್ರೀಕೃಷ್ಣನ ಇಚ್ಛೆಯನ್ನು ಅತಿಕ್ರಮಿಸುವುದು ಒಳ್ಳೆಯದಲ್ಲ. ಆದ್ದರಿಂದ ಶ್ರೀಕೃಷ್ಣನು, ನನ್ನ ತಾಯಿಗಳಿಂದ ಸಹಿತನಾಗಿ, ನನಗೆ ಕೊಟ್ಟಾಗ ಅದು ಯುಕ್ತವಾಗುತ್ತದೆ. ಬಂಧು ಬಾಂಧವರಿಂದ, ಮಹೋತ್ಸವದಿಂದ ನಾನು ನಿನ್ನನ್ನು ಮದುವೆಯಾಗುತ್ತೇನೆ'' ಎಂದಳು. ಆ ನಂತರ ಅರ್ಜುನನು ಶ್ರೀಕೃಷ್ಣನನ್ನು ಸ್ಮರಿಸಿದನು.

ವಿ. ವಿ. : ಅಂತಹ ಏಕಾಂತ ಪರಿಸ್ಥಿತಿಯಲ್ಲೂ ಸುಭದ್ರೆ ಹೇಳಿದ ಮಾತು ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತದೆ. ಸುಭದ್ರೆಯ ಸ್ಥಾನದಲ್ಲಿ ಮತ್ತೊಬ್ಬ ರಿದ್ದರೆ, ಏನಾಗುತ್ತಿತ್ತು? ಎಂಬುದನ್ನು ಓದುಗರು ಬಲ್ಲರು.

ಮಾತಾಪಿತೃಭ್ಯಾಂ ಸಹಿತೋಽಥ ಕೃಷ್ಣಃ
ತತ್ರೈವ ಯಾದ್ವಾಸವಶ್ಚಾಥ ಶಚ್ಯಾ
ಸಮಂ ಮುನೀಂದ್ರೈಃ ಫಲ್ಗುನೇನ ಸ್ಮೃತಾಸ
ತತ್ರೈವಾಗಾತ್ ಪ್ರೀತಿ ಯುಕ್ತೋ ನಿಶಾಯಾಂ ॥೧೮೫॥

ಶ್ರೀಕೃಷ್ಣನು ಸುಭದ್ರೆಯ ತಂದೆ ತಾಯಿಗಳೊಡನೆ ದ್ವಾರಾವತಿಗೆ ಬಂದನು. ಅರ್ಜುನನು ಸ್ಮರಿಸಿದ ಕೂಡಲೇ, ಇಂದ್ರನು, ಶಚೀ ಸಹಿತನಾಗಿ, ಮುನಿಗಳಿಂದ ಕೂಡಿಕೊಂಡು ಆ ರಾತ್ರಿಯಲ್ಲಿಯೇ ಅಲ್ಲಿಗೆ ಬಂದರು.

**ಕೃಷ್ಣ ಸ್ತತಃ ಪುರೋಹಿತೇನ ಸಾಕಂ**
**ತಯೋರ್ವಿವಾಹಂ ಕಾರಯಾಮಾಸ ಸಮ್ಯಕ್**
**ಮಾತಾ ಪಿತೃಭ್ಯಾಂ ಸಾತ್ಯಕೀನಾಪಿ ಯುಕ್ತೋ**
**ಮಹೋತ್ಸವೇಽವಿದಿತೇ ಮುನೀಂದ್ರೈಃ** ||೧೮೭||

ಶ್ರೀಕೃಷ್ಣನೇ ಅಲ್ಲಿ ನಿಂತು, ಅರ್ಜುನನ ತಾಯಿ-ತಂದೆಗಳ ಸಮಕ್ಷಮದಲ್ಲಿ, ಸುಭದ್ರೆಯ ತಾಯಿ ತಂದೆಗಳ ಯುಕ್ತನಾಗಿ, ಪುರೋಹಿತರು ನಿಶ್ಚಯಿಸಿದ ಯುಕ್ತ ಸಮಯದಲ್ಲಿ, ಇತರ ಮುನಿಗಳ ಸಾಕ್ಷಿಯಾಗಿ ಅವರಿಬ್ಬರ ವಿವಾಹ ಮಹೋತ್ಸವವನ್ನು ನೆರವೇರಿಸಿದನು.

**ತತಃ ಕೃಷ್ಣಃ ಸ್ಯಂದನಂ ಫಲ್ಗುನಾರ್ಥೇ**
**ನಿಧಾಯ ಸ್ವಂ ಪ್ರಯಯೌ ತದ್ರಜನ್ಯಾಂ**
**ಗತೇಽಥ ಶಕ್ರೇ ರಥಮಾರುರೋಹ**
**ಪ್ರಾತಃ ಪಾರ್ಥಃ ಸಹಿತೋ ಭಾರ್ಯಯೈವ** ||೧೮೭||

ಶ್ರೀಕೃಷ್ಣನು ಪಾರ್ಥನಿಗಾಗಿ ತನ್ನ ರಥವನ್ನೇ ಬಿಟ್ಟುಹೋದನು. ಇಂದ್ರನೂ ತನ್ನ ಪರಿವಾರದೊಡನೆ ಆ ರಾತ್ರಿಯೇ ಹೊರಟುಹೋದನು. ಇತರ ಜನರೂ ತೆರಳಿದರು. ಪ್ರಾತಃ ಕಾಲದಲ್ಲಿ ಅರ್ಜುನನು ತನ್ನ ಮಡದಿಯಾದ ಸುಭದ್ರೆಯೊಡನೆ ರಥದಲ್ಲಿ ಕುಳಿತನು.

ಇಲ್ಲಿಗೆ ಸುಭದ್ರಾ ಕಲ್ಯಾಣ ಮುಗಿಯಿತು.

**ವಿ. ವಿ. :** ಇದು ಪುರಾಣದ ಘಟನೆ. ಇದನ್ನೇ ಜ್ಞಾನಿಗಳಾದ ಒಬ್ಬ ಆಚಾರ್ಯರು ಅಧ್ಯಾತ್ಮದ ಹಿನ್ನೆಲೆಯಲ್ಲಿ ಬಹು ಚೆನ್ನಾಗಿ ಹೋಲಿಸಿ ಹೇಳಿದ್ದಾರೆ. ಇದರಲ್ಲಿ ಅವರ ಶಬ್ದಗಳ ಬಳಕೆಯ ಚಾತುರ್ಯ, ವಿಚಾರಗಳ ವೈವಿಧ್ಯ ವ್ಯಕ್ತವಾಗುತ್ತದೆ. ಓದುಗರು ಅದನ್ನು ತಿಳಿಯುವುದೆಂದು ಬಗೆದು ಇಲ್ಲಿ ಸಂಕ್ಷಿಪ್ತವಾಗಿ ಕೊಡಲಾಗಿದೆ.

ಸುಭದ್ರ =ಸು+ಭದ್ರ ಅಂದರೆ ಚೆನ್ನಾಗಿ ಭದ್ರವಾದ ಸ್ಥಳ. ಅಧ್ಯಾತ್ಮ ದೃಷ್ಟಿಯಿಂದ ಇದು ಮುಕ್ತಿ. ಅದಕ್ಕೆ ಯಾರ ಭಯವೂ ಇಲ್ಲ. ಮತ್ತು ಆನಂದದಾಯಕವೂ ಅಹುದು.

ಆ ಸುಭದ್ರ ಸ್ಥಳ 'ನರ' (ಅರ್ಜುನನಿಗೆ) ಕೊಡಬೇಕಾಗಿದೆ. ಅರ್ಜುನನ ಮತ್ತೊಂದು ಹೆಸರು ನರ. ಇದು ಸರ್ವ ವಿಧಿತ. ಇದನ್ನು ಬಲರಾಮನು ದುರ್ಯೋಧನನಿಗೆ ಕೊಡಲು ಇಚ್ಛಿಸಿದನು. ಅದು ನೆರವೇರಲಿಲ್ಲ. ಏಕೆಂದರೆ ಬಲರಾಮನಿಗೆ ಅದನ್ನು ಕೊಡುವ ಶಕ್ತಿಯಿಲ್ಲ. ಅಲ್ಲದೇ ಅದು ದುರ್ಯೋಧನನಂಥ ವ್ಯಕ್ತಿಗೆ ಸಲ್ಲುವ ವಸ್ತುವಲ್ಲ. ಬಲರಾಮನ ಸಂಕಲ್ಪ ಸತ್ಯ ಸಂಕಲ್ಪವಲ್ಲ.

ಶ್ರೀಕೃಷ್ಣನು ನರನಿಗೆ ಕೊಡಲು ಸಂಕಲ್ಪಿಸಿದನು. ಅವನ ಸಂಕಲ್ಪ ಸತ್ಯ ಸಂಕಲ್ಪ ಜೊತೆಯಲ್ಲಿ ಅವನು ಅದನ್ನು ಕೊಡಲು ಸಮರ್ಥನೂ ಕೂಡ. ಆದರೂ ಅವನು ಕೂಡ ಬಂಧುವೆಂದು, ಸಖನೆಂದು, ಪ್ರಿಯನೆಂದು ಹಾಗೆಯೇ ಕೊಟ್ಟಿಲ್ಲ.

ಮೊದಲು ತೀರ್ಥಯಾತ್ರೆಗೆ ಅಟ್ಟಿದ್ದಾನೆ. ಅದು ಸಾಧನೆಗೆ ಒಳ್ಳೆಯ ಮಾರ್ಗ. ಅದರಿಂದ ಸಜ್ಜನರ ಸಹವಾಸ, ಭಕ್ತರ ದರ್ಶನ, ಅಹಂಕಾರ ಮಮಕಾರಗಳ ನಾಶ, ವೈರಾಗ್ಯ ಭಾವನೆ ಹುಟ್ಟಲು ಕಾರಣ, ಎಲ್ಲಕ್ಕೂ ಮಿಗಿಲಾಗಿ ಭಗವಂತನ ಮಹಿಮೆ ಮತ್ತು ಲೀಲೆಗಳ ಜ್ಞಾನ. ಇವೆಲ್ಲವು ಲಭಿಸುವುದುಂಟು. ಜೊತೆಯಲ್ಲಿ ವ್ರತಗಳ ಪಾಲನೆ.

ಶ್ರೀಕೃಷ್ಣನು ಅವನನ್ನು (ನರನನ್ನು) ಅಷ್ಟಕ್ಕೆ ಬಿಟ್ಟಿಲ್ಲ. ಸನ್ಯಾಸಿಯನ್ನಾಗಿ ಮಾಡಿದ್ದಾನೆ. ಅಂದರೆ ಸಂಸಾರದ ಬಂಧನದಿಂದ ಬಿಡಿಸಿ, ವಿರಕ್ತನನ್ನಾಗಿ ಮಾಡಿದ್ದಾನೆ. ಸಂಗ್ರಹಿಸಿದ ಅನುಭವವನ್ನು ಅನುಷ್ಠಾನಕ್ಕೆ ತರಲು ಚಾತುರ್ಮಾಸದಂತಹ ನಾಲ್ಕು ತಿಂಗಳು ಪವಿತ್ರ ಸಮಯವನ್ನು ಕೊಟ್ಟಿದ್ದಾನೆ. ಇವೆಲ್ಲವುಗಳಲ್ಲಿ ಜಯವಾಗಿ ಯಶಸ್ವಿಯಾದ ಬಳಿಕ ಶ್ರೀಕೃಷ್ಣನು ಸಂತುಷ್ಟನಾಗಿ ಪ್ರಸಾದವಿತ್ತು, ಮುಕ್ತಿಯನ್ನು ದಯಪಾಲಿಸಿದ್ದಾನೆ. ಅರ್ಜುನನಂಥ ಜ್ಞಾನಿಗೆ ಇಷ್ಟುದಿನ, ಇಷ್ಟು ರೀತಿ ಕಷ್ಟ ಪಡಬೇಕಾಯಿತು. ಅಂದಮೇಲೆ ನಮ್ಮ ಪಾಡೇನು?

**ಸಾರಾಂಶ** : ನಾವೆಲ್ಲರು ನರರೇ. ಅನೇಕ ದಿನಗಳ ವರೆಗೆ ಸಜ್ಜನರ ಸಂಗ ದಲ್ಲಿದ್ದು, ಭಗವಂತನ ಮಹಿಮೆಯನ್ನರಿತು, ಶ್ರವಣ, ಧ್ಯಾನ, ಮನನಗಳಿಂದ ಸಾಧಿಸಿ, ಅನೇಕ ಸಾಧನೆಗಳ ನಂತರ ನಾವು ಸಂಸಾರದ ಬಂಧನವನ್ನು ಕಳಚಬಹುದು. ಅಂದರೆ ನರನು ಜಯನಾಗುತ್ತಾನೆ. ಜಯ ಅರ್ಜುನನ ಹೆಸರು. ಆಗ ಶ್ರೀಕೃಷ್ಣನು ಸಂತುಷ್ಟನಾದರೆ, ಸು+ಭದ್ರ ವಾದ ಸ್ಥಾನ ತಪ್ಪದೇ ದೊರೆಯುತ್ತದೆ. ಆಗವನು ವಿಜಯನಾದನು.

ಮೊದಲು ನರ, ಸಾಧನೆಗಳಿಂದ ಜಯ, ಭಗವತ್ಪ್ರೀತಿ ಸಂಪಾದಿಸಿದ ನಂತರ ವಿಜಯ. ಭಗವಂತನ ಕೃಪೆಯಿಂದ ಎಲ್ಲರು 'ವಿಜಯ' ರಾಗಲು ಪ್ರಯತ್ನಿಸೋಣ. (ಅಧ್ಯಾತ್ಮ ಸಂಜೀವಿನಿ ಆಧಾರದಿಂದ)

**ಸರ್ವಾಯುಧೈರ್ಯುಕ್ತರಥೇ ಸಮಾಸ್ಥಿತೇ**
**ಗೃಹೀತ ಚಾಪೇ ಫಲ್ಗುನೇ ದ್ವಾರವತ್ಯಾಂ**
**ಆಸೀದ್ರಾಮಃ ಕಿಂ ಕಿಮೇತ ತ್ರಿದಂಡೀ**
**ಕನ್ಯಾಂ ಹರತ್ಯೇಕ್ಷ ಕೋದಂಡಪಾಣಿಃ** ||೧೮೮||

ಎಲ್ಲ ಆಯುಧಗಳಿಂದ ಸುಸಜ್ಜಿತವಾದ ರಥದಲ್ಲಿ ಶ್ರೇಷ್ಠ ಬಾಣಗಳನ್ನು ಧರಿಸಿ ನಿಂತ ಅರ್ಜುನನನ್ನು ಕಂಡು ಎಲ್ಲರು, ಇದೇನು? ಎಂದು, ಕೆಲವರು ಆಶ್ಚರ್ಯಪಟ್ಟರು. ತ್ರಿದಂಡಿಯಾದ ಸನ್ಯಾಸಿ ಕನ್ಯೆಯನ್ನು ಹೇಗೆ ಅಪಹರಿಸಿದ? ಎಂದು ದ್ವಾರಾವತಿಯಲ್ಲಿ ಗಲಭೆಯಾಯಿತು.

**ತತಸ್ತು ತಂ ಸತನುತ್ರಂ ಮಹೇಂದ್ರ–**
**ದತ್ತೇ ದಿವ್ಯೇ ಕುಂಡಲೇ ವಾಸಸೀ ಚ**
**ದಿವ್ಯಾನಿ ರತ್ನಾನಿ ವಿಭೂಷಣಾನಿ**
**ದೃಷ್ಟ್ವಾ ಬಿಭ್ರಾಣಂ ರಕ್ಷಿಣೋಽವಾರಯನ್ ಸ್ಮ** ॥೧೮೯॥

ಅಲ್ಲಿ ಅರ್ಜುನನು ದೇವೇಂದ್ರನಿತ್ತ ಶ್ರೇಷ್ಠವಾದ ಕವಚ ಕುಂಡಲಗಳನ್ನು ಧರಿಸಿದ್ದನು. ಅನೇಕ ಆಭರಣಗಳಿಂದ ವಿಭೂಷಿತನಾಗಿದ್ದನು. ರಥದಲ್ಲಿ ಸನ್ನದ್ಧನಾಗಿದ್ದನು. ಇಂಥವನನ್ನು ಜನರು ತಡೆಯಲು ಪ್ರಯತ್ನಿಸಿದರು.

**ತತಃ ಸ ಆಬದ್ಧ ತಲಾಂಗುಲಿತ್ರಃ**
**ಸತೂಣೀರಶ್ಚಾಪ ಮಾಯಮ್ಯ ಬಾಣೈಃ**
**ಚಕ್ರೇಽಂತರಿಕ್ಷಂ ಪ್ರದಿಶೋ ದಿಶಶ್ಚ**
**ನಿರಂತರಂ ಶಿಕ್ಷಯಾ ವಿದ್ಯಯಾ ಚ** ॥೧೯೦॥

ಆಗ ಅರ್ಜುನನನ್ನು ತನ್ನ ಕೌಶಲ ಮತ್ತು ಚಾತುರ್ಯದಿಂದ, ಕರಗಳಲ್ಲಿ ಬಿಲ್ಲು ಬಾಣಗಳನ್ನು ಧರಿಸಿ, ಅಭ್ಯಾಸ ಮತ್ತು ವಿದ್ಯಾ ಬಲದಿಂದ ಅಂತರಿಕ್ಷ ಮೊದಲ್ಗೊಂಡು ನಾಲ್ಕು ದಿಕ್ಕುಗಳಲ್ಲಿ ಬಾಣಗಳಿಂದ ತುಂಬಿಬಿಟ್ಟನು.

**ಚಕ್ರೇ ಸಾರಥ್ಯಂ ಕೇಶವೇನೈತದರ್ಥಂ**
**ಸುಶಿಕ್ಷಿತಾ ತಸ್ಯ ಸಮ್ಯಕ್ ಸುಭದ್ರಾ**
**ತಯಾ ಪಾರ್ಥೋ ವಾರಿತೋ ನೈವಕಿಂಚಿತ್**
**ಭಿನ್ನತ್ವ ಚಂ ಕೃತವಾನ್ ಕ್ರೀಡಮಾನಃ** ॥೧೯೦॥

ಶ್ರೀಕೃಷ್ಣನಿಂದ ಇದೇ ಉದ್ದೇಶಕ್ಕಾಗಿ ಸುಭದ್ರೆಗೆ, ಚೆನ್ನಾಗಿ ಸಾರಥ್ಯವನ್ನು ಕಲಿಸಲಾಗಿತ್ತು. ಅದನ್ನು ಚೆನ್ನಾಗಿ ಅಳವಡಿಸಿಕೊಂಡ ಸುಭದ್ರೆ ಎಲ್ಲರನ್ನು ಆಯಾಸವಿಲ್ಲದೆ ತಡೆಯುತ್ತಿದ್ದಳು. ಅದರಿಂದಾಗಿ ಅರ್ಜುನನು ಯಾರಿಗೂ ಗಾಯಗೊಳಿಸದೆ, ಅದನ್ನು ಕ್ರೀಡಾಂಗಣದಂತೆ ಮಾಡಿದನು.

**ಸುಶಿಕ್ಷಯಾ ತ್ವದ್ಭುತಯಾ ಶರೌಘೈಃ**
**ವಿದ್ರಾವ್ಯ ತಾನ್ ಭೀಷಯಿತ್ವೈವ ಸರ್ವಾನ್ ।**
**ನಿರ್ಗತ್ಯ ಪುರ್ಯಾ ವಿಪೃಥುಂ ದದರ್ಶ**
**ರಾಮೇಣ ಪುರ್ಯಾರಕ್ಷಣೇ ಸನ್ನಿಯುಕ್ತಮ್** ॥೧೯೨॥

ಒಳ್ಳೆಯ ಅಭ್ಯಾಸದಿಂದ ಬಾಣಗಳನ್ನು ಪ್ರಯೋಗಿಸಿ, ಎಲ್ಲರನ್ನು ಹೆದರಿಸಿ, ಓಡಿಸಿ, ಅರ್ಜುನನು ದ್ವಾರಾವತಿಯ ಪಟ್ಟಣದ ಹೊರಗಡೆ ಬಂದನು. ಅಲ್ಲಿ 'ವಿಪೃಥು' ಎಂಬವನನ್ನು ಕಂಡನು. ಅವನು ನಗರ ರಕ್ಷಣೆಗಾಗಿ ಬಲರಾಮನಿಂದ ನಿಯುಕ್ತನಾಗಿದ್ದನು.

**ಪ್ರಿಯಂ ಕುರ್ವನ್ನಿವರಾಮಸ್ಯ ಸೋಽಪಿ**
**ವ್ಯಾಜೇನ ಪಾರ್ಥಂ ಸೇನಯೈವಾವೃಣೋತ್ತಂ**
**ಕೃಷ್ಣಾ ದೇಶಾನ್ನೈವ ಪಾರ್ಥಸ್ಯ ಚಕ್ರೇ**
**ಸಮ್ಯ ಗ್ರೋಥಂ ಯುಯುಧೇ ಚಾಪ್ಪಲೇನ** ॥೧೯೩॥

ಆ 'ವಿಪೃಥು' ಬಲರಾಮನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಅರ್ಜುನನ್ನು ತಡೆದನು. ಶ್ರೀಕೃಷ್ಣನ ಆಜ್ಞೆ ಇದ್ದುದರಿಂದ ಅರ್ಜುನನೊಡನೆ ಛಲದಿಂದ ಹೋರಾಡಲಿಲ್ಲ. ಕೇವಲ ಸೈನ್ಯದಿಂದ ಸುತ್ತುವರಿದನು.

**ಈ ವಿಪೃಥು ಯಾರು?**

**ಏಕೋ ಹ್ಯಸೌ ಮರುತಾಂ ಸೌಮ್ಯ ನಾಮಾ**
**ಶುಶ್ರೂಷಾರ್ಥಂ ವಾಸುದೇವಸ್ಯ ಜಾತಃ**
**ತಂ ಯಾದವಂ ಶರವರ್ಷೈರ್ವವರ್ಷ**
**ಯಥಾಕ್ಷತಂ ನ ಭವೇತ್ ಸವ್ಯಸಾಚೀ** ॥೧೯೪॥

ಈ ವಿಪೃಥು ಮರುತಗಣಗಳಲ್ಲಿ ಒಬ್ಬಾತ. ಈತನ ಹೆಸರು ಸೌಮ್ಯನೆಂದೇ ಇದ್ದಿತು. ಶ್ರೀಕೃಷ್ಣನ ಸೇವೆಗಾಗಿಯೇ ಇಲ್ಲಿ ಹುಟ್ಟಿದ್ದ. ಅಂಥ ವಿಪೃಥುವನ್ನು ಸವ್ಯಸಾಚಿ ಯಾದ ಅರ್ಜುನನು ಚಮತ್ಕಾರದಿಂದ ಬಾಣಗಳನ್ನು ಪ್ರಯೋಗಿಸಿ ಬಂಧನದಲ್ಲಿ ಮಾಡಿದ್ದ. ಅವನಿಗೆ ಯಾವ ರೀತಿಯ ಗಾಯವಾಗಲಿ, ನೋವಾಗಲಿ ಆಗಿರಲಿಲ್ಲ.

**ನಿರಾಯುಧಂ ವಿರಥಂ ಚೈವ ಚಕ್ರೇ**
**ಪಾರ್ಥಃ ಸೇನಾಂ ತಸ್ಯ ನೈವಾಹನ ಚ್ಚ**
**ದೃಷ್ಟ್ವಾ ಶರಾಂಸ್ತಸ್ಯ ತೀಕ್ಷ್ಣಾ ಸ್ತ್ವಚೋಽಪಿ**
**ನಚ್ಛೇದ ಕಾನ್ ವಿಪೃಥುಸ್ತಂ ತುತೋಷ** ॥೧೯೫॥

ಅರ್ಜುನನು ವಿಪೃಥುವಿನ ಆಯುಧಗಳನ್ನು ಕತ್ತರಿಸಿ ಹಾಕಿದನು. ರಥವನ್ನೂ ಇಲ್ಲದಂತೆ ಮಾಡಿದನು. ಆದರೆ ಅವನ ಸೈನ್ಯವನ್ನು ಸಂಹರಿಸಲಿಲ್ಲ. (ವಿಪೃಥುವಾದರೂ) ತೀಕ್ಷ್ಣವಾದ ಬಾಣಗಳಿದ್ದರೂ ಗಾಯವನ್ನು ಮಾಡುತ್ತಿರಲಿಲ್ಲ. ಶಸ್ತ್ರಗಳನ್ನು ಧರಿಸಿ ಅರ್ಜುನನು ನಿಂತಿದ್ದನ್ನು ಕಂಡು ಇದನ್ನು ಕಂಡು ವಿಪೃಥನು ಸಂತೋಷಗೊಂಡನು.

**ಶಿಕ್ಷಾಂ ಪಾರ್ಥಸ್ಯಾಧಿ ಕಾಂ ಮಾನಯಾನ**
**ಉಪೇತ್ಯ ಪಾರ್ಥಂ ಚ ಶಶಂಸ ಸರ್ವಾಂ**
**ಆಜ್ಞಾಂ ವಿಷ್ಣೋಃ ಸನ್ನಿಯುದ್ಧನ್ನಿವಾಸ್ಮೈ**
**ಕೃತ್ತಾಯುಧಃ ಫಲ್ಗುನೇನೈವ ಪೂರ್ವಮ್** ॥೧೯೬॥

ಆ ವಿಪೃಥು, ಪಾರ್ಥನ ಬಾಣಗಳನ್ನು ಬಿಡುವ ಕೈಚಳಕ, ಮತ್ತು ಆತನ ಕಲಿತ ವಿದ್ಯೆಯನ್ನು ಕಂಡು ಮನದಲ್ಲಿ ಮೆಚ್ಚಿದನು. ಶ್ರೀಕೃಷ್ಣನ ಆಜ್ಞೆಯನ್ನು ಅರ್ಜುನನಿಗೆ ಸನ್ನೆಯಿಂದಲೇ ತಿಳಿಸಿದನು.

ಏನಾಜ್ಞೆ? ನನ್ನ ರಥವನ್ನು ಆರೂಢನಾದ ಅರ್ಜುನನಿಂದಲೇ ನಿನ್ನ ಬಾಣಗಳು ಕತ್ತರಿಸುತ್ತವೆ. ರಥವೂ ಹೋಗುತ್ತದೆ" ಆ ರಥವು ಅವನಿಗೆ ಇರಲಿ. ಅವನನ್ನು ತಡೆಯಬೇಡ. ಯುದ್ಧವೂ ಮಾಡಬೇಡ ಎಂದು ಮೊದಲೇ ಹೇಳಿದ್ದನು.

**ತತಃ ಪರಾಜಿತ ವಚ್ಛೀಘ್ರ ಮೇತ್ಯ**
**ಶಶಂಸ ಸರ್ವಂ ಹಲಿನೇಽಥ ಸೋಽಪಿ**
**ಪ್ರದ್ಯುಮ್ನ ಸಾಂಬಾದಿಯುತೋಽಥ ಕೋಪಾ**
**ದಾಯಾತ್ ಪುರೀಂ ಹಂತು ಕಾಮೋಽರ್ಜುನಂ ॥೧೯೭॥**

ಅರ್ಜುನನಿಂದ ಸೋತಂತೆ ನಟಿಸಿ, ಆ ವಿಪೃಥು ಶೀಘ್ರದಲ್ಲಿ ಬಲರಾಮನ ಹತ್ತಿರ ಬಂದು ಸಕಲ ಸಮಾಚಾರವನ್ನು ಹೇಳಿದನು. ಆ ಬಲರಾಮನು ಕೋಪಾವಿಷ್ಟನಾಗಿ, ಪ್ರದ್ಯುಮ್ನ ಮತ್ತು ಸಾಂಬರನ್ನು ಕೂಡಿಕೊಂಡು, ಆ ಅರ್ಜುನನನ್ನು ಹತ ಮಾಡುವ ಉದ್ದೇಶದಿಂದ ನಗರಕ್ಕೆ ಬಂದನು.

**ಕೃಷ್ಣೋಽಪಿ ಸರ್ವಂ ವಿಪೃಥೋರ್ನಿಶಮ್ಯ**
**ಪ್ರಾಪ್ತಃ ಸುಧರ್ಮಾಂ ವಿಮನಾ ಇವಾಸೀತ್**
**ಆ ವಾಙ್ಮುಖಸ್ತತ್ರ ಯದುಪ್ರವೀರಾಃ**
**ಪ್ರದ್ಯುಮ್ನಾ ದ್ಯಾ ಅಹುರುಚ್ಚೈ ರ್ನದಂತಃ ॥೧೯೮॥**

ಶ್ರೀಕೃಷ್ಣನು ವಿಪೃಥುವಿನಿಂದ ಎಲ್ಲವನ್ನು ತಿಳಿದವನಾಗಿ, ಅಲ್ಲಿಗೆ ಬಂದು ಸುಧರ್ಮ ಎಂಬ ಸಭೆಯನ್ನು ಪ್ರವೇಶಿಸಿ ಸೈನ್ಯದಂತೆ ಕುಳಿತಿದ್ದಾನೆ. ಅಲ್ಲಿ ಎಲ್ಲ ಯಾದವರು ಮುಖ ತಗ್ಗಿಸಿ ಕುಳಿತಿದ್ದರು. ಪ್ರದ್ಯುಮ್ನ ಮೊದಲಾದವರು ಗಟ್ಟಿಯಾಗಿ ಈ ರೀತಿ ಚೀರಾಡಿದರು.

**ಮಾಯಾವ್ರತಂ ತಂ ವಿನಿಹತ್ಯ ಶೀಘ್ರಂ**
**ವಯಂ ಸುಭದ್ರಾ ಮಾನಯಾಮಃ ಕ್ಷಣೇನ**
**ಇತ್ಯುಕ್ತ ವಾಕ್ಯಾನವದದ್ಬಲಸ್ತಾನ್**
**ಕೃಷ್ಣಾಜ್ಞಯಾ ಯಾಂತು ನ ಸ್ವೇಚ್ಛಯೈವ ॥೧೯೯॥**

ಆ ಮಾಯಾವ್ರತಧಾರಿಯಾದ ಅರ್ಜುನನನ್ನು ಕೊಂದು, ಸುಭದ್ರೆಯನ್ನು ಕ್ಷಣಾರ್ಧದಲ್ಲಿ ನಾವು ತರುವೆವು ಎಂದು ಕೂಗಾಡುತ್ತಿರುವ ಆ ಯಾದವರಿಗೆ, ಕೃಷ್ಣನ ಅಪ್ಪಣೆಯನ್ನು ಪಡೆದು ಹೋಗಿರಿ, ಸ್ವೇಚ್ಛೆಯಿಂದ ಹೋಗಬೇಡಿರಿ ಎಂದು ಬಲರಾಮನು ಹೇಳಿದನು.

**ಜ್ಞಾತವ್ಯ ಮೇತಸ್ಯ ಮತಂ ಪುರಸ್ತಾತ್**
**ಹರೇರ್ವಿರೋಧೇ ನಜಯೋ ಭವೇದ್ಯಃ**
**ಇತ್ಯುಕ್ತ ವಾಕ್ಯೇ ಹಲಿನಿ ಸ್ಮ ಸರ್ವೇ**
**ಪಪ್ರಚ್ಛುರಾನಮ್ಯ ಜನಾರ್ದನಂ ತಮ್ ॥೨೦೦॥**

ಮೊದಲು ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದುಕೊಳ್ಳಿರಿ. ಆತನ ಇಚ್ಛೆಗೆ ವಿರುದ್ಧವಾಗಿ ನಡೆದರೆ ನಮಗೆ ಜಯ ಆಗಲಾರದು ಎಂದು ಬಲರಾಮನು ಹೇಳಿದ ಮೇಲೆ, ಅಸುರನನ್ನು ಮರ್ದಿಸತಕ್ಕ ಶ್ರೀಕೃಷ್ಣನನ್ನು ನಮಸ್ಕರಿಸಿ ಕೇಳಿದರು.

**ಅಥಾಬ್ರವೀದ್ವಾಸುದೇವೋಽಮಿತೌ ಜಾಃ**
**ಶೃಣ್ವಂತು ಸರ್ವೇ ವಚನಂ ಮದೀಯಂ**
**ಪುರೈವೋಕ್ತಂ ತನ್ಮಯಾ ಕನ್ಯಕಾಯ**
**ಮಾಯಾವ್ರತೋಽಸೌ ನಾರ್ಹತಿ ಸನ್ನಿಧಿ ಸ್ಥಿತಿಂ** ॥೨೦೧॥

ಅಪರಿಮಿತ ಶಕ್ತಿಯುಳ್ಳ ವಾಸುದೇವನು ನೀವೆಲ್ಲರು ನನ್ನ ಮಾತನ್ನು ಕೇಳಿರಿ, "ಮಾಯಾವ್ರತವುಳ್ಳ ಈತನು ಕನ್ಯಾಗಾರದಲ್ಲಿ ಇರಲು ಅರ್ಹನಲ್ಲ" ಎಂದು ನಾನು ಮೊದಲೇ ಹೇಳಿದ್ದೇನೆ.

**ತಾಂ ಮೇ ವಾಚಂ ನಾಗ್ರಹೀ ದಗ್ರಜೋಽಯಂ**
**ಬಹೂನ್ ದೋಷಾನ್ ವ್ಯಾಹರತೋಽಪ್ಯತೋ ಮಯಾ**
**ಅನುಲ್ಲಂಘ್ಯ ತ್ವಾ ದಗ್ರಜೋಽನುಪ್ರವೃತ್ತಃ**
**ಕನ್ಯಾಗೃಹೇ ವಾಸನೇ ಕೋಟಿ ಬುದ್ಧೇಃ** ॥೨೦೨॥

ಅಣ್ಣನಾದ ಬಲರಾಮನು ನನ್ನ ಮಾತನ್ನು ಒಪ್ಪಲಿಲ್ಲ. ನನ್ನ ಮೇಲೆಯೇ ಅನೇಕ ದೋಷಗಳನ್ನು ಹೊರಿಸಿದನು. ಅಗ್ರಜನ ಮಾತನ್ನು ಉಲ್ಲಂಘಿಸಬಾರದೆಂದು ನಾನು ಆತನ ಮಾತಿಗೆ ಒಪ್ಪಿದ್ದೇನೆ. ಅದರಿಂದ ಕನ್ಯಾಗೃಹದಲ್ಲಿ ಆತನಿಗೆ ಇರಲು ಆಸ್ಪದವಾಯಿತು.

**ಅತೀತಶ್ಚಾಯಂ ಕಾರ್ಯಯೋಗೋಽಸಮಕ್ಷಂ**
**ಹೃತಾ ಕನ್ಯಾ ನೋಽತ್ರ ಕಾ ಮಾನಹಾನಿಃ**
**ಭೂಯಸ್ತ್ವದಾಂ ಮಾನಿನಸ್ತಸ್ಯ ಸಾ ಸ್ಯಾತ್**
**ಜ್ಞಾತಾ ಚವೋ ವಿಪೃಥೋಃ ಪಾರ್ಥತಾಸ್ಯ** ॥೨೦೩॥

ಈಗ ಕಾರ್ಯವು ಮುಗಿದುಹೋಗಿ ಬಿಟ್ಟಿದೆ. ನಾವಿಲ್ಲದಾಗ ಕನ್ಯೆಯ ಅಪಹರಣವಾಗಿದೆ. ಅದರಿಂದ ತಮಗೇನು ಅಪಮಾನ ಆದಂತಾಯಿತು. 'ನಾನು ವೀರ' ಎಂಬ ಅಹಂಕಾರವುಳ್ಳ ಅವನಿಗೆ ಆ ಅಪಮಾನ. ಅವನೇ ಅರ್ಜುನನೆಂದು ವಿಪೃಥುವಿನಿಂದ ಎಲ್ಲರಿಗೂ ತಿಳಿದಿದೆ.

**ದೇಯಾಚ ಕನ್ಯಾನಾಸ್ತಿ ಪಾರ್ಥೇನ ತುಲ್ಯೋ**
**ವರೋಽಸ್ಮಾಕಂ ಕೌರವೇಯಶ್ಚ ಪಾರ್ಥಃ**
**ಪೌತ್ರಶ್ಚ ಕೃಷ್ಣಸ್ಯ ಸುಪೂರ್ಣ ಶಕ್ತೇಃ**
**ಪೈತೃಷ್ವಸೇಯೋ ವೀರತಮೋ ಗುಣಾಢ್ಯಃ** ॥೨೦೪॥

ಕನ್ಯೆಯು ಯಾರಿಗಾದರೂ ಕೊಡತಕ್ಕದ್ದೇ. ಅರ್ಜುನನಿಗೆ ಸಮಾನನಾದ ವರನು ಬೇರೊಬ್ಬನಿಲ್ಲ. ಅವನು ಕುರುವಂಶದಲ್ಲಿ ಹುಟ್ಟಿದ್ದಾನೆ. ಸರ್ವ ಸಮರ್ಥರಾದ ವ್ಯಾಸ

ಮಹರ್ಷಿಗಳಿಗೆ ಮೊಮ್ಮಗನು, ಅಲ್ಲದೇ ಸೋದರತ್ತೆಯ ಮಗನು. ವೀರನು ಮತ್ತು ಗುಣಸಂಪನ್ನನಿದ್ದಾನೆ.

ಅರ್ಥೋಽಸ್ಮಾಭಿಃ ಸ್ವಯಮೇವಾಹರತ್ಸ
ಶಕ್ರಾತ್ಮಜೋ ನಾತ್ರ ನಃ ಕಾರ್ಯಹಾನಿಃ
ಅನುದ್ರುತ್ಯೈನಂ ಯದಿ ವಃ ಸ್ಯಾತ್ ಪರಾಜಯೋ
ಹಾನಿರ್ಧ್ರುವಂ ಯಶಸೋ ವೋ ಭವೇತ ॥೨೦೫॥

ನಾವೇ ಅವನನ್ನು ಪ್ರಾರ್ಥಿಸಬೇಕಾಗಿತ್ತು. ತಾನಾಗಿಯೇ ಅಪಹರಿಸಿದ್ದಾನೆ. ಇಂದ್ರನ ಮಗನಾಗಿದ್ದಾನೆ. ಈ ಕನ್ಯಾಹರಣದಿಂದ ನಮಗೇನು ಹಾನಿಯಿಲ್ಲ. ಒಂದು ವೇಳೆ ಅವನನ್ನು ಬೆನ್ನುಹತ್ತಿ ಯುದ್ಧಮಾಡಿ ಸೋತರೆ, ನಿಶ್ಚಯವಾಗಿ ನಮಗೇ ಅಪಕೀರ್ತಿಬರುವದು.

ಜಿತ್ವಾ ಚೈನಂ ಕನ್ಯಕಾ ಚಾಹೃತಾ ಚೇತ್
ಪರಾಮೃಷ್ಟಾಂ ನೈವ ಕಶ್ಚಿದ್ವಿಲಿಪ್ಸೇತ್
ಅತೋ ನ ಮೇರೋಚತೇ ವೋಽನುಯಾನ್
ಮಿತ್ಯುಕ್ತೈ ವಾಸಾಸ ತುಷ್ಣೀಂ ಪರೇಶಃ ॥೨೦೬॥

ಇದಕ್ಕೂ ಮೀರಿ ಕಷ್ಟದಿಂದ ಯುದ್ಧಮಾಡಿ ಅರ್ಜುನನನ್ನು ಗೆದ್ದು, ಬಲಾತ್ಕಾರದಿಂದ ಆ ಕನ್ಯೆಯನ್ನು ತಂದರೂ, ಇನ್ನೊಬ್ಬರಿಂದ ಸ್ಪರ್ಶಿಸಲ್ಪಟ್ಟ ಕನ್ಯೆಯನ್ನು ಯಾವನೊಬ್ಬನೂ ಮದುವೆಯಾಗಲು ಇಚ್ಛಿಸಲಿಕ್ಕಿಲ್ಲ. ಆದ್ದರಿಂದ ನೀವು ಆತನನ್ನು ಬೆನ್ನು ಹತ್ತುವುದು ನನಗೆ ಇಷ್ಟವಿಲ್ಲ ಎಂದು ಶ್ರೀಕೃಷ್ಣನು ನುಡಿದು ಸುಮ್ಮನಾದನು.

ಶ್ರುತ್ವಾ ಹಲೀ ಕೃಷ್ಣ ವಾಕ್ಯಂ ಬಭಾಷೇ
ಮಾ ಯಾತ್ ಚಿತ್ತಂ ವಿದಿತಂ ಮಯಾಸ್ಯ
ಅಸ್ಯಾನುವೃತ್ತಿ ರ್ವಿಜಯಾಯ ನಃ ಸ್ಯಾತ್
ಶುಭಾಯ ಶಾಂತ್ಯೈ ಪರತಶ್ಚ ಮುಕ್ತ್ಯೈ ॥೨೦೭॥

ಶ್ರೀಕೃಷ್ಣನ ಮಾತನ್ನು ಕೇಳಿದ ಬಲರಾಮನು, "ನನಗೆ ಕೃಷ್ಣನ ಅಭಿಪ್ರಾಯ ತಿಳಿಯಿತು. ನೀವು ಹೋಗಬೇಡಿರಿ. ಆತನ ಮಾತನ್ನು ಕೇಳುವುದರಲ್ಲಿಯೇ ನಮಗೆ ಜಯವಿದೆ, ಕೀರ್ತಿಯಿದೆ, ಶುಭ ಶಾಂತಿಯಿದೆ. ಪರದಲ್ಲಿ ಮುಕ್ತಿಗೆ ಸಾಧನವೂ ಇದೆ" ಎಂದು ಬಲರಾಮನು ನುಡಿದನು.

ತತೋಽರ್ಜುನೋ ಯತ್ರ ತಿಷ್ಠ(ಷ್ಠೇ)ನ್ನ ಕಶ್ಚಿತ್
ಪರಾಭವಂ ಯಾತಿ ಕೃಷ್ಣಾಜ್ಞಯೈವ
ರಥೇನ ತೇನೈವ ಯಯೌ ಸ ಭಾರ್ಯಃ
ಶಕ್ರಪ್ರಸ್ಥಂ ಚಾವಿಶದ್ಭ್ರಾತೃಗುಪ್ತಮ್ ॥೨೦೮॥

ಅರ್ಜುನನೆಲ್ಲಿರುತ್ತಾನೋ ಅವನಿಗೆ ಅಪಜಯವೆಂಬುದು ಇಲ್ಲವೇ ಇಲ್ಲ. ಏಕೆಂದರೆ ಆತನ ಹತ್ತಿರ ಕೃಷ್ಣ ಇರುತ್ತಾನೆ. ಈಗ ಕೃಷ್ಣನ ರಥವನ್ನೇ ಏರಿದ್ದಾನೆ.

ಅಂದಮೇಲೆ ಅವನಿಗೆ ಅಪಜಯವೆಲ್ಲಿ? ಅರ್ಜುನನು ಭಾರ್ಯೆಯಿಂದೊಡಗೂಡಿ, ಕೃಷ್ಣನ ರಥದಲ್ಲಿ ಇಂದ್ರಪ್ರಸ್ಥಕ್ಕೆ ಸಹೋದರರಿದ್ದಲ್ಲಿಗೆ ಬಂದನು.

**ಯತ್ರಯೋಗೀಶ್ವರ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ**
**ತತ್ರ ಶ್ರೀರ್ವಿಜಯೋಭೂತಿ ರ್ಧ್ರುವಾನೀತಿ ರ್ಮತಿರ್ಮಮ:**
**ಸಂಭಾವಿತೋ ಭ್ರಾತೃಭಿಶ್ಚಾತಿತುಷ್ಟೈ,**
**ರೋಚೇಽಥ ಸರ್ವಂ ತೇಷು ಯಚ್ಚಾತ್ರ ವೃತ್ತಂ**
**ಶಾಂತೇಷು ವಾಕ್ಯಾದಾತ್ಮನೋ ಯಾದವೇಷು**
**ಕೃಷ್ಣೋ ಯುಕ್ತೋ ಹಲಿನಾಗಾಚ್ಚ ಪಾರ್ಥಾನ್ ॥೨೦೯॥**

ಎಲ್ಲ ಸಹೋದರರು ಅರ್ಜುನನನ್ನು ಆದರಿಸಿ ಸ್ವಾಗತಿಸಿದರು. ಸಂತುಷ್ಟರಾದ ಸಹೋದರ ಮಧ್ಯದಲ್ಲಿ ಕುಳಿತು ಅರ್ಜುನನು ತನ್ನ ತೀರ್ಥಯಾತ್ರೆಯ ಸರ್ವ ವೃತ್ತಾಂತ ವನ್ನು ಹೇಳಿದನು. ಕೃಷ್ಣನ ಮಾತಿನಿಂದ ಯಾದವರೆಲ್ಲರೂ ಶಾಂತರಾದರು. ನಂತರ ಶ್ರೀಕೃಷ್ಣನು ಬಲರಾಮನನ್ನು ಕೂಡಿಕೊಂಡು ಪಾಂಡವರ ಹತ್ತಿರ ಬಂದನು.

**ಸಾರ್ಧಂ ಯಯೌ ಶಕಟೈ ರತ್ನ ಪೂರ್ಣೈ:**
**ಶಕ್ರಪ್ರಸ್ಥಂ ಪೂಜಿತಸ್ತತ್ರ ಪಾರ್ಥೈ:**
**ದದೌ ತೇಷಾಂ ತಾನಿ ರಾಮೇಣ ಯುಕ್ತ:**
**ತಥಾ ಕಷ್ಣಾಯೈ ಭೂಷಣಾನಿ ಸ್ವಸುಶ್ಚ ॥೨೧೦॥**

ಶ್ರೀಕೃಷ್ಣನು ಬರುವಾಗ ಮುತ್ತು ರತ್ನಗಳಿಂದ ತುಂಬಿದ ಭಂಡಿಗಳನ್ನೇ ತಂದಿದ್ದನು. ಪಾಂಡವರು ಶ್ರೀಕೃಷ್ಣ ಬಲರಾಮರನ್ನು ಸತ್ಕರಿಸಿದರು. ಬಲರಾಮನ ಯುಕ್ತನಾಗಿ, ತಂದಿದ್ದ ರತ್ನಗಳನ್ನು ಪಾಂಡವರಿಗೆ ಕೊಟ್ಟನು. ದ್ರೌಪದಿ ದೇವಿಯರಿಗೂ, ಸುಭದ್ರೆಗೂ ಆಭರಣಗಳನ್ನಿತ್ತರು.

**ಮಾಸಾನುಷಿತ್ವಾ ಕತಿಚಿ ದ್ರೌಹಿಣೇಯೋ**
**ಯಯೌ ಪುರೀಂ ಸ್ವಾಂ ಕೇಶವೋಽತ್ರಾವಸಚ್ಚ**
**ಬಹೂನ್ವರ್ಷಾನ್ ಪಾಂಡವೈ: ಪೂಜ್ಯಮಾನ:**
**ಪ್ರೀತಿಂ ತೇಷಾಮಾದಧಾನೋಽಧಿಕಾಂ ಸ್ವಾಮ್ ॥೨೧೧॥**

ಕೆಲವು ತಿಂಗಳು ಅಲ್ಲಿದ್ದು ಬಲರಾಮನು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಶ್ರೀಕೃಷ್ಣನು ಬಹು ವರ್ಷಗಳ ವರೆಗೆ ಪಾಂಡವರಿಂದ ಪೂಜಿತನಾಗಿ ಅಲ್ಲಿಯೇ ಉಳಿದನು. ಅವರಿಗೆ ಹೆಚ್ಚು ಅನುಗ್ರಹ ಮಾಡಬೇಕೆಂಬ ಉದ್ದೇಶವೇ ಅವನದಾಗಿತ್ತು.

**ಅಸನ್ ಕೃಷ್ಣಾಯಾಃ ಪಂಚಸುತಾಗುಣಾಢ್ಯ**
**ವಿಶ್ವದೇವಾಃ ಪಂಚ ಗಂಧರ್ವ ಮುಖ್ಯೈ:**
**ಅವಿಷ್ಟಾಸ್ತೇ ಚಿತ್ರರಥಾಭಿ ತಾಮ್ರ**
**ಕಿಶೋರ ಗೋಪಾಲ ಬಲ್ಯೈ ಕ್ರಮೇಣ ॥೨೧೨॥**

ಆ ದ್ರೌಪದಿದೇವಿಯರಿಗೆ ಗುಣಸಂಪನ್ನರಾದ ಐದುಜನ ಮಕ್ಕಳಾದರು. ಅವರು ಮೂಲದಲ್ಲಿ ವಿಶ್ವೇದೇವತೆಗಳು. ಅವರುಪಂಚಗಂಧರ್ವರಿಂದ ಅವಿಷ್ಟರಾದವರು. ಚಿತ್ರರಥ, ಅಭಿತಾಮ್ರ, ಅಶೋರ, ಗೋಪಾಲ ಹಾಗೂ ಬಲ. ಅವರೇ ಈಗ ಐದುಜನ ಮಕ್ಕಳು.

**ಪ್ರತಿವಿಂಧ್ಯಃ ಶ್ರುತಸೋಮಃ ಶ್ರುತಾಖ್ಯ ಕೀರ್ತಿಃ**
**ಶ್ರುತಾನೀ ಕ ಉತ ಶ್ರುತಕ್ರಿಯಃ**
**ಯುಧಿಷ್ಠಿರಾದ್ಯೈಃ ಕ್ರಮಶಃ ಪ್ರಜಾತಾಃ**
**ತೇಷಾಂ ದ್ವಯೋಃ ಶ್ಚಾವರಜೋಽಭಿಮನ್ಯುಃ** ॥೨೧೩॥

"ಪ್ರತಿವಿಂಧ್ಯ, ಶ್ರುತಸೋಮ, ಶ್ರುತಾಖ್ಯಕೀರ್ತಿ, ಶ್ರುತಾನೀಕ ಮತ್ತು ಶ್ರುತಕ್ರಿಯ" ಎಂಬ ಐದು ಜನ ಮಕ್ಕಳು ಯುಧಿಷ್ಠಿರಾದಿಗಳಿಂದ ಕ್ರಮವಾಗಿ ಹುಟ್ಟಿದರು. ಅವರಲ್ಲಿ ಇಬ್ಬರ ನಂತರ ಅಭಿಮನ್ಯು ಹುಟ್ಟಿದ್ದಾನೆ.

**ಚಂದ್ರಾಂಶಯುಕ್ತೋಽತಿತರಾಂ ಬುಧೋಽಸೌ**
**ಜಾತಃ ಸುಭದ್ರಾ ಜಠರೇಽರ್ಜುನೇನ**
**ಧರ್ಮೇಣ ಶಕ್ರಾಂಶಯುತೋಽಶ್ವಿ ನೋಶ್ಚ**
**ತಥೈವ ಕೃಷ್ಣಸ್ಯ ಚ ಸನ್ನಿಧಾನಯುಕ್** ॥೨೧೪॥

ಚಂದ್ರಾಂಶದಿಂದ ಕೂಡಿದ ಬುಧನೇ ಇಂದು ಸುಭದ್ರೆಯ ಹೊಟ್ಟೆಯಲ್ಲಿ ಅರ್ಜುನನಿಂದ ಹುಟ್ಟಿದ್ದಾನೆ. ಇವನು ಸಾಮಾನ್ಯನಲ್ಲ. ಯಮ, ವಾಯು, ಮತ್ತು ಇಂದ್ರರ ಅಂಶದಿಂದ ಕೂಡಿದವ. ಅಶ್ವಿನಿ ದೇವತೆಗಳ ಆವೇಶ ಉಂಟು. ಎಲ್ಲಕ್ಕೂ ಮಿಗಿಲಾಗಿ ಶ್ರೀಕೃಷ್ಣನ ಸನ್ನಿಧಾನವನ್ನೂ ಹೊಂದಿದ್ದಾನೆ.

**ಸರ್ವೇಽಪಿ ತೇ ವೀರ್ಯವಂತಃ ಸುರೂಪಾ**
**ಭಕ್ತಾ ವಿಷ್ಣೋಃ ಸರ್ವಶಾಸ್ತ್ರೇಷ್ವಭಿಜ್ಞಾಃ**
**ಮೋದಂ ಯಯುಃ ಪಾಂಡವಾಸ್ತೈಃ ಸುತೈಶ್ಚ**
**ವಿಶೇಷತಃ ಸಾತ್ವತೀ ನಂದನೇನ** ॥೨೧೫॥

ಈ ಅಭಿಮನ್ಯು ಎಲ್ಲ ಮಕ್ಕಳಲ್ಲೂ ಪರಾಕ್ರಮಿ, ಸುಂದರನಾಗಿದ್ದನು. ಜೊತೆಯಲ್ಲಿ ವಿಷ್ಣು ಭಕ್ತಿಯಲ್ಲಿ ಶ್ರೇಷ್ಠನು. ಸಕಲ ಶಾಸ್ತ್ರಗಳನ್ನು ಬಲ್ಲವನು ಆಗಿದ್ದನು. ಪಾಂಡವರೆಲ್ಲ ವಿಶೇಷವಾಗಿ ಈ ಮಗುವನ್ನು ನೋಡಿ ಆನಂದಿಸುತ್ತಿದ್ದರು.

**ತತ್ರ ಕದಾಚಿತ್ ಖಾಂಡವಂ ಕೃಷ್ಣಪಾರ್ಥೌ**
**ಚಿ ಕ್ರೀಡಿಷೋಃ ಸತ್ಯಭಾಮಾ ಸುಭದ್ರೇ**
**ಆದಾಯ ಯಾತೌ ಪರಿಚಾರಕೈಶ್ಚ**
**ರಥೇನ ಗಂಧರ್ವವರಾನುಗೀತೌ** ॥೨೧೬॥

ಒಂದುದಿನ ಶ್ರೀಕೃಷ್ಣ ಮತ್ತು ಅರ್ಜುನ, ಸತ್ಯಭಾಮೆ, ಸುಭದ್ರೆಯರ ಒಡಗೂಡಿ ವಿಹಾರಕ್ಕೆಂದು, ರಥದಲ್ಲಿ ಖಾಂಡವವನಕ್ಕೆ ಬಂದರು. ಜೊತೆಯಲ್ಲಿ ಗಾಯಕರಾದ ಗಂಧರ್ವರೂ ಇದ್ದರು.

**ಸ್ವೈರಂ ತಯೋಸ್ತತ್ರ ಚ ಕ್ರೀಡತೋಸ್ತ್ವ**
**ಸ್ತ್ರೀ ರತ್ನಾ ಭ್ಯಾಂ ಮಂದವಾತಾನು ಜುಷ್ಟೇ**
**ವನೇ ಪ್ರಸೂವ ಸ್ತಬಕೋರು ರಾಜಿತೇ**
**ಜಲೇಚ ತಿಗ್ಮದ್ಯುತಿ – ಕನ್ಯಕಾಯಾಃ** ||೨೧೭||

**ಭೂತ್ವಾ ವಿಪ್ರಸ್ತ್ವೌ ಯಯಾಚೇsನ್ನ ಮೇತ್ಯ**
**ಕೃಶಾನುರೂಚೇsನುಮತೇ ರಮೇಶಿತುಃ**
**ಪಾರ್ಥಃ ಕೀದೃಕ್ ತೇsನ್ನ ಮಿಷ್ಟಂ ವದೇತಿ**
**ಸ ಚಾವಾದೀ ದ್ವಹ್ನಿ ರಹಂ ವನಾರ್ಥೀ** ||೨೧೪||

ಆ ವನ ಪ್ರಶಾಂತ ಮತ್ತು ಸ್ವತಂತ್ರವಾಗಿತ್ತು. ಮಂದವಾದ ಗಾಳಿ ಸುಗಂಧದಿಂದ ಕೂಡಿತ್ತು. ಸೂರ್ಯ ಕಿರಣಗಳು ಬೆಳಕನ್ನು ಚೆಲ್ಲಿ ಸೌಂದರ್ಯವನ್ನು ಹೆಚ್ಚಿಸಿದ್ದವು. ಜೊತೆಯಲ್ಲಿ ಕನ್ಯಾರತ್ನಗಳಿದ್ದರು. ಪಕ್ಕದಲ್ಲಿ ನದಿಯೂ ಹರಿಯುತ್ತಿತ್ತು. ಕೃಷ್ಣಾರ್ಜುನರು ಮಡದಿಯರನ್ನು ಕರೆದುಕೊಂಡು ಕ್ರೀಡೆಗೆಂದು ಅಲ್ಲಿಗೆ ಹೋದರು.

ಅಷ್ಟರಲ್ಲಿ ಒಬ್ಬ ವಿಪ್ರನು ಅಲ್ಲಿಗೆ ಬಂದನು. ಅವನು ಬಹಳ ದಿನಗಳಿಂದ ಅನ್ನವಿಲ್ಲದೆ ಕೃಶನಾಗಿದ್ದನು. ಅವನು ಅನ್ನಕ್ಕಾಗಿ ಯಾಚಿಸಿದನು. ಆಗ ಅರ್ಜುನನು ಶ್ರೀಕೃಷ್ಣನ ಅನುಮತಿಯನ್ನು ಪಡೆದು, ಹೇ ವಿಪ್ರರೇ ನಿಮಗೆ ಯಾವ ಅನ್ನ ಇಷ್ಟವಿದೆ? ಎಂದು ಕೇಳಿದನು. ಆಗ ಆ ಬ್ರಾಹ್ಮಣನು ನಾನು ಅಗ್ನಿಯು. ನಾನು ಈ ವನವನ್ನೇ ಅಪೇಕ್ಷಿಸಿದ್ದೇನೆ' ಎಂದನು.

**ಪ್ರಯಾಜಾನ್ ದೇವಾನನು ಯಾಜಾಂಶ್ಚ ಶುಲ್ಕಂ**
**ಹವಿರ್ದಾನೇ ದೇವತಾ ನಾಮಯಾಚಿಷಂ**
**ಬಲಹ್ರಾಸಸ್ತವ ಭೂಯಾದಿತಿ ಸ್ಮ**
**ಶಪ್ತ್ವೈವ ತೇಶಾಂಶ್ಚ ದದುಃ ಪುರಾ ಮಮ** ||೨೧೯||

ನಾನು ನನ್ನಲ್ಲಿ ಹೋಮಿಸುವ – ಹವಿಸ್ಸುಗಳನ್ನು ನಿಮಗೆ ತಂದು ಕೊಡುತ್ತೇನೆ. ಆದಕ್ಕಾಗಿ, ಈ ಪ್ರಯಾಜ ಮತ್ತು ಅನುಯಾಜ ಎರಡು ಆಹುತಿಗಳನ್ನು ನನಗೆ ವೇತನ ರೂಪದಲ್ಲಿ ಕೊಡಿರಿ ಎಂದು ಕೇಳಿಕೊಂಡೆನು. ಆಗ ದೇವತೆಗಳು ಕುಪಿತರಾಗಿ, ನಿನ್ನ ಬಲವಿಶೇಷವು ಹ್ರಾಸವಾಗಲಿ ಎಂದು ಶಾಪವಿತ್ತು, ನಂತರ ಪುನಃ ಆಹುತಿಗಳನ್ನಿತ್ತರು.

ವಿ. ವಿ. : ಗಮನಿಸಬೇಕಾದ ಅಂಶಗಳು.

೧. ದೊಡ್ಡವರ ಸೇವೆಯನ್ನು ವೇತನಕ್ಕಾಗಿ ಮಾಡಬಾರದು. ಅಂದರೆ ಕಾಮ್ಯ ಕರ್ಮಯುಕ್ತವಲ್ಲ. ಆದಕ್ಕಾಗಿ ದೇವತೆಗಳಿಂದ ಶಾಪ ದೊರೆಯಿತು.

೨. ಆ ಶಾಪದಿಂದ ಅಗ್ನಿಯ ಶಕ್ತಿಯು ಕುಗ್ಗಿತು. ಬಿದ್ದ ಆಹುತಿಗಳನ್ನು ಜೀರ್ಣಿಸುವ ಶಕ್ತಿ ಉಳಿಯಲಿಲ್ಲ. ಅಜೀರ್ಣ ದೋಷ (ರೋಗ) ಪ್ರಾರಂಭವಾಯಿತು.

**ಪುನಃ ಪೂರ್ತಿಃ ಕೇನ ಮೇ ಸ್ಯಾದ್ಬಲಸ್ಯೇ**
**ತ್ಯಬ್ಜೋದ್ಭವಂ ಪೃಷ್ಟವಾನಸ್ಮಿ ನತ್ವಾ**
**ಯದಾ ವನಂ ಖಾಂಡವಂ ಹಿ ತ್ವಮತ್ಸಿ**
**ತದಾ ಬಲಂ ತೇ ಭವತೀತಿ ಸೋಽಬ್ರವೀತ್ ॥೨೨೦॥**

ನಾನು ನನ್ನ ಪೂರ್ಣ ಬಲ ಪ್ರಾಪ್ತಿಗಾಗಿ, ಕಮಲೋದ್ಭವನಾದ ಬ್ರಹ್ಮನನ್ನು ಕುರಿತು, ನಮಸ್ಕರಿಸಿ, ವಿನಯದಿಂದ ಪ್ರಾರ್ಥಿಸಿಕೊಂಡೆನು. “ನೀನು ಎಂದು ಖಾಂಡವ ವನವನ್ನು ತಿನ್ನುವಿಯೋ ಅಂದು ನಿನಗೆ ಪುನಃ ಪೂರ್ಣಬಲ ಉಂಟಾಗುತ್ತದೆ'' ಎಂದು ಹೇಳಿದ್ದಾನೆ.

ವಿ. ವಿ. : ಖಾಂಡವ ವನಕ್ಕೂ ವಿಪ್ರನ (ಅಗ್ನಿಯ) ರೋಗಕ್ಕೂ ಯಾವ ಸಂಬಂಧ? ಇದೆ. ಸಂಬಂಧವಿದೆ. ಆ ವನ ಕೇವಲ ಉದ್ಯಾನ ಆಗಿರಲಿಲ್ಲ. ಸೌಂದರ್ಯದ ತಾಣವಾಗಿರಲಿಲ್ಲ. ಅದರಲ್ಲಿ ಬಹು ಅಮೂಲ್ಯವಾದ, ರೋಗ ನಿವಾರಕಗಳಾದ ಗಿಡಮೂಲಿಕೆಗಳಿದ್ದವು. ಅವುಗಳ ಸೇವನೆಯಿಂದ ಅಗ್ನಿಯ ಶಕ್ತಿ ಹೆಚ್ಚಾಯಿತು. ಜಠರಾಗ್ನಿ ಬೆಳೆಯಿತು. ಅಜೀರ್ಣ ದೋಷ ನಾಶವಾಯಿತು.

ಇಲ್ಲಿ ನಾವು ಅರಣ್ಯದ ಮಹತ್ವವನ್ನು ಅರಿಯಬಹುದು. ಇಂದು ಅರಣ್ಯ ಸಂಪತ್ತು ಎಲ್ಲಿಗೆ ಬಂದಿದೆ? ಪರಿಣಾಮ ಏನಾಗಿದೆ. ಓದುಗರು ಊಹಿಸಬಹುದು.

**ಶಕ್ರಸ್ಯೇದಂ ಖಾಂಡವಂ ತೇನ ವಿಘ್ನಂ**
**ಕರೋತ್ಯಸೌ ತೇನ ವಾಂ ಪ್ರಾರ್ಥಯಾಮಿ**
**ಇತ್ಯುಕ್ತೇ ತಂ ಪಾರ್ಥ ಊಚೆ ಯದಿ ಸ್ಯಾತ್**
**ರಥೋ ಧನುಶ್ಚಾಥ ಶಕ್ರಂ ನಿರೋತ್ಸ್ಯೇ ॥೨೨೧॥**

“ಆ ಖಾಂಡವ ವನ ಈಗ ಇಂದ್ರನ ವಶದಲ್ಲಿದೆ. ಅದನ್ನು ತಿನ್ನಲು ಹೋದರೆ ವಿಘ್ನವನ್ನು ಒಡ್ಡುತ್ತಾನೆ. ತಡೆಯುತ್ತಾನೆ. ಅದಕ್ಕಾಗಿ ನಿಮ್ಮಿಬ್ಬರನ್ನು ಪ್ರಾರ್ಥಿಸಿದ್ದೇನೆ'' ಎಂದು ಬ್ರಾಹ್ಮಣನು ಹೇಳಿದಾಗ “ನನ್ನ ಬಾಣ ಮತ್ತು ರಥವಿದ್ದರೆ, ನಾನು ಇಂದ್ರನನ್ನು ವಿರೋಧಿಸುತ್ತಿದ್ದೆ'' ಎಂದು ಅರ್ಜುನನು ಉತ್ತರಿಸಿದನು.

**ನರಾವೇಶಾದನ್ನದಾನ ಪ್ರತಿ ಶ್ರವಾತ್**
**ಸ್ವಸ್ಯಾಪಿ ಶಕ್ರ ಸ್ಯಾ ವಿರೋಧ ಮೈಚ್ಛತ್**
**ಪಾರ್ಥಃ ಕೃಷ್ಣ ಪ್ರೇರಣಾ ಚ್ಚೈವ ವಹ್ನಿಃ**
**ಪಾರ್ಥಂ ಯಯಾಚೇ ಶಕ್ರವಿರೋಧ ಶಾಂತ್ಯೈ ॥೨೨೨॥**

ನರಾವೇಶವಿದ್ದ ಪ್ರಯುಕ್ತ, ಅನ್ನದಾನದ ಪ್ರತಿಜ್ಞೆ ಮಾಡಿದ ಪ್ರಯುಕ್ತ ಪಾರ್ಥನು 'ಇಂದ್ರನು ತನ್ನವನಾದರೂ' ಇಂದ್ರನನ್ನು ವಿರೋಧಿಸಲು ಸಿದ್ಧನಾದನು. ಶ್ರೀಕೃಷ್ಣನ ಪ್ರೇರಣೆಯಿಂದಲೇ, ಆ ವಹ್ನಿಯು ಇಂದ್ರನ ವಿರೋಧದ ಶಾಂತಿಗಾಗಿ ಪಾರ್ಥನಿಗೆ ಪ್ರಾರ್ಥಿಸಿದನು.

'ಸ್ವಸ್ಯಾಪಿ' ಎಂಬ ಪದದಿಂದ, ಇಂದ್ರ ಬೇರೆಯಲ್ಲ. ಅರ್ಜುನ ಬೇರೆಯಲ್ಲ ಎಂಬ ಮಾತು ಸ್ಪಷ್ಟವಾಗುತ್ತದೆ.

**ನ ಹಿ ಸ್ವದತ್ತಸ್ಯ ಪುನಃ ಸ ವೈರಂ**
**ಶಕ್ರಃ ಕುರ್ಯಾತ್ಸ್ವಯಮಿಂದ್ರೋ ಹಿ ಪಾರ್ಥಃ**
**ಸ ಪ್ರೇರಿತೋ ವಿಷ್ಣುನಾ ತಸ್ಯರೋಧಂ**
**ಪಾರ್ಥಃ ಕುರ್ಯಾದಿತಿ ಕೃಷ್ಣಂ ಯಯಾಚೇ** ॥೨೨೩॥

ಆ ಇಂದ್ರನೇ ಈ ಅರ್ಜುನನು. ತಾನೇ ಕೊಟ್ಟದ್ದಕ್ಕಾಗಿ ಇಂದ್ರನು ವಿರೋಧ ಮಾಡಲಿಕ್ಕಿಲ್ಲ. ವಿಷ್ಣುವಿನಿಂದ ಪ್ರೇರಿತನಾದರೆ, ಈ ಅರ್ಜುನನು ಇಂದ್ರನಿಗೆ ವಿರೋಧಿಸಲಿಕ್ಕಿಲ್ಲೆಂದು ಆ ವಿಪ್ರನು ಕೃಷ್ಣನನ್ನೂ ಪ್ರಾರ್ಥಿಸಿದ್ದನು.

ವಿ. ವಿ. : ಒಂದು ವೇಳೆ ಇಂದ್ರನು ತತ್ಕಾಲದಲ್ಲಿ ವಿರೋಧಿಸಿದರೂ, ಅರ್ಜುನ ಕೊಟ್ಟದ್ದು, ತಾನು ಕೊಟ್ಟಿದ್ದೇ ಎಂದು ಭಾವಿಸಿ ಮುಂದೆ ವೈರ ಮಾಡಲಿಕ್ಕಿಲ್ಲ ಎಂದು ಬ್ರಾಹ್ಮಣನು ಬಗೆದಿದ್ದನು. ಅದಕ್ಕಾಗಿ ಇಬ್ಬರನ್ನೂ ಪ್ರಾರ್ಥಿಸಿದ್ದನು.

**ನ ಚಾಯುಕ್ತಃ ಕೇಶವೇ ನೈಷ ಶಕ್ತ**
**ಇತಿಸ್ಮ ಕೃಷ್ಣಾದಾಪ ಭೂಯೋಽಪ್ಯನುಜ್ಞಾಂ**
**ಯಯೌ ಸಮೀಪಂ ಚಹರೇ ರ್ಬದರ್ಯಾ**
**ಮಾದಾಯ ಚಕ್ರಂ ಚಾಮತಃ ಕೇಶವೇಽದಾತ್** ॥೨೨೪॥

ಇವನು (ಅರ್ಜುನನು) ಕೃಷ್ಣನಿಲ್ಲದಿದ್ದರೆ ಶಕ್ತನಾಗಲಾರ ಎಂದು ತಿಳಿದೇ, ಆ ವಿಪ್ರನು ಕೃಷ್ಣನ ಆಜ್ಞೆಗಾಗಿಯೂ ಪ್ರಾರ್ಥಿಸಿದ್ದನು. ನಂತರ ಆ ವಿಪ್ರನು ಶ್ರೀಹರಿಯು ವಾಸವಾಗಿದ್ದ ಬದರಿಗೆ ಹೋದನು. ಅಲ್ಲಿಂದ ಚಕ್ರವನ್ನು ತಂದು ಶ್ರೀಕೃಷ್ಣನಿಗೆ ಕೊಟ್ಟನು.

ವಿ. ವಿ. : ಒಂದು ವಿಶೇಷ ವಿಚಾರ. ಖಾಂಡವ ವನದಲ್ಲಿದ್ದಾಗ ಕೃಷ್ಣನಲ್ಲಿ ಚಕ್ರವಿರಲಿಲ್ಲವೇ? ಅದಕ್ಕೆ ಸಮಾಧಾನ.

**ಚಕ್ರಂ ಗೋಮಂತೇ ಕೃಷ್ಣಮಾಯಾದಿ ಪೂರ್ವಂ**
**ಭಕ್ತ್ಯಾ ವಹ್ನಿಃ ಕೇಶವೇಽದಾತ್ಪುನಸ್ತತ್**
**ಚಕ್ರಂ ಚ ವಿಷ್ಣೋರ್ಬಹುಧಾ ವ್ಯವಸ್ಥಿತಂ**
**ತದಗ್ನಿ ದತ್ತಂ ಪ್ರಾಕ್ತನಂ ಚೈಕಧಾಸೀ ತ್** ॥೨೨೫॥

ಶ್ರೀಕೃಷ್ಣನು ಗೋಮಂತಕ ಪರ್ವತದಲ್ಲಿದ್ದಾಗಲೂ, ಆ ಚಕ್ರವು ಅವನಲ್ಲಿದ್ದಿತು. ಅದೇ ಬದರಿಯಲ್ಲಿದ್ದಿತು. ಅದನ್ನೇ ಅಗ್ನಿ ಇಂದು ಭಕ್ತಿಯಿಂದ ಪುನಃ ತಂದುಕೊಟ್ಟಿದ್ದಾನೆ. ವಿಷ್ಣುವಿನ ಚಕ್ರವು ಬಹುರೂಪ ಉಳ್ಳದ್ದು. ಅಗ್ನಿಯು ತಂದಿತ್ತದ್ದು, ಅದು ಬೇರೆಯಲ್ಲ.

ವಿ. ವಿ. : ಪರಮಾತ್ಮನ ಅವತಾರಗಳಿಗೆ ಹೇಗೆ ಭೇದವಿಲ್ಲವೋ ಅದರಂತೆ ಆಯುಧಗಳಿಗೂ ಭೇದವಿಲ್ಲ. ಅವೂ ಅಂಶ ರೂಪದಿಂದ ಅನಂತ. ಕಾರಣ "ಆಯುಧ ಗಳಲ್ಲೂ ಭೇದವನ್ನು ತಿಳಿಯಬಾರದು" ಇದು ಸಿದ್ಧಾಂತ.

**ಧನುಶ್ಚ ಗಾಂಡೀವ ಮಥಾಬ್ಜ ಜಸ್ಯ**
**ಕರೋತಿ ಯೇನಾಖಿಲ ಸಂಯತಿಂ ಸ**
**ಅಂಕೇನ ದತ್ತಂ ತದುಮಾಪತೇ ಶ್ಚ**
**ಶಕ್ರಸ್ಯ ಸೋಮಸ್ಯ ಜಲೇಶಿತುಶ್ಚ** ||೨೨೬||

ಗಾಂಡೀವವೆಂಬ ಬಿಲ್ಲನ್ನು ಅರ್ಜುನನಿಗೆ ತಂದುಕೊಟ್ಟನು. ಆ ಬಿಲ್ಲಿನಿಂದಲೇ ಬ್ರಹ್ಮನು ಜಗತ್ತನ್ನು ನಾಶ ಮಾಡಬಲ್ಲನು. ಆ ಬಿಲ್ಲು ಒಂದಂಶದಿಂದ ರುದ್ರದೇವರಿಗೆ ಕೊಡಲಾಯಿತು. ನಂತರ ಅದು ಇಂದ್ರನಲ್ಲಿಗೆ ಬಂದಿತು. ಅಲ್ಲಿಂದ ಚಂದ್ರನಿಗೆ, ನಂತರ ವರುಣನಿಗೆ, ವರುಣನಿಂದ ಅಗ್ನಿಯು ಅರ್ಜುನನಿಗಾಗಿ ತಂದುಕೊಟ್ಟನು.

**ವಿ. ವಿ. :** ಕೆಲವು ಗ್ರಂಥಗಳಲ್ಲಿ ಬ್ರಹ್ಮನೇ ತಂದು ಕೊಟ್ಟನೆಂದು ಪಾಠಾಂತರವಿದೆ. **ಧನುವಿನ ವರ್ಣನೆ –**

**ತೇನೈವ ತೇಜಿಗ್ಯುರಥೋ ಜಗತ್ರಯಂ**
**ಪ್ರಸಾದ ತಸ್ತೇ ಕ್ರಮಶೋಽಬ್ಜ ಯೋನೇಃ**
**ಅನನ್ಯಧಾರ್ಯಂ ವಿಜಯಾವಹಂ ಚ**
**ಭಾರೇಣ ಲಕ್ಷಸ್ಯ ಸಮಂ ಶುಭಾವಹಂ** ||೨೨೭||

ಆ ಧನುವಿನ ಪ್ರಭಾವದಿಂದ, ರುದ್ರದೇವರ ಆದಿಯಾಗಿ ಕ್ರಮದಿಂದ ಎಲ್ಲರೂ ಮೂರು ಲೋಕಗಳನ್ನು ಗೆದ್ದರು. ಅವರಿಗೆ ಬ್ರಹ್ಮನ ಅನುಗ್ರಹವೂ ಇದ್ದಿತು. ಇನ್ನೊಬ್ಬರಿಂದ ಧರಿಸಲು ಅಸಾಧ್ಯವಾದದ್ದು ಜಯವನ್ನು ತಂದುಕೊಡತಕ್ಕದ್ದು. ಮಂಗಲಕರವಾದದ್ದು ಒಂದು ಲಕ್ಷ ಭಾರವಾದದ್ದು.

'ಒಂದು ಭಾರ' ಎಂದರೆ ಇಪ್ಪತ್ತು ತೊಲೆ.

**ರಥಂ ಚ ಶುಭ್ರಾಶ್ವಯುತಂ ಶುಭಾವಹಂ**
**ತೂಣೀ ತಥಾ ಚಾಕ್ಷಯಸಾಯಕೌ ಶುಭೌ**
**ಧ್ವಜಂ ಚ ರಾಮಸ್ಯ ಹನೂಮ ದಂಕ**
**ಮಾದಾಯ ಸರ್ವಂ ವರುಣಾದುರ್ಜುನೇಽದಾತ್** ||೨೨೮||

ಅಗ್ನಿಯು ಅರ್ಜುನನಿಗಾಗಿ ಒಂದು ರಥವನ್ನು ತಂದುಕೊಟ್ಟನು. ಅದಕ್ಕೆ ಬಿಳಿಯ ಕುದುರೆಗಳನ್ನು ಕಟ್ಟಿದ್ದರು. ಅಕ್ಷಯ ಬಾಣಗಳುಳ್ಳ ಬತ್ತಳಿಕೆಯಿದ್ದಿತು. ಧ್ವಜದಲ್ಲಿ ರಾಮಭಕ್ತನಾದ ಹನುಮಂತನ ಚಿಹ್ನೆ ಇದ್ದಿತು. ಇಂಥ ರಥವನ್ನು ಅಗ್ನಿಯು ವರುಣನಿಂದಲೇ ತಂದಿದ್ದನು.

ಗಾಂಡೀವ ಮತ್ತು ಧ್ವಜದ ವಿಶೇಷತೆಯನ್ನು ಬಣ್ಣಿಸಲಾಗಿದೆ.

**ವಿಶೇಷತೋ ಧ್ವಜಸಂಸ್ಥೋ ಹನುಮ**
**ತ್ಯಜೇಯತಾ ಸ್ಯಾಚ್ಛೇಯರೂಪೋ ಯತೋಽಸೌ**
**ಸರ್ವಂ ಚ ತದ್ದಿವ್ಯ ಮಭೇದ್ಯಮೇವ**
**ವಿದ್ಯುತ್ಪ್ರಭಾಜ್ಯಾ ಚ ಗಾಂಡೀವ ಸಂಸ್ಥಾ** ||೨೨೯||

ವಿಶೇಷವಾಗಿ ಆ ಧ್ವಜದಲ್ಲಿ ಹನುಮಂತ ಇದ್ದುದರಿಂದ, ಜಯವು ಖಚಿತವಾಗಿತ್ತು. ಏಕೆಂದರೆ ಹನುಮಂತನು ಜಯಸ್ವರೂಪನೇ ಆಗಿದ್ದನು. ಅದರಂತೆ ಗಾಂಡೀವವಿದ್ದಾಗ, ಅವರನ್ನು ಸೋಲಿಸಲು ಯಾರಿಗೂ ಶಕ್ಯವಾಗುತ್ತಿರಲಿಲ್ಲ. ಎರಡೂ ವಿಶೇಷ ಗುಣಗಳಿಂದ ಕೂಡಿದವು. ಗಾಂಡೀವದ 'ಜ್ಯಾ' ಹಗ್ಗವು ಕೂಡ ವಿದ್ಯುತ್ಪ್ರಭಾದಂತೆ ಕಾಣುತ್ತಿತ್ತು. ಅದು ಅಭೇದ್ಯವಾಗಿತ್ತು.

ಅಂತಹ ಗಾಂಡೀವವನ್ನು ಅರ್ಜುನನು ಹೇಗೆ ಧರಿಸಿದ್ದನು ? ಸಮಾಧಾನ.

**ಗಾಂಡೀವಮಪ್ಯಾಸ ಕೃಷ್ಣ ಪ್ರಸಾದಾತ್**
**ಶಕ್ಯಂ ಧರ್ತುಂ ಪಾಂಡವಸ್ಯಾಪ್ಯಧಾರ್ಯಂ**
**ದೇವೈಶ್ಚ ತೈರ್ಬ್ರಹ್ಮ ವರಾದ್ಧೃತಂ ತತ್**
**ಬ್ರಹ್ಮೈವ ಸಾಕ್ಷಾತ್ ಪ್ರಭುರಸ್ಯ ಧಾರಣೇ** ॥೨೩೦॥

ಆ ಗಾಂಡೀವವನ್ನು ಶ್ರೀಕೃಷ್ಣನ ಅನುಗ್ರಹ ಮಾತ್ರದಿಂದಲೇ ಅರ್ಜುನನು ಮಾತ್ರ ಧರಿಸಲು ಶಕ್ತನಾಗಿದ್ದನು. ಅನ್ಯರು ಧರಿಸಲು ಅಸಮರ್ಥರೇ ಸರಿ. ಬ್ರಹ್ಮನನ್ನುಳಿದು ಇತರರು ಕೂಡ ಬ್ರಹ್ಮನ ವರದಿಂದಲೇ ಧರಿಸಿದ್ದನು. ಬ್ರಹ್ಮನೊಬ್ಬನೇ ಅದನ್ನು ಧರಿಸಲು ಸಮರ್ಥನಾಗಿದ್ದನು.

**ಇಂದ್ರಸ್ಯ ದತ್ತಶ್ಚ ವರಃ ಸ್ವಯಂ ಭುವಾ**
**ತೇನಾಪಿ ಪಾರ್ಥಸ್ಯ ಬಭೂವ ಧಾರ್ಯಂ**
**ಇಂದ್ರೋ ಹ್ಯಸೌ ಫಲ್ಗುನತ್ವೇನ ಜಾತಃ**
**ತತಃ ಸೋಽಸ್ತ್ರೈಃ ಶರಶಾಲಾಂ ಚಕಾರ** ॥೨೩೧॥

ಬ್ರಹ್ಮನು ಇಂದ್ರನಿಗೆ ವರವನ್ನು ಕೊಟ್ಟಿದ್ದನು. ಇಂದ್ರನೇ ಅರ್ಜುನನ ರೂಪದಲ್ಲಿ ಬಂದಿದ್ದಾನೆ. ಕಾರಣ ಅದನ್ನು ಧರಿಸಲು ಸಮರ್ಥನಾದನು. ಅರ್ಜುನನು ಅದನ್ನು ಧರಿಸಿ ಬಾಣಗಳಿಂದ ಒಂದು ಶರಜಾಲ (ಶಾಲ) ವನ್ನೇ ನಿರ್ಮಿಸಿದನು. (ಅದರ ವಿವರಣೆ)

**ಆಯೋಜನ ದ್ವಾದಶಕಾಭಿ ವಿಸ್ತೃತಂ**
**ಪುರಂ ಚಕಾರಾಶು ಪುರಂದರಾತ್ಮಜಃ**
**ಹುತಾಶನೋಽಪ್ಯಾಶು ವನಂ ಪ್ರಗೃಹ್ಯ**
**ಪ್ರಭಕ್ಷಯಾಮಾಸ ಸಮುದ್ಧತಾರ್ಚಿಃ** ॥೨೩೨॥

ಅರ್ಜುನನು ಬಾಣಗಳಿಂದ ಹನ್ನೆರಡು ಯೋಜನ ವಿಸ್ತೀರ್ಣ ಪಟ್ಟಣವನ್ನೇ ನಿರ್ಮಿಸಿದನು. ಅಗ್ನಿಯು ಕೂಡ ತನ್ನ ಪ್ರಜ್ವಲಿಸುವ ಜ್ವಾಲೆಗಳಿಂದ ಕೂಡಲೇ ಆ ವನವನ್ನು ಭಕ್ಷಿಸಿದನು.

**ಪ್ರಭಕ್ಷ್ಯಮಾಣಂ ನಿಜಕಕ್ಷಮೀಕ್ಷ್ಯ**
**ಸಂಧುಕ್ಷಯಾಮಾಸ ತದಾಶು ಶುಕ್ಷಣಿಂ**
**ಅಕ್ಷೋಭಮಾಭಿ ರ್ಬಹುಲೇಕ್ಷಣೋಽಂಭಸಾಂ**
**ಧಾರಾಭಿರಾಕ್ಷುಬ್ಧ ಮನಾಃ ಕ್ಷಯಾಯ** ॥೨೩೩॥

ತನ್ನ ಉದ್ಯಾನವನ್ನು (ಖಾಂಡವ ವನವನ್ನು) ವೇಗದಿಂದ ತಿನ್ನುತ್ತಿರುವ ಅಗ್ನಿಯನ್ನು ಕಂಡು, ಇಂದ್ರನು ಮನದಲ್ಲಿ ನೊಂದುಕೊಂಡನು. ಮೋಡಗಳನ್ನು ಕರೆದು, ರಥ ಚಕ್ರದಲ್ಲಿ ಸಿಕ್ಕಿರುವ ಅಕ್ಷದ ಪ್ರಮಾಣದಲ್ಲಿ ಧಾರಾಕಾರವಾಗಿ ಮಳೆಯನ್ನು ಸುರಿಸಿರಿ ಎಂದು ಅಪ್ಪಣೆಯಿತ್ತು, ಪ್ರಕ್ಷುಬ್ಧ ಮನದಿಂದ ಅಗ್ನಿಯನ್ನು ತಡೆಯಲು ಪ್ರಯತ್ನಿಸಿದನು.

ವಿ. ವಿ. : ಹಿಂದೆ ಗೋವರ್ಧನ ಪರ್ವತದಲ್ಲೂ, ಕೃಷ್ಣನನ್ನು ತಪ್ಪು ತಿಳಿದು ಇದೇ ರೀತಿ ಪ್ರಯತ್ನಿಸಿದನು. ಓದುಗರು ಬಲ್ಲರು.

**ಅಸ್ತ್ರೈಸ್ತು ವೃಷ್ಟಿಂ ವಿನಿವಾರ್ಯ ಕೃಷ್ಣಃ**
**ಪಾರ್ಥಶ್ಚ ಶಕ್ರಂ ಸುರಪೂಗಯುಕ್ತಂ**
**ಅಯುಧ್ಯ ತಾಂ ಸೋಽಪಿ ಪರಾಜಿತೋಽಭೂತ್**
**ಪ್ರೀತಶ್ಚ ದೃಷ್ಟ್ವಾ ಬಲಮಾತ್ಮ ಸಸ್ತ್ರತ್** ॥೨೩೪॥

ಅರ್ಜುನನು ಅಸ್ತ್ರಗಳನ್ನು ಉಪಯೋಗಿಸಿ ಮಳೆಯನ್ನು ನಿವಾರಿಸಿದನು. ಪಾರ್ಥನು, ಶ್ರೀಕೃಷ್ಣ ಮತ್ತು ದೇವತೆಗಳ ಸಮೂಹದಲ್ಲಿದ್ದುದನ್ನು ಇಂದ್ರನು ಕಂಡನು. ತಾನು ಯುದ್ಧದಲ್ಲಿ ಸೋತಿದ್ದರೂ ತನ್ನ ಮಗನ ಬಲವನ್ನು ಕಂಡು ಸಂತುಷ್ಟನಾದನು.

ವಿ. ವಿ. : ಮಳೆಯನ್ನು ನಿಲ್ಲಿಸಬೇಕಾದರೆ ಮೋಡಗಳನ್ನು ಚದುರಿಸಬೇಕು. ಮೋಡ ಚದುರಲು ಗಾಳಿ ಅಗತ್ಯ. ಆದಕ್ಕಾಗಿ ಅರ್ಜುನನು ವಾಯುವಾಸ್ತ್ರವನ್ನು ಉಪಯೋಗಿಸಿದ ಎಂದು ತಿಳಿಯಬೇಕು.

**ಸ್ನೇಹಂ ಚ ಕೃಷ್ಣಸ್ಯ ತಮರ್ಜುನೇ ಧೃತಂ**
**ವಿಲೋಕ್ಯ ಪಾರ್ಥಸ್ಯ ಬಲಂ ಚ ತಾದೃಶಂ**
**ನಿವರ್ತ್ಯ ಮೇಘಾನತಿ ತುಷ್ಟ ಚಿತ್ತ**
**ಪ್ರಣಮ್ಯ ಕೃಷ್ಣಂ ತನಯಂ ಸಮಾಶ್ಲಿಷತ್** ॥೨೩೫॥

ಶ್ರೀಕೃಷ್ಣ ಮತ್ತು ತನ್ನ ಮಗನಾದ ಅರ್ಜುನರಲ್ಲಿ ಇರುವ ಸ್ನೇಹವನ್ನು ಇಂದ್ರನು ನೋಡಿದನು. ಪಾರ್ಥನ ಬಲವನ್ನೂ ಕಂಡನು. ಅವನು ಮೋಡಗಳನ್ನು ಚದುರಿಸಿದ ಪರಿಯನ್ನು ಅರಿತು, ಸಂತುಷ್ಟ ಚಿತ್ತನಾಗಿ ಕೃಷ್ಣನಿಗೆ ನಮಸ್ಕರಿಸಿದನು. ಮಗನನ್ನು ಸ್ನೇಹದಿಂದ ಆಲಂಗಿಸಿದನು.

**ವಿಷ್ಣುಶ್ಚ ಶಕ್ರೇಣ ಸಹೈತ್ಯ ಕೇಶವಂ**
**ಸಮಾಶ್ಲಿಷನ್ನಿರ್ವಿಶೇಷೋಽಪ್ಯನಂತಃ**
**ಸ ಕೇವಲಂ ಕ್ರೀಡಮಾನಃ ಸಶಕ್ರಃ**
**ಸ್ಥಿತೋ ಹಿ ಪೂರ್ವಂ ಯುಯುಧೇನ ಕಿಂಚಿತ್** ॥೨೩೬॥

ವಿಷ್ಣುವಿನ ವಿಶಿಷ್ಟವಾದ ಇನ್ನೊಂದು ರೂಪ, 'ಉಪೇಂದ್ರ' ಆತನು ಇಂದ್ರನ ಜೊತೆಯಲ್ಲಿಯೇ ಇದ್ದನು. ಆತನು ಅನಂತನಾದಾಗ್ಯೂ ಇಲ್ಲಿ ಬಂದು ಕೂಡಿಕೊಂಡಿದ್ದನು.

ಆತನು ಇಂದ್ರಾರ್ಜುನರ ಯುದ್ಧವನ್ನು ಆಟದಂತೆ ನೋಡುತ್ತ ನಿಂತಿದ್ದನು. ಆತನು ಕಿಂಚಿತ್ತೂ ಯುದ್ಧ ಮಾಡಲಿಲ್ಲ.

**ಬ್ರಹ್ಮಾ ಚ ಶರ್ವಶ್ಚ ಸಮೇತ್ಯ ಕೃಷ್ಣಂ**
**ಪ್ರಣಮ್ಯ ಪಾರ್ಥಸ್ಯ ಚ ಕೃಷ್ಣ ನಾಮ**
**ಸಂ ಚಕ್ರೇ ತುಷ್ಟ್ಯಾಪಿ ಶಿಕ್ಷಾ ಪ್ರಕರ್ಷಾತ್**
**ಚಕ್ರುಶ್ಚ ಸರ್ವೇ ಸ್ವಾಸ್ತ್ರದಾನೇ ಪ್ರತಿಜ್ಞಾಮ್** ॥೨೩೭॥

ಬ್ರಹ್ಮ – ರುದ್ರರೂ ಕೂಡ ಬಂದು ಶ್ರೀಕೃಷ್ಣನಿಗೆ ನಮಸ್ಕರಿಸಿದರು. ಪಾರ್ಥನಿಗೆ ಪ್ರೀತಿಯಿಂದ 'ಕೃಷ್ಣ' ಎಂದು ಕರೆದರು. ತಮ್ಮ ತಮ್ಮ ಸ್ಥಳಗಳಿಗೆ ಹೋದರು. ತಮ್ಮ ತಮ್ಮ ಅಸ್ತ್ರಗಳನ್ನು ಅರ್ಜುನನಿಗೆ ಕೊಡಲು ಪ್ರತಿಜ್ಞೆಗೈದರು.

**ಅನುಜ್ಞಾ ತಾಸ್ತೇ ಪ್ರಯಯುಃ ಕೇಶವೇನ**
**ಕ್ರೀಡಾರ್ಥ ಮಿಂದ್ರೋ ಯುಯುಧೇ ಹಿ ತತ್ರ**
**ಪ್ರೀತ್ಯಾ ಕೀರ್ತಿಂ ದಾತು ಮಪ್ಯರ್ಜುನಸ್ಯ**
**ತತಸ್ತು ತುಷ್ಟಃ ಸಹದೇವೈರ್ಯಯೌ ಸ್ವಃ** ॥೨೩೮॥

ಬ್ರಹ್ಮಾದಿ ದೇವತೆಗಳು ಶ್ರೀಕೃಷ್ಣನಿಂದ ಆಜ್ಞೆಯನ್ನು ಪಡೆದು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಇಲ್ಲಿ ಕೃಷ್ಣನ ಕೂಡ ಇಂದ್ರನು ವೈರದಿಂದ ಯುದ್ಧ ಮಾಡಿಲ್ಲ. ಕೇವಲ ಕ್ರೀಡೆಯೆಂದು ತಿಳಿದು (ಭಗವಂತನು ಪ್ರೀತನಾಗಲಿ) ಎಂದೇ ಯುದ್ಧದ ನಾಟಕವನ್ನು ಆಡಿದ್ದಾನೆ. ಅಲ್ಲದೆ ಅರ್ಜುನನಿಗೆ ಕೀರ್ತಿ ತರುವುದು ಅವನ ಉದ್ದೇಶವಾಗಿತ್ತು. ಪರಾಜಯದ ನಂತರ ಖೇದ ಪಟ್ಟಿಲ್ಲ. ಸಂತುಷ್ಟನಾಗಿ ದೇವತೆಗಳ ಜೊತೆಯಲ್ಲಿ ತನ್ನ ಲೋಕಕ್ಕೆ ಹೋಗಿದ್ದಾನೆ.

**ದೈತ್ಯಾಶ್ಚ ನಾಗಾಶ್ಚ ಪಿಶಾಚಯಕ್ಷಾ**
**ಹತಾಶ್ಚ ಸರ್ವೇ ತದ್ವನಸ್ಥಾ ಹಿ ತಾಭ್ಯಾಂ**
**ಋತೇ ಚತುಃ ಪಕ್ಷಿಣ ಶ್ಚಾ ಶ್ವಸೇನಂ**
**ಮಯಂ ಚ ನಾನ್ಯತ್ ಕಿಂಚಿದಾಸಾತ್ರ ಮುಕ್ತಮ್** ॥೨೩೯॥

ಖಾಂಡವ ವನದಲ್ಲಿದ್ದ, ದೈತ್ಯರು, ಸರ್ಪಗಳು, ಪಿಶಾಚಿಗಳು ಯಕ್ಷರು ಮುಂತಾದವರೆಲ್ಲರೂ ಸುಟ್ಟು ಭಸ್ಮವಾದರು. ಕೇವಲ ನಾಲ್ಕು ಪಕ್ಷಿಗಳು, ಅಶ್ವಸೇನ ಮತ್ತು ಮಯ ಇವರು ಮಾತ್ರ ಉಳಿದುಕೊಂಡಿದ್ದರು. ಅಗ್ನಿಯಿಂದ ಖಾಂಡವ ವನದಲ್ಲಿ ಬೇರೆ ಯಾವುದು ಉಳಿಯಲಿಲ್ಲ.

**ಅಯಮಗ್ನೇ ಜರಿತೇ ತ್ಯಾದಿ ಮಂತ್ರೈಃ**
**ಸ್ತುತ್ವಾ ವಹ್ನಿಂ ಪಕ್ಷಿಣೋ ನೈವ ದಗ್ಧಾಃ**
**ಸ ಚಾಶ್ವಸೇನಃ ಪುತ್ರಕಸ್ತ ಕ್ಷಕಸ್ಯ**
**ಮಾತ್ರಾಗ್ರಸ್ಥಃ ಪ್ರಾತಿಲೋಮ್ಯೇನ ಕಂಠೇ** ॥೨೪೦॥

**ಭಿನ್ನೇಽರ್ಜುನೇನಾಂತರಿಕ್ಷೇ ಪತಂ ತ್ಯಾಃ**
**ತಸ್ಯಾಃ ಶಕ್ರೇಣಾವಿತಶ್ಛಿನ್ನ ಪುಚ್ಛಃ**
**ವಧಾನ್ಮಾತುಃ ಪುಚ್ಛಭಂಗಾಚ್ಚ ರೋಷಾತ್**
**ಹಂತುಂ ಪಾರ್ಥಂ ಕರ್ಣತೂಣೀರ ಗೋಽಭೂತ್ ॥೨೪೧॥**

ಆ ಪಕ್ಷಿಗಳು 'ಅಯಮಗ್ನೇ ಜರಿತೇ' ಮುಂತಾದ ಮಂತ್ರಗಳಿಂದ ಸ್ತೋತ್ರ ಮಾಡಿದಾಗ, ಅಗ್ನಿ ಸಂತುಷ್ಟನಾಗಿ ಅವುಗಳನ್ನು ಸುಡಲಿಲ್ಲ. ಅಶ್ವಸೇನನು, ತಕ್ಷಕನ ಮಗನು. ತಾಯಿಯನ್ನು ಪ್ರಾತಿತೋಮರೀತ್ಯಾ ಗಟ್ಟಿಯಾಗಿ ಅಪ್ಪಿಕೊಂಡಿದ್ದ. ಅರ್ಜುನನ ಬಾಣದಿಂದ ತಾಯಿ ಸತ್ತಿತು. ಅಶ್ವಸೇನನ ಬಾಲ ಕತ್ತರಿಸಿತು. ಆಗ ಅರ್ಜುನನ ಮೇಲೆ ಅಶ್ವಸೇನನಿಗೆ ಎರಡು ಪ್ರಕಾರದ ಕೋಪ ಬೆಳೆಯಿತು. ತಾಯಿಯನ್ನು ಕೊಂದದ್ದು, ತನ್ನ ಬಾಲ ಕತ್ತರಿಸಿದ್ದು, ತಾಯಿಯು ಮಗನನ್ನು ನುಂಗಿದಳು. ಅದಕ್ಕಾಗಿ ಅವನು ಅರ್ಜುನನನ್ನು ಕೊಲ್ಲಲು ನಿಶ್ಚಯಿಸಿ, ಅದೇ ಉದ್ದೇಶದಿಂದ ಅವನು ಕರ್ಣನ ಬತ್ತಳಿಕೆಯಲ್ಲಿ ಬಾಣಗಳ ಜೊತೆಯಲ್ಲಿ ಸೇರಿಕೊಂಡ.

**ಮಯಃ ಕೃಷ್ಣೇನಾತ್ತ ಚಕ್ರೇಣ ದೃಷ್ಟೋ**
**ಯಯೌ ಪಾರ್ಥಂ ಶರಣಂ ಜೀವಿತಾರ್ಥೀ**
**ಪಾರ್ಥಾರ್ಥಮೇನಂ ನ ಜಘಾನ ಕೃಷ್ಣಃ**
**ಸ್ವಭಕ್ತ ಶ್ಚೇತ್ಯತಿ ಮಾಯಂ ರಮೇಶಃ ॥೨೪೨॥**

ಶ್ರೀಕೃಷ್ಣನು ಚಕ್ರಪಾಣಿಯಾದದ್ದನ್ನು ಮಯಾಸುರನು ಕಂಡನು. ಇನ್ನು ತನಗೆ ಉಳಿವಿಲ್ಲವೆಂದು ಜೀವದ ರಕ್ಷಣೆಗಾಗಿ ಪಾರ್ಥನಿಗೆ ಶರಣು ಬಂದನು. ಅರ್ಜುನನಿಗಾಗಿ ಶ್ರೀಕೃಷ್ಣನು (ರಮೇಶ) ಮಯನನ್ನು ಕೊಲ್ಲಲಿಲ್ಲ. ತನ್ನ ಭಕ್ತನು ಎಂದು ಮಯನನ್ನು ಕ್ಷಮಿಸಿದನು.

**ದೇವಾಂರಿತ್ಯೇವ ಮಯಿ ಪ್ರಕೋಪಃ**
**ಕೃಷ್ಣಸ್ಯ ತೇನಾ ಹಮಿಮಂ ಪುರಂದರಂ**
**ಪಾರ್ಥಾತ್ಮಕಂ ಶರಣಂ ಯಾಮಿ ತೇನ**
**ಕೃಷ್ಣಪ್ರಿಯಃ ಸ್ಯಾಮಿತಿ ತಸ್ಯ ಬುದ್ಧಿಃ ॥೨೪೩॥**

ನಾನು ದೇವತೆಗಳಿಗೆ ಶತ್ರುವೆಂದು, ಕೃಷ್ಣನಿಗೆ ನನ್ನ ಮೇಲೆ ಕೋಪ, ಆದ್ದರಿಂದ ಅರ್ಜುನರೂಪಿಯಾದ ಇಂದ್ರನಿಗೆ ಮೊರೆ ಹೊಕ್ಕರೆ ನನಗೆ ರಕ್ಷೆಯಿದೆ. ಅರ್ಜುನನಂತೆ ನಾನೂ ಶ್ರೀಕೃಷ್ಣನಿಗೆ ಪ್ರಿಯನಾಗುತ್ತೇನೆ – ಎಂಬುದು ಅವನ ಆಲೋಚನೆಯಾಗಿತ್ತು.

ಪರಮಾತ್ಮನಿಗೆ ನಮ್ಮ ಪ್ರಾರ್ಥನೆ ನೇರವಾಗಿ ಮುಟ್ಟುವುದಿಲ್ಲ. ಅದಕ್ಕಾಗಿ ಗುರುಗಳು ಅವಶ್ಯಕ ಗುರುಗಳ ದ್ವಾರದಿಂದ ಫಲಸಿದ್ಧಿ – ಈ ತತ್ವವನ್ನು ಈ ಘಟನೆಯಲ್ಲಿ ನಾವು ಕಾಣಬಹುದು.

ಪ್ರಾಣಪ್ರದಂ ಪ್ರತ್ಯುಪಕಾರಮಾಶು
ಕಿಂ ತೇ ಕರೋಮೀತಿ ಸ ಪಾರ್ಥಮಾಹ
ಕೃಷ್ಣಪ್ರಸಾದಾದ್ಧಿ ಭವಾನ್ ವಿಮುಕ್ತಃ
ತಸ್ಮೈ ಕರೋತ್ವಿತ್ಯವದತ್ಸ ಪಾರ್ಥಃ ॥೨೪೪॥

ನನ್ನ ಪ್ರಾಣವನ್ನು ರಕ್ಷಿಸಿ ಉಪಕಾರ ಮಾಡಿರುವಿ, ನಾನು ನಿನಗೆ ಪ್ರತ್ಯುಪಕಾರ ಏನು ಮಾಡಲಿ ಎಂದು ಮಯನ ಪಾರ್ಥನನ್ನು ಕೇಳಿದಾಗ, ನೀನು ಶ್ರೀಕೃಷ್ಣನ ಅನುಗ್ರಹದಿಂದ ವಿಮುಕ್ತನಾಗಿರುವಿ. ಕಾರಣ ಕೃಷ್ಣನಿಗಾಗಿ ನೀನು ಏನನ್ನಾದರೂ ಮಾಡು ಎಂದು ಪಾರ್ಥನು ಉತ್ತರಿಸಿದನು. ಇಲ್ಲಿ ಪಾರ್ಥನ ನಿಃಸ್ವಾರ್ಥತೆ ಮತ್ತು ಕೃಷ್ಣನಲ್ಲಿ ಭಕ್ತಿ ಎರಡೂ ವ್ಯಕ್ತವಾಗುತ್ತವೆ.

ಕೃಷ್ಣೋऽಪಿ ರಾಜ್ಞೇऽತಿ ವಿಚಿತ್ರರೂಪ–
ಸಭಾಕೃತಾ ವಾದಿಶತ್ತಾಂ ಸ ಚಕ್ರೇ
ಅನಿರ್ಗಮಂ ಪ್ರಾಣಿನಾಮರ್ಥಿತೌ ತೇ
ಹುತಾಶನೇನಾ ವಿಧಾಯ ಜಗ್ಮತುಃ ॥೨೪೫॥

ಧರ್ಮರಾಜನಿಗಾಗಿ ಒಂದು ಒಳ್ಳೆಯ ವಿಚಿತ್ರವಾದ ಸಭಾ ಭವನವನ್ನು ನಿರ್ಮಾಣ ಮಾಡು ಎಂದು ಶ್ರೀಕೃಷ್ಣನು ಮಯನಿಗೆ ಆಜ್ಞೆಯಿತ್ತನು. ಮಯಾಸುರನು ಅದರಂತೆ ನಿರ್ಮಿಸಿದನು. ಅಗ್ನಿಯು ಪ್ರಾರ್ಥನೆಯ ಮೇರೆಗೆ ಕೃಷ್ಣಾರ್ಜುನರು ಪಕ್ಷಿಗಳನ್ನು ಹೊರಬಿಡಲಿಲ್ಲ. ಕಾರಣ ಅವೆಲ್ಲವೂ ಹತವಾದವು.

ದೃಷ್ಟ್ವಾ ಚ ತೌ ಪಾಂಡವಾಃ ಸರ್ವ ಏವ
ಮಹಾಮುದಂ ಪ್ರಾಪುರೇತನ್ನಿಶಮ್ಯ
ಕೃಷ್ಣೋऽಪಿ ಪಾರ್ಥೇನ ಮುಮುದೇऽನಂತಶಕ್ತಿಃ
ಸುಖ ಜ್ಞಾನ ಪ್ರಭವೌ ದಾರ್ಯವೀರ್ಯಃ ॥೨೪೬॥

ಕೃಷ್ಣಾರ್ಜುನರಿಂದ ಖಾಂಡವವನ ದಹನ ಸಮಾಚಾರ ಕೇಳಿ ಎಲ್ಲ ಪಾಂಡವರು ಬಹಳ ಸಂತುಷ್ಟರಾದರು. ಅಪರಿಮಿತ ಶಕ್ತಿ, ಸುಖ, ಜ್ಞಾನ, ಔದಾರ್ಯ, ವೀರ್ಯ ಇವುಗಳಿಗೆ ಸ್ವಾಮಿಯಾದ ಶ್ರೀಕೃಷ್ಣನು ಕೂಡ ಪಾರ್ಥನನ್ನು ಕೂಡಿಕೊಂಡು ಪಾಂಡವರ ಜೊತೆಯಲ್ಲಿ ಆನಂದದಿಂದಿದ್ದನು.

ಇತಿ ಶ್ರೀಮದಾನಂದ ತೀರ್ಥ ಭಘವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯೇ ಖಾಂಡವ ದಾಹೋನಾಮ ವಿಂಶೋಧ್ಯಾಯಃ ಇಲ್ಲಿ ಶ್ರೀಮದಾನಂದ ತೀರ್ಥ ಭಗವತ್ಪಾದರಿಂದ ರಚಿತವಾದ ಶ್ರೀಮನಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಖಾಂಡವವನ ದಹನ ಎಂಬ ಇಪ್ಪತ್ತನೆಯ ಅಧ್ಯಾಯ ಮುಗಿದುದು–

ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು.
ಶ್ರೀಕೃಷ್ಣನು ಇದನ್ನು ಸ್ವೀಕರಿಸಿ ಅನುಗ್ರಹಿಸಲಿ.
ಶಿವಂ ಸುಂದರಂ ಮಂಗಲಂ

# ಅಧ್ಯಾಯದ ಚಿಂತನೆ

ಅಧ್ಯಾಯದ ಪ್ರಾರಂಭದಲ್ಲಿ ಪಾಂಡವರು ರಾಜ್ಯವಾಳುವಾಗ ಯಾರ್‍ಯಾರು ಯಾವ ಕಾರ್ಯಗಳನ್ನು ಮಾಡುತ್ತಿದ್ದರು ಎಂಬುದನ್ನು ತಿಳಿಸಲಾಗಿದೆ.

ಧರ್ಮರಾಜನು ಹೆಸರಿಗೆ ತಕ್ಕಂತೆ ಯಜ್ಞ–ಯಾಗ ದಾನ ಧರ್ಮ ವಿಪ್ರರ ಸತ್ಕಾರ ಇತ್ಯಾದಿಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದನು.

ಶಾಸನ ಪದ್ಧತಿ ಜಾರಿಗೆ ತರುವುದು, ಸತ್ತತ್ವಗಳ ಪ್ರಚಾರ, ಧರ್ಮದ ನೀತಿಗಳ ಮತ್ತು ರಾಷ್ಟ್ರದ ರಕ್ಷಣೆ ಭೀಮನ ಕಡೆಗೆ ಇದ್ದಿತು.

ದ್ರೌಪದಿ ದೇವಿಯರು ಗೃಹಿಣಿಯಾದರೂ, ಮನೆಯ ಆಯವ್ಯಯ, ಸೇವಕರ ಯೋಗಕ್ಷೇಮ, ಕೋಶದ ರಕ್ಷಣೆ, ಮನೆಗೆ ಬಂದ ಅತಿಥಿಗಳ ಸತ್ಕಾರ ಇತ್ಯಾದಿಗಳ ಭಾರವನ್ನು ಹೊತ್ತಿದ್ದರು. ವೈರಿಗಳಿಂದ ರಾಷ್ಟ್ರದ ರಕ್ಷಣೆ, ದುಷ್ಟ ಅಸುರರ ನಾಶ ಇವು ಅರ್ಜುನನ ಕಡೆಗೆ ಇದ್ದವು.

ಭೀಮಸೇನನು ವೈರಿಗಳನ್ನು ಗೆದ್ದು, ರಾಷ್ಟ್ರವನ್ನು ವಿಸ್ತರಿಸಿದನು. ವಿಷ್ಣು ಭಕ್ತಿ ಪ್ರಚಾರವಾಯಿತು. ಶೈವ ಭಕ್ತರ ಸೊಲ್ಲಡಗಿತು.

ವೇತನದಲ್ಲಿ ದುಡಿಯುವವರ ವ್ಯವಸ್ಥೆಯನ್ನು ನಕುಲನು ನೋಡಿದರೆ, ಸಹದೇವನು ಧರ್ಮನ ಅಂಗರಕ್ಷಕನಾಗಿದ್ದನು.

ದೃಷ್ಟದ್ಯುಮ್ನ, ದ್ರೌಪದಿದೇವಿಯರ ಸಹೋದರ ಪಾಂಡವರ ಸೇನಾನಾಯಕನ ಕಾರ್ಯವನ್ನು ನಿರ್ವಹಿಸಿದನು. ಭೀಮನಿಗೆ ಬಹು ಪ್ರೀತಿಯುವನಾಗಿದ್ದನು.

ಭೀಮ ಯುವರಾಜನಾಗಿ ರಾಜವಾಳುತ್ತಿದ್ದ. ಅವರ ರಾಜ್ಯ ಧರ್ಮದ್ದು. ಪಾಪ ರಹಿತನಾದದ್ದು ಅಕಾಲ ಮರಣವಿಲ್ಲದ್ದು; ಅನ್ಯಾಯವಿಲ್ಲದ್ದು ಸಮೃದ್ಧವಾದದ್ದು ಆಗಿತ್ತು.

ಧರ್ಮನು ಕೊಡುಗೈ ದೊರೆಯಾದರೆ, ಭೀಮನು ಕಾರ್ಯಗಳನ್ನು ಸಾಧಿಸಿ ಕೊಡುತ್ತಿದ್ದನು. ಶ್ರೀಕೃಷ್ಣನು ಹೆಚ್ಚಾಗಿ ಪಾಂಡವರಲ್ಲಿರುತ್ತಿದ್ದ ಕಾರಣ ಪಾಂಡವರ ರಾಜ್ಯ ವೈಕುಂಠವಾಗಿತ್ತು, ಕೃತಯುಗವಾಗಿ ಮಾರ್ಪಟ್ಟಿತ್ತು.

ಶಿಶುಪಾಲನ ಮಗಳು ದೇವಕಿ ಆಕೆಯನ್ನು ಧರ್ಮನು ಮದುವೆಯಾದನು.

ಕಾಶಿರಾಜನ ಮಗಳು ಕಾಲಿ. ದ್ರೌಪದಿಯ ಮತ್ತೊಂದು ರೂಪ ಭೀಮನ ಮದುವೆಯಾದನು. ಮದುವೆ ಸಮಯದಲ್ಲಿ ಅಸುರರೊಡನೆ ವಾಗ್ಯುದ್ಧ, ಬಾಹುಯುದ್ಧ ಗಳಾದವು. ಭೀಮನು ಎರಡರಲ್ಲೂ ಗೆದ್ದನು. ಶಾಸ್ತ್ರಸ್ತ್ರ ವಿಚಾರಗಳು ನಡೆಯುತ್ತಿವೆ.

ವ್ಯಾಘ್ರೇಶ ಮತ್ತು ಶಾರ್ದೂಲ ಲಿಂಗಗಳ ಉತ್ಪತ್ತಿ ಇತ್ಯಾದಿಗಳ ವಿಚಾರ ಬರುತ್ತದೆ. ಅಂದಿನ ಸಾಮಾಜಿಕ ಪರಿಸ್ಥಿತಿ ಚಿತ್ರಿತವಾಗಿದೆ. ವಿಷ್ಣುವಿನ ಮೇಲ್ಮೆಯನ್ನು ಹೊಗಳಲಾಗಿದೆ. ತಾರತಮ್ಯದ ಪ್ರಮೇಯವು ಸೂಚಿತವಾಗುತ್ತದೆ.

ಹರಿವಂಶದ ಭಾಗ ಶತಧನ್ವನ ವಧೆ ಅದಕ್ಕೆ ಕಾರಣ. ಶಮಂತಕ ಮಣಿಯ ಸಮಾಚಾರ. ಬಲರಾಮ ಹಾಗೂ ಕೃಷ್ಣರ ಮಧ್ಯೆ ಅಪನಂಬಿಕೆ. ಅದಕ್ಕಾಗಿ ಬಲರಾಮ ವಿದೇಹನಗರಕ್ಕೆ ಬಂದು ವಾಸಿಸಿದನು. ಇದನ್ನೂ ತಿಳಿದ ದುರ್ಯೋಧನನು ಬಲರಾಮನ ಸಖ್ಯ ಬೆಳೆಸಿದನು. ಮೊದಲು ಗದಾಯುದ್ಧ ಕಲಿತು ಶಿಷ್ಯನಾಗಿ, ನಂತರ ಬಲರಾಮನ ತಂಗಿಯನ್ನೇ ಮದುವೆಯಾಗಲು ಇಚ್ಛಿಸಿದನು. ಬಲರಾಮನು ಒಪ್ಪಿದನು ಕೂಡ. ಪ್ರತಿಜ್ಞೆಯೂ ಆಯಿತು. ಅದಕ್ಕೆ ಅವರ ಮನದ ಕಲ್ಪನೆ ಅಷ್ಟೇ.

ತ್ರಿಜಟೆಯ ವೃತ್ತಾಂತ – ಸೀತೆಯ ಸೇವಾ ಫಲವಾಗಿ ಇಂದು ಸುಭದ್ರೆ. 'ದೊಡ್ಡವರ ಸೇವೆ ವ್ಯರ್ಥವಾಗದು' ದುರ್ಯೋಧನನು ತನ್ನ ನಗರಕ್ಕೆ ಹೋದ ನಂತರ ಕೃಷ್ಣ– ಬಲರಾಮರನ್ನು ಕರೆಯಿಸಿಕೊಂಡ ಎಲ್ಲರ ಸಮಕ್ಷಮ ಅಕ್ರೂರನಲ್ಲಿದ್ದ ಮಣಿಯನ್ನು ತೋರಿಸಿದ 'ಕೃಷ್ಣನು ದೋಷಯಲ್ಲ' ಎಂದ ಸಿದ್ಧವಾಯಿತು. ಅನೇಕರ ಕಣ್ಣು ಮಣಿಯ ಮೇಲಿದ್ದಿತು. ಕಾರಣ ಕೃಷ್ಣ, ಅಕ್ರೂರನಿಗೆ ಕೊಟ್ಟಾಗ, ಆತನೇ ಅದಕ್ಕೆ ಅರ್ಹನಾಗಿದ್ದ. ಇಲ್ಲಿ ಶಮಂತಕ ಮಣಿಯ ವೈಶಿಷ್ಟ್ಯ ಹೇಳಲಾಗಿದೆ.

ಅಲ್ಲಿಂದ ಶ್ರೀಕೃಷ್ಣನು ಪಾಂಡವರ ಹತ್ತಿರ ಬಂದನು. ಒಂದುದಿನ ಅರ್ಜುನ ನೊಡನೆ ಬೇಟೆಗೆಂದು ಬಂದಾಗ ಯಮುನಯ ತಂಗಿ ಕಾಲಿಂದಿಯನ್ನು (ಯಮುನಾ ನದಿಯ ಮಗಳಲ್ಲ) ಇಚ್ಛಿಸಿ ಹಾಗೂ ತಪಸ್ಸಿಗೆ ಮೆಚ್ಚಿ ಕಾಲಿಂದಿಯೊಡನೆ ಮದುವೆಯಾದನು.

ಮುಂದೇ ಏಳೂ ಘೂಳಿಗಳನ್ನು ಕಟ್ಟಿ ನೀಲಾದೇವಿಯರನ್ನು ವಿವಾಹ ಆದನು. ನಂತರ ಮಿತ್ರವಿಂದೆಯ ಕೂಡ ಮದುವೆ ಆಯಿತು. ಭದ್ರೆಯೊಡನೆಯೂ ಮದುವೆ ಆಯಿತು.

ವಿಚಿತ್ರ ಷರತ್ತನ್ನು ಗೆದ್ದು 'ಲಕ್ಷಣ' ಯೊಡನೆಯೂ ಮದುವೆ ಆಯಿತು.

**ಸ್ವಯಂವರದ ವರ್ಣನೆ** – ತ್ರಿವಿಧ ಜೀವರುಗಳ ವಿಚಾರ ವ್ಯತ್ಯಾಸ – ಇವುಗಳನ್ನು ತಿಳಿಸಲಾಗಿದೆ. ಅಚ್ಛಿನ್ನ ಭಕ್ತರ ಲಕ್ಷಣಗಳನ್ನೂ ಹೇಳಲಾಗಿದೆ. ಇವರಲ್ಲದೆ ರುಕ್ಮಿಣಿ ಮತ್ತು ಸತ್ಯಭಾಮೆ. ಒಟ್ಟು ಅಷ್ಟಮಹಿಷೆಯರ ಮದುವೆ ಆಯಿತು. ಇಲ್ಲಿ ಆವೇಶ ಅವತಾರಗಳ ವ್ಯತ್ಯಾಸವನ್ನೂ ತಿಳಿಸಲಾಗಿದೆ.

ರಮಾದೇವಿಯರ ಆವೇಶವಿಲ್ಲದೆ ಯಾವ ಸ್ತ್ರೀಯರ ಸಂಪರ್ಕ ಇರಲಿಲ್ಲ. ಇದನ್ನು ತಿಳಿಯುವುದು ಅತಿ ಅಗತ್ಯ.

ರೈವತಪರ್ವತ, ವರ್ಣನೆ – ಯಾದವರ ಕ್ರೀಡಾಂಗಣ ಹಾಗೂ ಶ್ರೀಕೃಷ್ಣನ ದರ್ಶನದ ತಾಣ. ನಾರದರ ಆಗಮನ. ಶ್ರೀಕೃಷ್ಣನೇ ಸರ್ವೋತ್ತಮನೆಂದು ಜನರಿಗೆ ತಿಳಿಸುವುದು. ಅನೇಕ ಉದಾಹರಣೆಗಳೂ ಇವೆ. 'ದಕ್ಷಿಣಾಭಿಸಾಕಂ' ವಿವರಣೆ ಮತ್ತು ಮಹತ್ವ ಹೇಳಲಾಗಿದೆ. ಅವರ ವಿವರ ಇಲ್ಲಿ 'ಜಡ ಮತ್ತು ಚೇತನ ತಾರತಮ್ಯ ವಿವರ' ಕೊಡಲಾಗಿದೆ. 'ಆಶ್ಚರ್ಯ' ಮತ್ತು 'ಧನ್ಯ' ಶಬ್ದಗಳ ವಿಚಾರ ಹಿನ್ನೆಲೆ ಇತ್ಯಾದಿಗಳನ್ನು 'ಮೂಲರೂಪಕ್ಕೂ ಅವತಾರಕ್ಕೂ ಭೇದವಿಲ್ಲ' ಎಂಬ ತತ್ತ್ವದ ಸಿದ್ಧಿ ಪ್ರಮಾಣದಿಂದ.

ಭೀಮನು ಶ್ರೀಕೃಷ್ಣನಲ್ಲಿ ಗದಾಭ್ಯಾಸವನ್ನು ಮಾಡಲಿಲ್ಲ. ಏಕೆ? ಕಾರಣಗಳನ್ನು ಕೊಡಲಾಗಿದೆ. ಕೇಶವನ ಸಾಮರ್ಥ್ಯ ಪ್ರದರ್ಶನ, ಕ್ರೀಡೆಗಾಗಿ.

ರುಕ್ಮಿಣಿ ಮತ್ತು ಸತ್ಯಭಾಮೆಯರ ಸ್ವಭಾವ ವ್ಯತ್ಯಾಸ. ಆ ಮೂಲಕ ಸ್ತ್ರೀ ಸ್ವಭಾವದ ದರ್ಶನ 'ಪಾರಿಜಾತದ ನಾಟಕ'

ಪಾರಿಜಾತದ ಗಿಡವನ್ನೇ ತರುವುದಾಗಿ ಪ್ರತಿಜ್ಞೆ. ಇಂದ್ರನ ಆಗಮನ ಬದರಿಯಲ್ಲಿಯ ಮುನಿಗಳ ಪ್ರಾರ್ಥನೆ ನರಕಾಸುರನ ಹಾವಳಿ. ಸತ್ಯಭಾಮೆಯ ಭೀಮ ವ್ರತ. ಮಹತ್ಫಲಕ್ಕೆ ಮಹದ್ವ್ರತ.

ನರಕಾಸುರನ ಮೇಲೆ ದಾಳಿ. ನರಕನ ಪಟ್ಟಣ, ರಕ್ಷಣೆ, ಸೈನ್ಯ ಇತ್ಯಾದಿಗಳ ವರ್ಣನೆ. ಪಟ್ಟಣದ ದುರ್ಗಗಳು, ನರಕನ ಮಕ್ಕಳ ನಾಶ – ನರಕಾಸುರನೊಡನೆ ಯುದ್ಧ ನರಕನ ಸಾಮರ್ಥ್ಯ ಸತ್ಯಭಾಮೆಯ ಯುದ್ಧ ಕೌಶಲ – ಶ್ರೀಕೃಷ್ಣನಿಂದ ನರಕನ ವಧೆ – ವರಾಹವತಾರದ ಸಂದರ್ಭ.

ನರಕಾಸುರನ ಮಗನಿಗೆ ಪಟ್ಟ. ನರಕಾಸುರನಿಂದ ಬಂಧಿತರಾದ ಹದಿನಾರು ಸಾವಿರ ಒಂದುನೂರು ರಾಜ ಕನ್ನಿಕೆಯರ ಬಿಡುಗಡೆ ಹಾಗೂ ಅವರ ಉದ್ಧಾರ. ಶ್ರೀಕೃಷ್ಣನ ಉದಾರ ನೀತಿ – ಸಮಾಜ ದೃಷ್ಟಿ. ಆ ಕನ್ನಿಕೆಯರ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಹಿನ್ನೆಲೆ ಶ್ರೀಕೃಷ್ಣನನ್ನು ವರಿಸಿದ್ದು.

ಲಿಂಗ ಬದಲಾವಣೆ, ಸ್ತ್ರೀಯರು ಪುರುಷರಾಗುವುದು ಅಥವಾ ಪುರುಷರು ಸ್ತ್ರೀಯರಾಗುವುದು ಸಾಧ್ಯವೇ? ವಿವರಣೆ.

ನರಕನು ಬಲಾತ್ಕಾರದಿಂದ ತಂದ ಅದಿತಿಯ ಕುಂಡಲಗಳನ್ನು ಆಕೆಗೆ ಅರ್ಪಿಸಿದರು. ಆಕೆ ಅಸುರಾವೇಶದರು. ಶ್ರೀಹರಿಯ ಸ್ವರೂಪವನ್ನು ತಿಳಿಯದೆ ದಂಪತಿಗಳಿಗೆ ಆಶೀರ್ವಾದಗಳು. ನಂತರ ನಂದನವನ ಪ್ರವೇಶ. ಅಲ್ಲಿ ಪಾರಿಜಾತ ವೃಕ್ಷದ ದರ್ಶನ. ಪಾರಿಜಾತದ ಮಹಿಮೆ ಮತ್ತು ಹಿನ್ನೆಲೆ ವಿವರಿಸಲಾಗಿದೆ. ಸತ್ಯಭಾಮೆ ಗಿಡವನ್ನು ಅಪೇಕ್ಷಿಸಿದಳು. ಕೃಷ್ಣನು ಕೂಡಲೇ ಮಾನವರಂತೆ ನಟಿಸಿ, ಸತ್ಯಭಾಮೆಯ ಪ್ರೀತಿಗೋಸ್ಕರ ಅದನ್ನು ಕಿತ್ತು ಗರುಡ ಮೇಲಿಟ್ಟನು. ಇದನ್ನು ತಿಳಿದ ಶಚಿದೇವಿ ಇಂದ್ರನಿಗೆ ಪ್ರಚೋದಿಸಿದಳು. ಶಚಿದೇವಿಯ ಬೋಧನೆಯಿಂದ ಇಂದ್ರನು ಅದನ್ನು ತಡೆದನು. ಸತ್ಯಭಾಮೆ ಎದುರಿಸಿ – ದೇವತೆಗಳನ್ನು ಸೋಲಿಸಿದಳು. ಇಂದ್ರನ ಅಹಂಕಾರ ಇಳಿಯಿತು. ಅಸುರಾವೇಶ ಹೋಯಿತು. ಇಂದ್ರನು ಕ್ಷಮೆ ಯಾಚಿಸಿದನು. ಶ್ರೀಹರಿ ಕರುಣಿಸಿದರು. ರತ್ನಗಳ ಸಹಿತವಾಗಿ ಪಾರಿಜಾತವನ್ನು ಒಪ್ಪಿಸಿದನು. ಅರ್ಜುನ ರಕ್ಷಣೆಗಾಗಿ ಪ್ರಾರ್ಥನೆ. ಶ್ರೀಕೃಷ್ಣನ ಪಾರಿಜಾತ ವೃಕ್ಷಸಹಿತ ದ್ವಾರವತಿಗೆ ಬಂದನು.

ಈ ಘಟನೆಯಿಂದ ಅರಿಯಬೇಕಾದ ವಿಷಯಗಳು. ಗಮನಿಸಬೇಕಾದ ವಿಷಯ. ಇತ್ಯಾದಿಗಳನ್ನು ಬಹು ವಿಸ್ತಾರವಾಗಿ ವಿವೇಚಿಸಲಾಗಿದೆ. ಆಚಾರ್ಯರ ಮುಖ್ಯ ಉದ್ದೇಶ ವಿವರಿಸಲಾಗಿದೆ.

ದ್ವಾರಾವತಿಯಲ್ಲಿ ಯಾದವರ ಸ್ವಾಗತ, ಅಪ್ಸರಾ ಸ್ತ್ರೀಯರೊಂದಿಗೆ ವಿದ್ಯುಕ್ತವಾಗಿ ಮದುವೆಯಾಯಿತು. ಎಲ್ಲರಿಗೂ ಬೇರೆ ಬೇರೆ ನಿವಾಸಗಳ ವ್ಯವಸ್ಥೆ. ಎಲ್ಲ ಮಡದಿಯಲ್ಲೂ ಸಂತಾನ. ಪ್ರದ್ಯುಮ್ನ ಮತ್ತು ಸಾಂಬರ ಜನನ. ಚಾರುದೇಷ್ಣನು ಮಗನೇ ಹಿಂದೆ ಗಣಪತಿ ಆಗಿದ್ದನು.

ಸಾಂಬ ಹಾಗೂ ಪ್ರದ್ಯುಮ್ನರು ನಾಗಲೋಕ (ಪಾತಾಳಲೋಕ)ಕ್ಕೆ ಹೋದರು. ಸರ್ಪಗಳೊಡನೆ ಹೋರಾಟ. ವಾಸುಕೀ ಸೋಲು. ಮುತ್ತು ರತ್ನಗಳ ಕಾಣಿಕೆ ಅಲ್ಲಿಂದ ಸ್ವರ್ಗ ಲೋಕಕ್ಕೆ ಹೋದರು. ಅಲ್ಲಿ ಇಂದ್ರನ ಮಗ ಅನುಜನೊಡನೆ, ಪಾರಿಜಾತದ ಸೇಡು ತೋರಿಸಲು ಸಿದ್ಧನಾಗಿದ್ದನು. ಕೊನೆಗೆ ಸೋತರು. ಇಂದ್ರನು ಬಂದು ಕ್ಷಮೆ ಯಾಚಿಸಿ ಸಾಂಬ, ಪ್ರದ್ಯುಮ್ನರಿಗೆ ಸತ್ಕರಿಸಿ ಕಳಿಸಿದನು. ಅವರು ದ್ವಾರಕೆಗೆ ಬಂದರು.

ಶ್ರೀಕೃಷ್ಣನ ಸಂಸಾರ ಚಿತ್ರ ನೋಡಲು ನಾರದರು ದ್ವಾರಕೆಗ ಬಂದರು. ಶ್ರೀಹರಿಯು ಅನೇಕರ ಮನೆಗಳಲ್ಲಿ, ಅನೇಕ ಕಾರ್ಯಗಳನ್ನು ಮಾಡುತ್ತಿರುವುದನ್ನು ನಾರದರು ಕಂಡು ಬೆರಗಾದರು. ಇಲ್ಲಿ ಶ್ರೀಹರಿಯ ಮಹಿಮೆ ಮತ್ತು ಅಚಿಂತ್ಯ ಶಕ್ತಿ ಪ್ರದರ್ಶಿತವಾಗಿದೆ.

ಅಲ್ಲಿಂದ ನಾರದರು ಪಾಂಡವರ ಹತ್ತಿರ ಬಂದರು. ಬ್ರಹ್ಮನ ಆಜ್ಞೆ ಮತ್ತು ಆದೇಶದಿಂದಲೇ ಬಂದವರು. ಐದುಜನ ಪಾಂಡವರು ದ್ರೌಪದಿ ದೇವಿಯರಲ್ಲಿ ಹೇಗೆ ಸಂಸಾರ ನಡೆಸಿದ್ದಾರೆ? ಎಂಬುದು ಜೊತೆಯಲ್ಲಿ ದ್ರೌಪದಿ ದೇವಿ ಒಬ್ಬಾಕಿಯಲ್ಲಿ ಆಕೆಯ ಶರೀರದಲ್ಲಿ ಇತರ ದೇವತೆಗಳೂ ಇದ್ದಾರೆ ಎಂದು ಹೇಳುವುದೇ ನಾರದರ ಮುಖ್ಯ ಉದ್ದೇಶವಾಗಿತ್ತು.

ನಾರದರು ಬಂದು ಸುಂದೋಪಸುಂದರರ ಕಥೆಯನ್ನು ಹೇಳುತ್ತ ಸ್ತ್ರೀ ವ್ಯಾಮೋಹ ಬಹಳ ಕೆಟ್ಟದು. ಅಂಥ ಪ್ರೇಮದವರು ಕೇವಲ ತಿಲೋತ್ತಮೆ ಕಾರಣದಿಂದ ತಮ್ಮಲ್ಲಿ ತಾವು ಬಡಿದಾಡಿ ಸತ್ತರು. ಕಾರಣ ನೀವು ಒಂದು ನಿಯಮ ಮಾಡಿಕೊಳ್ಳಿರಿ. ವರ್ಷಕ್ಕೊಬ್ಬಬ್ಬರಂತೆ ಸಂಸಾರ ಮಾಡಿರಿ. ಆಗ ಉಳಿದ ದೇವಿಯರ ಸಂಪರ್ಕ ವಿರುವದಿಲ್ಲ. ಈ ಮಧ್ಯೆ ವರ್ಷ ಒಳಗೆ ದಂಪತಿ ಒಂದೆಡೆ ಇದ್ದದ್ದನ್ನು ಇನ್ನೊಬ್ಬರು ನೋಡಿದರೆ ಅವರು ಒಂದು ವರ್ಷ ತೀರ್ಥಯಾತ್ರೆ ಕೈಗೊಳ್ಳಬೇಕು ಎಂದು ಅಪ್ಪಣೆಯಿತ್ತು ಅಲ್ಲಿಂದ ಹೋದರು.

ಒಂದುದಿನ ಧರ್ಮರಾಜನು ಏಕಾಂತದಲ್ಲಿದ್ದಾಗ, ಒಬ್ಬ ಬ್ರಾಹ್ಮಣನು ಆಕಳ ರಕ್ಷಣೆಗಾಗಿ ಕೂಗುತ್ತ ಬಂದನು. ಕ್ಷತ್ರಿಯರು, ಅದರಲ್ಲೂ ರಾಜರು ಗೋ ಬ್ರಾಹ್ಮಣರನ್ನು ರಕ್ಷಿಸುವುದು ಅವರ ಕರ್ತವ್ಯ. ಇತ್ತ ನಿಯಮದ ಒಂದು ಬಂಧನ. ಅರ್ಜುನ ಧರ್ಮ ಸಂಕಟಕ್ಕೆ ಒಳಗಾದನು. ಕೊನೆಗೆ ಕರ್ತವ್ಯ ಮುಖ್ಯವೆಂದು ಶಸ್ತ್ರಾಗಾರದಲ್ಲಿದ್ದ ಬಾಣಗಳನ್ನು ತಂದು ಆಕಳುಗಳನ್ನು ರಕ್ಷಿಸಿ ಬ್ರಾಹ್ಮಣನಿಗೆ ತೃಪ್ತಿ ಬಡಿಸಿದನು. ತಾನು ತೀರ್ಥಯಾತ್ರೆಗೆ ಸಿದ್ಧನಾದನು. ಸಹೋದರರನ ಪ್ರೀತಿಯಿಂದ ಎಲ್ಲರೂ ತಡೆದರು. ಅರ್ಜುನನು ಕೇಳಲಿಲ್ಲ. ಯಾತ್ರೆಗೆ ಹೊರಟೇಬಿಟ್ಟನು.

ಗಂಗಾ ಸ್ನಾನದಲ್ಲಿದ್ದಾಗ, ನಾಗಕನ್ನಿಕೆಯು ಬಂದು ನಾಗಲೋಕಕ್ಕೆ ಕರೆದೊಯ್ದರು. ಅಲ್ಲಿಯ ರಾಜಕನ್ನಿಕೆ ಪುತ್ರನನಿಗಾಗಿ ಅಪೇಕ್ಷಿಸಿದಳು. ತಂದೆಯೂ ಒತ್ತಾಯಿಸಿದನು. ಅರ್ಜುನನು ದೈವೇಚ್ಛೆ ಎಂದು ಪುತ್ರದಾನ ಮಾಡಿದನು. ಅವನೇ 'ಇರಾವಂತ' ಅವನಿಗೆ ತಂದೆಯ ಗುಣ, ತಾಯಿಯಜಾತಿ ಬಂದವು. ಅಲ್ಲಿಂದ ಅರ್ಜುನ ಪಾಂಡ್ಯ ದೇಶಕ್ಕೆಬಂದನು.

ನಾಗಲೋಕದಲ್ಲಿ ಎಲ್ಲರೂ ಸೇರಿ ಇರಾವಂತ ಹುಟ್ಟಿದ್ದು ಧರ್ಮಬಾಹಿರ ಎಂದು ತಾಯಿ ಮಗನನ್ನು ಬಹಿಷ್ಕರಿಸಿ ಹೊರಹಾಕಿದರು. ಆಕೆ ತನ್ನ ಮಗನನ್ನು ಕರೆದುಕೊಂಡು ದೇವಲೋಕಕ್ಕೆ ಹೋಗಿ ಎಲ್ಲ ಸಮಾಚಾರ ಹೇಳಿದಾಗ ಅವಳಿಗೆ ಅಲ್ಲಿ ಆಶ್ರಯ ದೊರೆಯಿತು.

"ಅರ್ಜುನ ಜ್ಞಾನಿಯಿದ್ದ ಕಾರಣ ಕ್ಷುದ್ರ ಅಪರಾಧದ ದೋಷ ಬರಲಿಲ್ಲ" ಪಾಂಡ್ಯದ ರಾಜ ವೀರಸೇನ. ಅವನ ಮಗಳೇ ಚಿತ್ರಾಂಗದೆ. ರಾಜ ಮಗಳನ್ನು ಅರ್ಜುನನಿಗೆ ಕೊಟ್ಟನು. ಅವರ ಉದರದಲ್ಲಿ ಬಭ್ರುವಾಹನ ಹುಟ್ಟಿದನು. ಅಲ್ಲಿಂದ ಅರ್ಜುನನು ಪ್ರಭಾಸ ಕ್ಷೇತ್ರಕ್ಕೆ ಬರುವಾಗ ದಾರಿಯಲ್ಲಿ ಸ್ನಾನ ಮಾಡುವಾಗ ಐದು ಮೊಸಳೆಗಳು ಅರ್ಜುನನ ಕಾಲನ್ನು ಹಿಡಿದು ಎಳೆದವು. ಬಲದಿಂದ ಅವುಗಳನ್ನು ಕಿತ್ತು ಹೊರ ಒಗೆದನು. ಕೂಡಲೇ ಆ ಮೊಸಳೆಗಳು ಅಪ್ಸರೆಯರಾದರು. ಶಾಪ ವಿಮೋಚನೆ ಆಯಿತು. ಅದರ ಕಾರಣಗಳನ್ನು ಕೊಡಲಾಗಿದೆ.

ಅರ್ಜುನ ಪ್ರಭಾಸ ಕ್ಷೇತ್ರಕ್ಕೆ ಬಂದನು. ಕೃಷ್ಣನ ಸಲಹೆಯಂತೆ ಅರ್ಜುನನು ಯತಿಯಾದನು. 'ಕುಶಸ್ಥಲೀ' ಹತ್ತಿರ ವಾಸ ಮಾಡಿದನು. ರೈವತ ಪರ್ವತದಲ್ಲಿ ನಿಂತನು. ಬಲರಾಮನು ಯತಿಯನ್ನು ಕಂಡನು. ಅವನ ಮಾತಿಗೆ ಮರುಳಾಗಿ ಯತಿಯನ್ನು ಕರೆದು ತಂದು ಕನ್ಯಾಗಾರ ವಾಸಕ್ಕೆ ಮಾಡಿಕೊಟ್ಟನು. ಸುಭದ್ರೆ ಆತನ ಸೇವೆಗಾಗಿ ನಿಂತಳು. ಚಾತುರ್ಮಾಸ್ಯ ವ್ರತ ಪ್ರಾರಂಭ ಆಯಿತು. ಪ್ರಾರಂಭದಲ್ಲಿ ಕೃಷ್ಣನು ತಡೆದಂತೆ ಮಾಡಿ ಸುಮ್ಮನಾದನು.

ಒಮ್ಮೆ ಎಲ್ಲರೂ "ಪಿಂಡೋದ್ಧಾರ' ಕ್ಷೇತ್ರಕ್ಕೆ ಹೋದರು. ಅಲ್ಲಿ ಉತ್ಸವ ನಡೆದಿತ್ತು. ಮನೆಯಲ್ಲಿ ಯಾರೂ ಇರಲಿಲ್ಲ. ಕೇವಲ ಸುಭದ್ರೆ ಮತ್ತು ಯತಿಗಳು ಮಾತ್ರ ಇದ್ದರು.

ಸುಭದ್ರೆಯು ಯತಿಗಳನ್ನು ಕುರಿತು ನಿಮ್ಮ ಸಂಚಾರದಲ್ಲಿ ಪಾಂಡವರು ಕಂಡಿದ್ದಾರೆ. ಈಗ ಅವರು ಎಲ್ಲಿದ್ದಾರೆ? ಎಂದು ಕೇಳಿದಾಗ ವೇಷಧಾರಿಯಾದ ಅರ್ಜುನನು, ನಾನು ಎಲ್ಲರನ್ನು ಬಲ್ಲೆ. ಬಹಳ ದಿನಗಳ ಒರೆಗೆ ಅರ್ಜುನನೊಡನೆ ಇದ್ದೆ ಎಂದು, ಅವರು ಈಗ ಕ್ಷೇಮದಿಂದ ಇದ್ದಾರೆಂದು 'ಓಂ' ಎಂಬ ಶಬ್ದದಿಂದ ಸೂಚಿಸಿದನು. ಅವರಲ್ಲಿ ಅರ್ಜುನನು ತೀರ್ಥಯಾತ್ರೆಗೆ ಹೋಗಿದ್ದಾನೆಂದು, ಸುಭದ್ರೆ ಕೇಳಿದಾಗ, ಅದಕ್ಕೆ ಯತಿ ಪುನಃ ಸಮ್ಮತಿಸಿದನು. ಸುಭದ್ರೆ ಕುತೂಹಲಳಾಗಿ, ಆತನು ಈಗ ಎಲ್ಲಿ? ಎಂದು ಆತುರದಿಂದ ಪ್ರಶ್ನಿಸಿದಳು. ಅದಕ್ಕೆ ಯತಿ ಇಲ್ಲೆ, ಎಂದು ಹೇಳುತ್ತ, ನಾನೇ ಅರ್ಜುನನು. 'ನಿನ್ನನ್ನು ಮದುವೆಯಾಗಲಿ ಎಂದೇ ಬಂದೆ. ಗಾಂಧರ್ವ ವಿಧಿಯಿಂದ ವಿವಾಹ ಆಗೋಣ'

ಎಂದು ಹೇಳಿದಾಗ ಸುಭದ್ರೆ ಒಪ್ಪಲಿಲ್ಲ. ತಡೆದಳು. ಮದುವೆಗೆ ಒಪ್ಪಿಗೆಯಿದೆ. ಆದರೆ ತಂದೆ, ತಾಯಿ, ಬಂಧು ಬಳಗ ಅವಶ್ಯ ಎಂದು ಹೇಳಿದಾಗ, ಅರ್ಜುನನು ಶ್ರೀಕೃಷ್ಣನನ್ನು ಸ್ಮರಿಸಿದನು. ಸುಭದ್ರೆಯ ಮಾತುಗಳಿಂದ, ಸನಾತನ ಮತ್ತು ಭಾರತೀಯ ಸಂಸ್ಕೃತಿ ವ್ಯಕ್ತವಾಗುತ್ತದೆ.

ಶ್ರೀಕೃಷ್ಣನು ರಾತ್ರಿಯಲ್ಲಿಯೇ ಬಂದು, ಎಲ್ಲರನ್ನು ಕರೆಯಿಸಿ, ಅಂದಿನ ರಾತ್ರಿಯಲ್ಲಿಯೇ ಮದುವೆ ಮಾಡಿ ಹೊರಟುಹೋದನು. ಹೋಗುವಾಗ ಅರ್ಜುನ ನಿಗಾಗಿ ತನ್ನ ರಥವನ್ನೇ ಬಿಟ್ಟು ಹೊರಟನು.

ಬೆಳಿಗ್ಗೆ ಯತಿ, ಅರ್ಜುನನಾಗಿ, ಸುಭದ್ರೆಯಿಂದ ಕೂಡಿ– ರಥವೇರಿ ಹೊರಡಲು ಸಿದ್ಧನಾದನು. ಸುಭದ್ರಾ ಕಲ್ಯಾಣ ಮುಗಿಯಿತು.

ಇದನ್ನು ಆಧ್ಯಾತ್ಮದ ದೃಷ್ಟಿಯಿಂದ ಸುಂದರವಾದ ಹೋಲಿಕೆಯಿಂದ ಹಿಂದಿನ ಪುಟಗಳಲ್ಲಿ ವಿವರಿಸಲಾಗಿದೆ.

ರಥದಲ್ಲಿ ಸಿದ್ಧನಾದ ಅರ್ಜುನನನ್ನು 'ವಿಪ್ರಥು' ಮುಂತಾದವರು ತಡೆದರೂ, ಯಾರನ್ನು ಲೆಕ್ಕಿಸದೆ, ಅರ್ಜುನನು ಸುಭದ್ರೆಯೊಡನೆ ಹೋಗಿಯೇಬಿಟ್ಟನು.

ಇದನ್ನು ತಿಳಿದ ಬಲರಾಮನು ಕೋಪಾವಿಷ್ಟನಾದನು. ಎಲ್ಲರನ್ನು ಕರೆಸಿ ಆಲೋಚಿಸಿದನು. ಕೆಲವರು ಅರ್ಜುನನನ್ನು ಕೊಂದು, ಇಲ್ಲವೇ ಸೋಲಿಸಿ ಸುಭದ್ರೆಯನ್ನು ತಿರುಗಿ ತರಲು ಸಿದ್ಧರಾದರು. ಆಗ ಶ್ರೀಕೃಷ್ಣನು ಬಂದು, ಮನೆತನದ ಗೌರವ, ಸಮಾಜದ ಸಂಪ್ರದಾಯ, ಜೊತೆಯಲ್ಲಿ ಪಾಂಡವರ ಶ್ರೇಷ್ಠತೆ ಮತ್ತು ಕೀರ್ತಿ ಎಲ್ಲವನ್ನು ಹೇಳಿ, ಅರ್ಜುನನಿಗೆ ಕನ್ಯೆಯನ್ನಿತ್ತು ಮದುವೆ ಮಾಡಲು ಹೇಳಿದನು. ಆಗ ಬಲರಾಮನಿಗೆ ಜ್ಞಾನೋದಯವಾಗಿ, ಶ್ರೀಕೃಷ್ಣನ ಮಹಿಮೆಯನ್ನರಿತು ಒಪ್ಪಿಕೊಂಡು ಮದುವೆ ಮಾಡಿಕೊಟ್ಟನು.

ಅರ್ಜುನನು ಎಲ್ಲರ ಸಮ್ಮುಖದಲ್ಲಿ ತೀರ್ಥಯಾತ್ರೆಯ ವಿವರವನ್ನು ವಿಸ್ತಾರ ವಾಗಿ ಹೇಳಿದನು. ಎಲ್ಲರೂ ಇದು ಭಗವತ್ ಸಂಕಲ್ಪ. ಆತನ ಲೀಲೆ ಎಂದು ನಂಬಿ ಸಂತುಷ್ಟರಾದರು.

ದ್ರೌಪದಿದೇವಿಯ ಹೊಟ್ಟೆಯಲ್ಲಿ ಐದು ಜನ ಮಕ್ಕಳಾದರೂ, ಅವರೆಲ್ಲರೂ ಪ್ರಸಿದ್ಧರೆ. ತಮ್ಮ ತಮ್ಮ ತಂದೆಯರ ಗುಣ ಸ್ವಭಾವಗಳನ್ನು ಪಡೆದಿದ್ದರು.

ಸುಭದ್ರೆಯಲ್ಲಿ 'ಅಭಿಮನ್ಯು' ಆತನಲ್ಲಿ ಅನೇಕ ದೇವತೆಗಳ ಆವೇಶ, ಕೃಷ್ಣನ ಸನ್ನಿಧಾನ. ಹಾಗಾಗಿ ಬಹುಪ್ರಸಿದ್ಧನಾದನು. ವೀರನು ಮತ್ತು ಸುಂದರನು ಕೂಡ.

ಶ್ರೀಕೃಷ್ಣನು, ಪಾಂಡವರ ಹತ್ತಿರ ಇದ್ದಾಗಲೇ, ಒಂದು ದಿನ ಅರ್ಜುನ ಸುಭದ್ರೆ ಮತ್ತು ಸತ್ಯಭಾಮೆಯನ್ನು ಕೂಡಿಕೊಂಡು ವಿಹಾರಕ್ಕೆಂದು ಹೊರಟನು. ಸುಂದರ, ಪ್ರಶಾಂತವಾದ ಸಮಯ ಪಕ್ಕದಲ್ಲಿ ನದಿ. ಇನ್ನೇನು ಸ್ನಾನಕ್ಕೆ ನದಿಯಲ್ಲಿ ಇಳಿಯಬೇಕು. ಅಷ್ಟರಲ್ಲಿ ಒಬ್ಬ ವಿಪ್ರನು ಬಂದು ಆಹಾರಕ್ಕಾಗಿ ಯಾಚಿಸಿದನು. ಕೃಷ್ಣನ ಅನುಮತಿಯಿಂದ ಅರ್ಜುನನು ಆಹಾರ ಒದಗಿಸಲು ವಚನ ಇತ್ತು, ಬ್ರಾಹ್ಮಣನ ಅಪೇಕ್ಷೆಯನ್ನು ಕೇಳಿದನು.

ಆಗ ಬ್ರಾಹ್ಮಣನು ತನ್ನ ನಿಜರೂಪ ತೋರಿ ನಾನು ಅಗ್ನಿಯು, ನನ್ನ ಆರೋಗ್ಯ ಚೆನ್ನಾಗಿಲ್ಲ. ಕೃಶನಾಗಿದ್ದೇನೆ ಎಂದು ಹೇಳುತ್ತ ತನ್ನ ಹಿಂದಿನ ಎಲ್ಲ ವೃತ್ತಾಂತವನ್ನು ವಿವರಿಸಿದ್ದಾನೆ. ಈ ಖಾಂಡವ ವನವನ್ನು ತಿಂದರೆ, ಅಲ್ಲಿಯ ಗಿಡಮೂಲಿಕೆಗಳಿಂದ ನನ್ನ ರೋಗ ನೀಗಿ ಆರೋಗ್ಯ ಪ್ರಾಪ್ತಿಯಾಗುತ್ತದೆ. ಆದರೆ ಇದು ಇಂದ್ರನ ವನ. ಅವನು ಅಡ್ಡಿಯಾಗುತ್ತಾನೆಂದು ಹೇಳಿದಾಗ, ಅರ್ಜುನನಿಗೆ ಕೊಟ್ಟ ಮಾತನ್ನು ಪಾಲಿಸಲೇಬೇಕಾಗಿತ್ತು. ಅದಕ್ಕೆ ಅರ್ಜುನನು ಇಂದ್ರನೊಡನೆ ಯುದ್ಧ ಮಾಡುತ್ತೇನೆ. ಆದರೆ ಬಿಲ್ಲುಬಾಣಗಳಿಲ್ಲ. ರಥವಿಲ್ಲ, ಎಂದು ಹೇಳಿದಾಗ ಆ ವಿಪ್ರನು ಕೃಷ್ಣಾರ್ಜುನರಿಗೆ ಆಯುಧಗಳನ್ನು ಸಂಗ್ರಹಿಸಿ ತಂದು ಒಪ್ಪಿಸಿದನು. ಇದರ ವರ್ಣನೆ ವಿಸ್ತಾರವಾಗಿ ಬಂದಿದೆ.

ಅರ್ಜುನನು ಯಾರಿಗೂ ಪ್ರವೇಶವಿಲ್ಲದಂತೆ ವನದ ಸುತ್ತಲೂ ಬಾಣಗಳ ಗೋಡೆಯನ್ನೇ ನಿರ್ಮಿಸಿದನು. ಅಗ್ನಿಗೆ ಅಪ್ಪಣೆಯಿತ್ತನು. ಅಗ್ನಿಯು ಕೂಡ ವನ ಭಕ್ಷಣೆಗೆ ಪ್ರಾರಂಭಿಸಿದನು. ದೇವೇಂದ್ರನು ಇದನ್ನು ಕೇಳಿ ತಡೆಯಲು ಬಂದನು. ಅಗ್ನಿಯನ್ನು ಆರಿಸಲೆಂದು ಮೋಡಗಳಿಗೆ ಮಳೆ ಸುರಿಸಲು ಅಪ್ಪಣೆಯಿತ್ತನು. ರಭಸವಾದ ಮಳೆ, ಅಗ್ನಿ ನೊಂದುವ ಪ್ರಸಂಗ. ಆಗ ಅರ್ಜುನನು, ಅಸ್ತ್ರಗಳ ಪ್ರಯೋಗದಿಂದ ಮೋಡಗಳನ್ನೇ ಚದುರಿಸಿದನು.

ಇಂದ್ರನು ಕೃಷ್ಣಾರ್ಜುನರಲ್ಲಿರುವ ಸ್ನೇಹವನ್ನು ಕಂಡನು. ಹತ್ತಿರದಲ್ಲಿದ್ದ ಉಪೇಂದ್ರನು ಇದನ್ನು ಈಕ್ಷಿಸಿದನು. ಬ್ರಹ್ಮ ರುದ್ರಾದಿಗಳು, ಶ್ರೀಕೃಷ್ಣನಿಗೆ ನಮಿಸಿ ಸ್ತುತಿಸಿದರು. ತಮ್ಮ ತಮ್ಮ ಅನೇಕ ಅಸ್ತ್ರಗಳನ್ನು ಅರ್ಜುನನಿಗೆ ಕೊಡಲು ನಿಶ್ಚಯಿಸಿದರು. ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ಯುದ್ಧದ ನಾಟಕ ಮುಗಿಯಿತು.

ಖಾಂಡವ ವನ ಸಂಪೂರ್ಣ ದಹಿಸಿತು. ಕೇವಲ ನಾಲ್ಕು ಪಕ್ಷಿಗಳು, ಅಶ್ವಸೇನ ಮತ್ತು ಮಯ ಇವರು ಮಾತ್ರ ಉಳಿದುಕೊಂಡರು.

ಪಕ್ಷಿಗಳು ಅಗ್ನಿಯನ್ನು ಕುರಿತು ಕುರಿತು ಸ್ತುತಿಸಿದವು. ಅಗ್ನಿ ಸಂತುಷ್ಟನಾಗಿ ಅವುಗಳನ್ನು ತಿನ್ನಲಿಲ್ಲ.

ಅಶ್ವಸೇನ ತಕ್ಷಕನ ಮಗನು. ತಾಯಿಯನ್ನು ಗಟ್ಟಿಯಾಗಿ ಅಪ್ಪಿಕೊಂಡಿದ್ದನು. ಅರ್ಜುನನ ಬಾಣದಿಂದ ತಾಯಿ ಸತ್ತು ಕೆಳಗೆ ಬಿದ್ದಿತು. ಅಶ್ವಸೇನನ ಬಾಲ ಮಾತ್ರ ಕತ್ತರಿಸಿತು. ಸಾಯಲಿಲ್ಲ. ತಾಯಿಯನ್ನು ಕಳಕೊಂಡದ್ದು ಒಂದು, ಬಾಲ ಕತ್ತರಿಸಿ ಅಪಮಾನ ಆದದ್ದೊಂದು ಈ ರೀತಿ ದ್ವಿಗುಣ ಕೋಪ ಅರ್ಜುನನ ಮೇಲುಂಟಾಯಿತು. ಸೇಡನ್ನು ತೀರಿಸುವುದಕ್ಕಾಗಿ ಅರ್ಜುನನ್ನು ಕೊಲ್ಲಲೇಬೇಕೆಂದು ಅವನು ಕರ್ಣನ ಬಾಣಗಳ ಬತ್ತಳಿಕೆಯಲ್ಲಿ ತಾನೂ ಒಂದು ಬಾಣವಾಗಿ ಸೇರಿಕೊಂಡನು.

ಶ್ರೀಕೃಷ್ಣನು ಚಕ್ರಪಾಣಿಯಾಗಿರುವುದನ್ನು ಮಯಾಸುರನು ಕಂಡನು. ತನಗೆ ಉಳಿಗಾಲವಿಲ್ಲೆಂದು, ಜೀವದ ರಕ್ಷಣೆಗಾಗಿ ಅರ್ಜುನನಿಗೆ ಮೊರೆ ಹೊಕ್ಕನು. ಅರ್ಜುನನ ಪ್ರಾರ್ಥನೆಯ ಮೇರೆಗೆ ರಮೇಶನು ಮಯನನ್ನು ಬಿಟ್ಟುಬಿಟ್ಟನು.

ಪ್ರಾಣವನ್ನು ರಕ್ಷಿಸಿದೆ. ನಿನಗೆ ನಾನು ಏನು ಪ್ರತ್ಯುಪಕಾರ ಮಾಡಬಲ್ಲೆ? ಎಂದು ಮಯನು ಕೇಳಿದಾಗ, ಅರ್ಜುನನು, ಇದು ಶ್ರೀಕೃಷ್ಣನ ಅನುಗ್ರಹದಿಂದ ಆದದ್ದು ಆತನನ್ನೇ ಕೇಳು ಎಂದು ಉತ್ತರವಿತ್ತನು. ಅಲ್ಲಿಯೇ ಇದ್ದ ಶ್ರೀಕೃಷ್ಣನು ಧರ್ಮರಾಜನಿಗಾಗಿ ಒಂದು ಒಳ್ಳೆಯ ಮತ್ತು ವಿಚಿತ್ರವಾದ ಸಭಾಭವನವನ್ನು ನಿರ್ಮಿಸು ಎಂದು ಆಜ್ಞೆಯಿತ್ತನು.

ಮುಂದೆ ಅಗ್ನಿಗೆ ತೃಪ್ತಿಯಾಗಲಿಲ್ಲ. ಕೃಷ್ಣಾರ್ಜುನರು ಅವುಗಳಿಗೆ ಹೊರಗೆ ಬಿಡಲಿಲ್ಲ. ಪರಿಣಾಮವಾಗಿ ಅವೂ ಬಿದ್ದು ಸತ್ತವು. ಅಗ್ನಿಯು ಅವುಗಳನ್ನು ತಿಂದು ತೃಪ್ತನಾದನು.

ಖಾಂಡವ ವನದ ಸಮಾಚಾರ ಅರಿತ ಎಲ್ಲ ಪಾಂಡವರು ಸಂತುಷ್ಟರಾದರು. ಅನಂತ ಶಕ್ತಿ, ಸಾಮರ್ಥ್ಯ ಹೊಂದಿ ಶ್ರೀಕೃಷ್ಣನು ಪಾಂಡವರ ಜೊತೆಯಲ್ಲಿಯೇ ಕೆಲವು ದಿನ ಕಾಲ ಕಳೆದನು.

ಇಲ್ಲಿಗೆ ಅಧ್ಯಾಯ ಇಪ್ಪತ್ತು ಮುಗಿಯಿತು.

ಶ್ಯಾಂಡಿಲ್ಯ ಗೋತ್ರೋತ್ಪನ್ನ, ಸಜ್ಜನಸೇವಾಸಕ್ತ
ಶ್ರೀ ಹನುಮಂತಾರ್ಯರ ಸುತ, ರಾಘವೇಂದ್ರಶರ್ಮ
ಇದನ್ನು ಕನ್ನಡೀಕರಿಸಿ, ಗದುಗಿನ ವೀರನಾರಾಯಣನಿಗೆ ಅರ್ಪಿಸಿದ್ದಾನೆ.
ನಾರಾಯಣನು ಇದನ್ನು ಸ್ವೀಕರಿಸಿ ಕರುಣಿಸಲಿ

ಶ್ರೀಕೃಷ್ಣಾರ್ಪಣಮಸ್ತು ಶ್ರೀಮಧ್ವೇಶಾರ್ಪಣಮಸ್ತು

ಕಲ್ಬುರ್ಗಿ
೧೦-೨-೧೯೯೨

## ‘ಭಾರತ ಪ್ರಕರಣ’ದ ಆಧಾರಿತ ಗ್ರಂಥಗಳು

೧. ಶ್ರೀ ನಾರಾಯಣ ತಂತ್ರಿಯವರ ಮೂಲ ಕನ್ನಡ ಅನುವಾದ, ಉಡುಪಿ ಪ್ರಕಾಶನ
೨. ಶ್ರೀ ಜನಾರ್ದನ ಭಟ್ಟ ವಿರಚಿತ ಪದಾರ್ಥ ದೀಪಿಕಾ (ಸಂಸ್ಕೃತ)
೩. ಮಹಾಭಾರತ ತಾತ್ಪರ್ಯ ನಿರ್ಣಯ ಭಾವಸಂಗ್ರಹ ಭಾಗ ೧, ೨,
ಅನುವಾದಕರು ರಾಜಾ ಶ್ರೀ ಗುರುರಾಜಾಚಾರ್ಯ ನಂಜನಗೂಡು.
೪. ಶ್ರೀ ಶ್ರೀ ವಾದಿರಾಜ ಸ್ವಾಮಿಗಳ ಕನ್ನಡಾನುವಾದ ಗದ್ಯ
೫. ಪಂ. ಶ್ರೀ ಜಯತೀರ್ಥಾಚಾರ್ಯ ಕೊರ್ಲಹಳ್ಳಿ ಇವರಿಂದ ಅನುವಾದಿತ ಪುಷ್ಪಗಳು
ಮಧ್ವಸಿದ್ಧಾಂತ ಪ್ರಕರಣ
೬. ತತ್ವವಾದದಲ್ಲಿ ಬಂದಿರುವ ಬಿಡಿ ಲೇಖನಗಳು.

## ಇದೇ ಲೇಖಕರ ಇತರ ಕೃತಿಗಳು

| | | |
|---|---|---|
| ೧. | ಕ್ಷೇತ್ರದರ್ಶನ ಭಾಗ ೧, ೨ | ೩೦—೦೦ |
| ೨. | ಹರಿಕಥಾಮೃತಸಾರ ಪ್ರವೇಶಿಕೆ (ಲೌಕಿಕ ದೃಷ್ಟಿಯಿಂದ) | ೧೬—೦೦ |
| ೩. | ಮಹಾಭಾರತ ತಾತ್ಪರ್ಯನಿರ್ಣಯ ಸೈದ್ಧಾಂತಿಕ ಪ್ರಕರಣ ಅ. ೧೩ | ೧೫—೦೦ |
| ೪. | ಮಹಾಭಾರತ ರಾಮಾಯಣ ಪ್ರಕರಣ ಅ. ೪ ರಿಂದ ೯ | ೩೦—೦೦ |
| ೫. | ಮಹಾಭಾರತ ರಾಮಾಯಣ ವ್ಯಾಸಾವತಾರ ಅ. ೧೧ ಮಾತ್ರ | ೧೦—೦೦ |
| ೬. | ಅಧ್ಯಾತ್ಮ ಸಂಜೀವಿನಿ | ೧೦—೦೦ |
| ೭. | ಮಳಖೇಡದ ಜಯತೀರ್ಥರು | ೩—೦೦ |
| ೮. | ಅಣು ಭಾಗವತ | ೦—೭೫ |
| ೯. | ಸೀತಾದರ್ಶನ (ಸುಂದರಕಾಂಡ) | ೧—೦೦ |
| ೧೦. | ಶ್ರೀರಾಮ ಚರಿತಾಮೃತ | ೧—೫೦ |
| ೧೧. | ಶ್ರೀನಿವಾಸ ಕಲ್ಯಾಣ | ೧—೦೦ |
| ೧೨. | ಗೋಪೀಗೀತ, ಕನ್ನಡ ಭಾವಾನುವಾದ (ಪದ್ಯ) | ೦—೫೦ |
| ೧೩. | ಭಕ್ತ ಕುಸುಮಾಂಜಲಿ (ಕವಿತೆಗಳು) | ೧—೦೦ |

## ಮುಂಬರುವ ಕೃತಿಗಳು, ಬರೆದು ಸಿದ್ಧವಾಗಿವೆ

೧. ಮಹಾಭಾರತ ತಾತ್ಪರ್ಯ ನಿರ್ಣಯ ಭಾರತ ಪ್ರಕರಣ ಭಾಗ ೬, ೭, ೮
೨. ಶ್ರೀ ವಿಷ್ಣುಸಹಸ್ರನಾಮ ಭಾಗ ೧, ೨, ೩, ೪ (ಅರ್ಥಕೋಶ)
೩. ಹರಿಕಥಾಮೃತಸಾರ ಚಿಂತನ (ಅಧ್ಯಾತ್ಮ ದೃಷ್ಟಿಕೋನ) ಭಾಗ ೧, ೨, ೩, ೪, ೫.
೪. ಯುಕ್ತಿ ಮಲ್ಲಿಕಾ ಪ್ರಥಮ ಸೌರಭ
೫. ಬ್ರಹ್ಮಕಾಂಡ – ಗರುಡ ಪುರಾಣದ ಒಂದು ಭಾಗ
೬. ಮಹಾಭಾರತದಲ್ಲಿ ಮಾನವೀಯ ಮೌಲ್ಯಗಳು
೭. ಶ್ರೀ ಚಂದ್ರಲಾ ದೇವಿ ಪುರಾಣ

# ಓದುಗರ ಅಭಿಪ್ರಾಯಗಳು

ಭೀಷ್ಮ, ದ್ರೋಣ, ಅಶ್ವತ್ಥಾಮರು ನಮ್ಮ ದೃಷ್ಟಿಯಲ್ಲಿ ಎಷ್ಟೇ ಎತ್ತರವಾದರೂ, ತಾರತಮ್ಯದಲ್ಲಿ ಶ್ರೀಕೃಷ್ಣನಿಗಿಂತ ಎಷ್ಟೋ ದೂರದಲ್ಲಿ ಎಷ್ಟೋ ಕೆಳಗಿದ್ದಾರೆನ್ನುವದು ಸ್ಪಷ್ಟವಿದೆ.

ದ್ರೋಣರ ಪಾತ್ರ ಅವರ ಜಾತಕವನ್ನೇ ಕೊಟ್ಟು, ಸರಳ ಭಾಷೆಯಲ್ಲಿ ವಿವರಿಸುವಾಗ ಎಂತಹ ಆದರ್ಶ ಗುರು ಕೈಚಾಚಿದ, ಆಯಾಚಿತರ ಧರ್ಮಕ್ಕೆ ಪುತ್ರಮೋಹವು ಹೇಗೆ ತೊಡಕಾಯಿತು ಎಂಬುದನ್ನು ಸಂಕ್ಷಿಪ್ತ ವಿವರಿಸಿದ್ದಾರೆ.

ಭೀಷ್ಮರ ಚರಿತ್ರೆ ಪೂರ್ವೇತಿಹಾಸ ಕೊಟ್ಟು ಏಕೆ ಹೀಗಾಯಿತು? ಏಕೆ ಹಾಗೆ ಮಾಡಿದರು? ಎನ್ನುವುದನ್ನು ಎಲ್ಲರಿಗೂ ಅರ್ಥವಾಗುವಂತೆ ಹೇಳಿ, ಎಲ್ಲಕ್ಕೂ ಕಾರಣವುಂಟು. ಕಾರಣವಿಲ್ಲದೆ ಕಾರ್ಯವಿಲ್ಲ ಎಂದು ತೋರಿಸಿದಾಗ ಓದುಗರಿಗೆ ಆಶ್ಚರ್ಯ ಮತ್ತು ಸಂತೋಷಗಳು ಏಕಕಾಲದಲ್ಲಿ ಆಗುತ್ತವೆ.

ಒಟ್ಟಿನಲ್ಲಿ ಶ್ರೀ ಕುಲಕರ್ಣಿಯವರ ಬರಹದಲ್ಲಿ ಯಾರಿಗೆ ಏನು ಹೇಳಬೇಕು ಹೇಗೆ ಹೇಳಬೇಕು ಅದರಲ್ಲೂ ಈ ಕಾಲದ ಯುವಕರಿಗೆ, ಎನ್ನುವುದು ಚೆನ್ನಾಗಿ ಮೂಡಿದೆ.

**ಗೋಪೀನಾಥ ಕಲ್ಯಾಣಿ**, *ತ್ಯಾಗರಾಜನಗರ, ಬೆಂಗಳೂರು*

ಮಾನ್ಯರೇ

ಶ್ರೀಮಾನ್ ಮಧ್ವಶಾಸ್ತ್ರಗಳನ್ನು ಪಂಡಿತರಾದ ಶ್ರೀ ದಾಮೋದರಾಚಾರ್ಯ ಉಮರ್ಜಿ ಯವರಲ್ಲಿ ಓದುತ್ತಿದ್ದೇನೆ.

ಪ್ರೊ. ಉಮರ್ಜಿ ಆಚಾರ್ಯರು, ತಾವು ಕನ್ನಡಕ್ಕೆ ಅನುವಾದ ಮಾಡಿರುವ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥವನ್ನು ಕೊಟ್ಟು ಉಪಕಾರ ಮಾಡಿದ್ದಾರೆ.

ತಮ್ಮ ಭಾಷಾಂತರ ಅನುವಾದ ತುಂಬ ಸುಂದರವಾಗಿದೆ. ಶ್ರೀ ಸಾಮಾನ್ಯನಿಗೂ ಶ್ರೀಮನ್ ಮಧ್ವಶಾಸ್ತ್ರವನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡಿದೆ.

ಸಂಸ್ಕೃತ ಬಾರದ ನನ್ನಂಥವರಿಗೆ ನಿಮ್ಮ ಅನುವಾದಗಳು ಸಹಾಯ ಮಾಡಿ ಶ್ರೀಮಧ್ವಶಾಸ್ತ್ರದ ಅಭ್ಯಾಸಕ್ಕೆ ನೆರವಾಗಿವೆ. ಸುಮಾರು ೫೦ ವರ್ಷಗಳ ಹಿಂದೆ ಪೂಜ್ಯರಾದ ಪಂಡಿತ ನಾರಾಯಣ ತಂತ್ರಿಗಳು ಮಾಡಿದ ಅನುವಾದ ನೋಡಿದ ಮೇಲೆ, ಸರಳವಾದ ಸುಂದರವಾದ ತಮ್ಮ ಅನುವಾದ ಸಂತೋಷ ಕೊಟ್ಟಿದೆ.

**ನಾರಾಯಣರಾವ್ ಹಂದಿಗೋಳ**, *ಅನಗೋಳ, ಬೆಳಗಾವಿ*

ಸನ್ಮಾನ್ಯ ಬಂಧುಗಳಾದ ಪಂಡಿತ ಕುಲಕರ್ಣಿಯವರಿಗೆ,

ಆನಂದತೀರ್ಥ ನಾಗಸಂಪಿಗಿಯವರ ಆದರ ಪೂರ್ವಕ ನಮಸ್ಕಾರಗಳು.

ತಮ್ಮ ಪುಸ್ತಕವನ್ನು ಅಲ್ಲಲ್ಲಿ ನೋಡಿದೆ. ತುಂಬ ಉಪಯುಕ್ತವಾದ ಅಂಶಗಳನ್ನೊಳಗೊಂಡು ನವೀನ ನಿರೂಪಣ ಶೈಲಿಯಲ್ಲಿ ಎಲ್ಲ ವರ್ಗಕ್ಕೂ ಇದು ಸಂಗ್ರಾಹ್ಯವಾಗಿದೆ.

ವಯೋವೃದ್ಧರೂ, ಜ್ಞಾನವಂತರೂ ಆದ ತಮ್ಮಿಂದ ಇನ್ನೂ ಹೆಚ್ಚಿನ ಮಾಹಿತಿಗಳನ್ನೊಳ– ಗೊಂಡ ಹೊತ್ತಿಗೆಗಳು ಬರಲೆಂದು ದೇವರಲ್ಲಿ ಪ್ರಾರ್ಥಿಸುವೆ.

**ಆನಂದತೀರ್ಥಾಚಾರ್ಯ ನಾಗಸಂಪಿಗಿ**

*ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾಲಯ*

ಮುದ್ರಣ : ವಿಕ್ರಮ ಕಂಪ್ಯೂಟರ್ಸ್, ಗದಗ– ೫೮೨ ೧೦೧